# ಕನ್ನಡ ಕಥಾ ಸಾಹಿತ್ಯದಲ್ಲಿ ಸಮಾಜ ಸ್ವರೂಪ

(ತೇಜಸ್ವಿ, ಲಂಕೇಶ, ಅನಂತಮೂರ್ತಿಯವರನ್ನು ಅನುಲಕ್ಷಿಸಿ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿರುವ ಮಹಾಪ್ರಬಂಧ



ಸಂಶೋಧಕರು

**ಶಿವಕುಮಾರ. ಡಿ.ಸಿ.**

(ನೋಂದಣಿ ಸಂಖ್ಯೆ : ೧೬೨೦೦೧೦೨೦೦೭೧)

ಮಾರ್ಗದರ್ಶಕರು

**ಡಾ. ವೆಂಕಟಪ್ಪ**

ಕನ್ನಡ ಪ್ರಾಧ್ಯಾಪಕರು,

ಎಸ್.ಎಲ್.ಎನ್.ಕಾಲೇಜು, ಕೋಟೆ, ಬೆಂಗಳೂರು-೫೬೦೦೦೨.




ಭಾಷಾ ನಿಕಾಯ

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

**ಕನ್ನಡ ವಿಶ್ವವಿದ್ಯಾನಿಲಯ, ಹಂಪಿ**

ವಿದ್ಯಾರಣ್ಯ-೫೮೩೨೭೬.

**ಮಾನ್ಯತಾ ಸಂಸ್ಥೆ**

ಕನ್ನಡ ಸಾಹಿತ್ಯ ಪರಿಷತ್ತು,

ಚಾಮರಾಜಪೇಟೆ, ಬೆಂಗಳೂರು - ೫೬೦೦೧೮

೨೦೧೯

# ಪ್ರಮಾಣ ಪತ್ರ

**ಕನ್ನಡ ಕಥಾ ಸಾಹಿತ್ಯದಲ್ಲಿ ಸಮಾಜ ಸ್ವರೂಪ (ತೇಜಸ್ವಿ, ಲಂಕೇಶ, ಅನಂತಮೂರ್ತಿಯವರನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಮಹಾ ಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ, ಮಾನ್ಯತಾ ಸಂಸ್ಥೆ, ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು, ಡಾ. ವೆಂಕಟಪ್ಪ, ಕನ್ನಡ ಪ್ರಾಧ್ಯಾಪಕರು, ಎಸ್.ಎಲ್.ಎನ್. ಕಾಲೇಜು, ಕೋಟೆ, ಬೆಂಗಳೂರು, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.


**(ಶಿವಕುಮಾರ ಡಿ.ಸಿ.)**
ಸಂಶೋಧಕರು,
ಮಾನ್ಯತಾ ಸಂಸ್ಥೆ,
ಕನ್ನಡ ಸಾಹಿತ್ಯ ಪರಿಷತ್ತು,
ಚಾಮರಾಜಪೇಟೆ, ಬೆಂಗಳೂರು.


ದಿನಾಂಕ : 7/9/2019
ಸ್ಥಳ : ಬೆಂಗಳೂರು.

# ಮಾರ್ಗದರ್ಶಕರ ದೃಢೀಕರಣ ಪತ್ರ

**ಕನ್ನಡ ಕಥಾ ಸಾಹಿತ್ಯದಲ್ಲಿ ಸಮಾಜ ಸ್ವರೂಪ (ತೇಜಸ್ವಿ, ಲಂಕೇಶ, ಅನಂತಮೂರ್ತಿ ಯವರನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಮಹಾ ಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ, ಮಾನ್ಯತಾ ಸಂಸ್ಥೆ, ಕನ್ನಡ ಸಾಹಿತ್ಯ ಪರಿಷತ್ತಿನ ಮೂಲಕ, ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿರುತ್ತಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

(ಡಾ. ವೆಂಕಟಪ್ಪ)

ಮಾರ್ಗದರ್ಶಕರು

**ಡಾ|| ವೆಂಕಟಪ್ಪ**
**ಕನ್ನಡ ಉಪನ್ಯಾಸಕರು**
**ಎಸ್.ಎಲ್ ಎಸ . ಕಾಲೇಜು**
**ಕೋಟೆ, ಬೆಂಗಳೂರು-2.**

ದಿನಾಂಕ : 7/9/2019
ಸ್ಥಳ : ಬೆಂಗಳೂರು

## ಪರಿವಿಡಿ

# ಅಧ್ಯಾಯ–೧

## ಅಧ್ಯಯನದ ಉದ್ದೇಶ, ವ್ಯಾಪ್ತಿ, ಮತ್ತು ವೈಧಾನಿಕತೆ

---

೧.೧. ಪ್ರಸ್ತಾವನೆ

೧.೨. ಸಮಾಜ ಸ್ವರೂಪದ ಅರ್ಥ

೧.೩. ಅಧ್ಯಯನದ ಉದ್ದೇಶ

೧.೪. ಅಧ್ಯಯನದ ಮಹತ್ವ

೧.೫. ಅಧ್ಯಯನದ ವ್ಯಾಪ್ತಿ

೧.೬. ಅಧ್ಯಯನದ ವೈಧಾನಿಕತೆ

೧.೭. ಇದುವರೆಗಿನ ಅಧ್ಯಯನಗಳ ಸಮೀಕ್ಷೆ.

## ಅಧ್ಯಾಯ-೧
## ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವೈಧಾನಿಕತೆ.

### ೧.೧. ಪ್ರಸ್ತಾವನೆ

ಸಾಹಿತ್ಯ ಸಮಾಜದ ಪ್ರತಿಬಿಂಬ. ಸಮಾಜವನ್ನು ಹೊರತು ಪಡಿಸಿ ಸಾಹಿತ್ಯವಿಲ್ಲ. ಏಕೆಂದರೆ ಯಾವುದೇ ಸಾಹಿತಿ ಆ ಕಾಲ ಘಟ್ಟದಲ್ಲಿನ ಸಮಾಜದಲ್ಲಿ ಜೀವಿಸುತ್ತಾನೆ. ಮನುಷ್ಯ ಬರಿಯ ಬದುಕುವುದಷ್ಟೇ ಬಾಳು ಎನ್ನದೆ, ಆ ಬದುಕು ಚೆಲುವು ಒಲವುಗಳಿಂದ ಕೂಡಿರಬೇಕು ಎಂದು ಕೊಂಡಾಗ ಸೃಷ್ಟಿಯಾದಂತವು. ಮನುಷ್ಯನ ಸುತ್ತ ಮುತ್ತ ಅವನ ಬದುಕಿಗೆ ಹೊಂದಿಕೊಂಡಂತೆ ಹಿರಿದಾಗಿರುವ ಚೆಲುವಿನ ಬಲೆಯನ್ನು ಹಿಡಿದಿಡುವ ಪ್ರಯತ್ನದ ಸಂದರ್ಭದಲ್ಲಿ ರೂಪಪಡೆದಂತವು ಸಾಹಿತ್ಯ ಕೃತಿಗಳು. ಯಾವುದೇ ಕಾಲದ ಸಾಹಿತ್ಯದ ಪರಮಗುರಿ ಮನರಂಜನೆಯ ಜೊತೆಗೆ ಮಾನವ ಮನಸ್ಸಿನ ಉನ್ನತಿಯನ್ನು ಸಾಧಿಸುವುದಾಗಿರುತ್ತದೆ.

'ಸಮಾಜ' ಎಂಬುದು ಇಂದು ನಿನ್ನೆಯದಲ್ಲ. ಮಾನವನಷ್ಟೇ ಪ್ರಾಚೀನವಾದುದು. ಆತನ ಬೌದ್ಧಿಕ ಕ್ಷಿತಿಜ ವಿಸ್ತರಿಸಿದಂತೆಲ್ಲಾ ವ್ಯವಸ್ಥಿತ ಸಮಾಜ ಬೆಳೆಯತೊಡಗಿತು. ಸಾಮಾಜಿಕ ಸಂರಚನೆಯಿಂದ ಕೂಡಿದ್ದು ಸಮಾಜ. ಹಲವಾರು ವ್ಯವಸ್ಥಿತ ಸಂಘಟಿತ ಸಮೂಹವಾದ ಸಮಾಜ ಒಂದು ಅಖಂಡ ವ್ಯವಸ್ಥೆಯ ಭಾಗಗಳ ನಡುವಿನ ಸಂಬಂಧವನ್ನು ಹೊಂದಿರುವಂತದ್ದು. ಹಲವಾರು ವ್ಯಕ್ತಿಗಳ ಪರಸ್ಪರ ಅಂತಃಕ್ರಿಯೆಯಲ್ಲಿ ತೊಡಗಿರುವ ಸಾಮಾಜಿಕ ವ್ಯವಸ್ಥೆಯ ಸಮಾಜದಲ್ಲಿ ಅದರ ಭಾಗವಾಗಿರುವ ಸಾಹಿತಿಗಳ ಸಾಹಿತ್ಯದಲ್ಲಿ ಸಮಕಾಲೀನ ಪ್ರಸ್ತುತತೆಯನ್ನು ಕಾಣಬಹುದು.

ಯಾವುದೇ ಒಂದು ದೇಶ, ಕಾಲದ ಸಮಾಜ ಮತ್ತು ಸಂಸ್ಕೃತಿಯನ್ನು ಅರಿಯುವಲ್ಲಿ ಮಾನವ ಶಾಸ್ತ್ರೀಯ ಅಧ್ಯಯನವೆಷ್ಟು ಪ್ರಮುಖವೋ, ಅಷ್ಟೇ ಪ್ರಮುಖವಾದುದು ಆ ಕಾಲದ ಸಾಹಿತಿಗಳು ರಚಿಸುವ ಸಾಹಿತ್ಯ. ಆ ಸಾಹಿತ್ಯ ಕೃತಿಗಳ ಅಧ್ಯಯನದ ಮೂಲಕ ದೇಶ, ಸಮಾಜವನ್ನು ಅರಿಯಲು ಸಾಧ್ಯವಿದೆ.

ಯಾರೋ ಒಬ್ಬರು ಹೇಳಿದ ಕಥೆಯನ್ನು ಕೇಳಿಸಿಕೊಂಡವರಲ್ಲಿ ಒಬ್ಬ ಒಂದು ರೀತಿ ಹೇಳಿದರೆ, ಅದೇ ಕಥೆಯನ್ನು ಮತ್ತೊಬ್ಬ ಮಗದೊಂದು ರೀತಿಯಲ್ಲಿ ಹೇಳುತ್ತಾನೆ.

ಒಂದು ಸ್ಪಷ್ಟ ಉದ್ದೇಶವನ್ನಿಟ್ಟುಕೊಂಡು ಕಥೆ ಬರೆಯುವ ಕಥೆಗಾರರ ಕಥೆಗಳಲ್ಲಿ ಕಥೆಗಾರರು ಚಿತ್ರಿಸುವ ಸಾಂಸ್ಕೃತಿಕ ಮತ್ತು ಸಾಮಾಜಿಕ ವಿವರಗಳು ಕತೆಗಾರನಿಂದ ಕತೆಗಾರರಿಗೆ ಬದಲಾಗುತ್ತಿರುತ್ತವೆ. ಅಂತೇ ಬೇರೆ ಬೇರೆ ವಿಚಾರ– ಸಂಗತಿಗಳು ಜೊತೆಗೂಡಿ ಕತೆಗಳು ನಿರ್ಮಾಣವಾಗುತ್ತವೆ.

ಉತ್ತಮ ಸಮಾಜದ ನಿರ್ಮಾಣ, ಮಾನವನಿಂದ ಅಭಿವ್ಯಕ್ತಗೊಳ್ಳುವ ಉತ್ತಮ ಮನಸ್ಸುಗಳ ಅನಾವರಣದಿಂದ ಮಾತ್ರ ಸಾಧ್ಯ. ಅದರ ಸ್ವರೂಪವನ್ನು ಸೃಜನಶೀಲ ಸಾಹಿತ್ಯದಲ್ಲಿ ಕಾಣಬಹುದಾಗಿದೆ. ಹತ್ತನೇ ಶತಮಾನದಿಂದಲೂ ಕನ್ನಡದಲ್ಲಿ ಕಥಾ ಸಾಹಿತ್ಯವಿತ್ತು ಎಂಬುದಕ್ಕೆ ನಿದರ್ಶನವಾಗಿ ಮೊಟ್ಟಮೊದಲ ಉಪಲಬ್ದ ಗ್ರಂಥವಾದ ವಡ್ಡಾರಾಧನೆ ಕೃತಿ ಇದೆ. ಹಾಗೆಯೇ ಪಂಚತಂತ್ರ ಕಥೆಗಳು, ಕಾವ್ಯಗಳಲ್ಲಿ ಬರುವ ಪ್ರಸಂಗಗಳನ್ನು ನೋಡಬಹುದಾಗಿದೆ. ಒಂದು ನಿರ್ಧಿಷ್ಟವಾದ ವಿಚಾರಗಳನ್ನೊಳಗೊಂಡು ಕಥೆಗಳ ನಿರ್ಮಾಣವಾಗಿದ್ದರೂ ಕಥಾ ಸಾಹಿತ್ಯವಿಂದು ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿದೆ.

ಸ್ವಾತಂತ್ರ್ಯ ಪೂರ್ವ ಹಾಗೂ ಸ್ವಾತಂತ್ರ್ಯ ನಂತರದ ವಿವಿಧ ಕಾಲಘಟ್ಟದಲ್ಲಿ ಕಥೆ ಓದುಗರಿಗೆ ಹತ್ತಿರವಾಗತೊಡಗಿತು. ಪ್ರಕೃತಿ ಕೇಂದ್ರಿತ, ಮನುಷ್ಯ ಕೇಂದ್ರಿತ, ಸಮಾಜ ಕೇಂದ್ರಿತ, ಸ್ತ್ರೀ ಕೇಂದ್ರಿತವಾಗಿ ರಚನೆಯಾಗತೊಡಗಿದ ಕಥೆಗಳು ಪಶ್ಚಿಮದ ಕಥೆಗಳನ್ನು ಹೋಲುವಂತಿದ್ದರೂ ಅದರ ವಸ್ತು, ಪಾತ್ರ, ಶೈಲಿ, ತಂತ್ರ ಮೊದಲಾದವು ಪ್ರಾದೇಶಿಕತೆಯನ್ನು ಪಡೆದುಕೊಂಡು ಸಮೃದ್ಧವಾದ ಸ್ವಂತಿಕೆಯನ್ನು ಹೊಂದಿವೆ.

**೧.೨. ಸಮಾಜ ಸ್ವರೂಪದ ಅರ್ಥ.**

ಸಮಾಜವೆಂಬ ಪದಕ್ಕೆ ಸಂಕ್ಷಿಪ್ತ ಕನ್ನಡ ನಿಘಂಟಿನಲ್ಲಿ ಗುಂಪು, ಸಮೂಹ, ಸಾಂಘಿಕ ಜೀವನ, ಕೂಡಿ ಬಾಳುವುದು ಎಂಬರ್ಥವಿದೆ. ಸಮಾಜವು ಮಾನವ ಜೀವನದ ಒಂದು ಅವಿಭಾಜ್ಯ ಅಂಗ. ಸಮಾಜವೆಂಬುದು ಸಮಾಜವಿಜ್ಞಾನದ ಒಂದು ಮೂಲಭೂತ ಪರಿಕಲ್ಪನೆಯಾಗಿದೆ. ಮಾನವನ ವ್ಯಕ್ತಿತ್ವವು ರೂಪುಗೊಳ್ಳುವುದೆ ಸಮಾಜದಿಂದ. ನಮ್ಮ ಸಮೂಹ ಜೀವನಕ್ಕೆ ಅಗತ್ಯವೆನಿಸುವ ಸಮಸ್ತ ವ್ಯವಹಾರಗಳ ಮೇಲೆ ಸಮಾಜದ ಪ್ರಭಾವ ಇದ್ದೇಇರುತ್ತದೆ. ಇದು ನಮ್ಮ ಜೀವಿತದ ಒಂದು ಭಾಗ. ಹಾಗೆಯೇ ವ್ಯಕ್ತಿ ಮತ್ತು ಸಮಾಜ ಪರಸ್ಪರ ಅವಿಭಜನೀಯವಾದುದು.

ಮೆಕೈವರ್ ಮತ್ತು ಪೇಜ್ ಹೇಳುವಂತೆ "ಸಮಾಜವೆಂಬುದು ಸಾಮಾಜಿಕ ಸಂಬಂಧಗಳ ಬಲೆ". ಶ್ರೇಷ್ಠ ತತ್ವಜ್ಞಾನಿ ಅರಿಸ್ಟಾಟಲ್ ಮಹಾಶಯನು "ಮಾನವನು ಸಮಾಜ ಜೀವಿಯೆಂದು" ಬಹು ಹಿಂದೆಯೇ ತಿಳಿಸಿದ್ದಾನೆ.

ಒಟ್ಟಾರೆಯಾಗಿ "ಒಂದು ನಿರ್ದಿಷ್ಟ ಪ್ರದೇಶದಲ್ಲಿ ತಮ್ಮದೆ ಆದ ಆಚಾರ-ವಿಚಾರಗಳ ಸಂಸ್ಕೃತಿಯನ್ನು ಒಳಗೊಂಡು, ಔಪಚಾರಿಕ ಮತ್ತು ಅನೌಪಚಾರಿಕವಾಗಿ ಸ್ವಯಂ ನಿಯಂತ್ರಿತ ವ್ಯವಸ್ಥೆಯೊಂದಿಗೆ ವಾಸಿಸುತ್ತಿರುವ ಮಾನವ ಸಮುದಾಯವನ್ನು ಸಮಾಜವೆಂದು" ಕರೆಯಬಹುದು.

ಜಗತ್ತಿನ ಪ್ರತಿಯೊಂದು ಸಮಾಜವು ತನ್ನದೆ ಆದ ಸಂಸ್ಕೃತಿಯೊಡನೆ ಚಲನಶೀಲವಾಗಿದೆ. ಸಮಾಜವು ಸಮೂಹಗಳ ಸಮೂಹವಾಗಿದೆ. ಹಲವಾರು ಸಮೂಹಗಳು ಒಟ್ಟಿಗೆ ಸೇರಿ ಸಮಾಜ ನಿರ್ಮಾಣವಾಗುತ್ತದೆ. ಅಂತೆಯೇ ಸಮಾಜವು ಒಡನಾಡಿತನ, ಅನ್ಯೋನ್ಯತೆ, ಸಹಕಾರ, ಹಾಗೂ ಸಾಮರಸ್ಯಗಳ ಜೊತೆಗೆ ಆದರ್ಶಗಳು, ಮೌಲ್ಯಗಳು ಸಹ ಸಮಾಜದಿಂದ ಒಡಮೂಡುತ್ತವೆ. ಸಮಾಜದ ಕಾರ್ಯಗಳು ಸಹಕಾರ ಮತ್ತು ಶ್ರಮವಿಭಜನೆಯೊಂದಿಗೆ ಸದಾ ಮುಂದುವರೆಯುತ್ತಿರುತ್ತವೆ. ಬಹಳ ಮುಖ್ಯವಾಗಿ ಸಮಾಜದ ಸದಸ್ಯರು ಪರಸ್ಪರ ಅವಲಂಬಿತರಾಗಿರುತ್ತಾರೆ. ಈ ಅವಲಂಬನೆಯೇ ಸಮಾಜದ ಸ್ಥಿರತೆಗೆ ಕಾರಣ. ಸಮಾಜದಲ್ಲಿ ಕೇವಲ ಸಾಮಾಜಿಕ ಸದಸ್ಯರ ಸಹಮತದೊಂದಿಗೆ ನಿಯಂತ್ರಣವೂ ಇರುತ್ತದೆ. ಇದು ಔಪಚಾರಿಕವಾಗಿರಬಹುದು ಅಥವಾ ಅನೌಪಚಾರಿಕವಾಗಿರಬಹುದು. ಈ ನಿಯಂತ್ರಣ ವಿಧಾನಗಳೆ ಸಮಾಜದ ಪ್ರಕ್ರಮಕ್ಕೆ ಕಾರಣವಾಗಿದೆ.

ಮಾನವನ ಅವಶ್ಯಕತೆಗಳನ್ನು ಪೂರೈಸುತ್ತಾ, ಕೌಟುಂಬಿಕವಾದ ಸಂಬಂಧಗಳು, ವಿವಾಹ, ಜಾತಿ, ಧರ್ಮ, ಶೈಕ್ಷಣಿಕ, ದುಡಿಮೆ, ಹಬ್ಬ-ಹರಿದಿನಗಳು, ಆಹಾರಪದ್ಧತಿ, ಇತ್ಯಾದಿಗಳನ್ನು ಒಳಗೊಂಡ ಸಮಾಜವು ನಿರಂತರವಾದ ಚಲನ ಶೀಲತೆಯಿಂದ ಕೂಡಿದೆ. ಅಂತೆಯೇ ಸಮಾಜದಲ್ಲಿ ವ್ಯಕ್ತಿಗಳಿಗೆ ಸಿಗಬಹುದಾದ ವಸ್ತುಗಳು ಮತ್ತು ಸೇವೆಗಳು ಸರಿಸಮವಾಗಿ ಹಂಚಿಕೆಯಾಗದೆ ಅಸಮಾನತೆಯಿಂದ ಕೂಡಿರುತ್ತದೆ. ವ್ಯಕ್ತಿಗಳು ಜಾತಿ, ಧರ್ಮ, ಆರ್ಥಿಕತೆ, ಶಿಕ್ಷಣ, ಭಾಷೆ ಇವುಗಳು ಸಮಾಜದ ಸ್ತರವಿನ್ಯಾಸಕ್ಕೆ ಕಾರಣವಾಗಿದೆ.

ಸಾಹಿತಿಗಳು ಸಮಾಜದ ನೆಲೆಯಲ್ಲಿ ವಾಸಿಸುತ್ತಿದ್ದು, ಸಾಮಾಜಿಕವಾದ ಬದುಕಿನ ರೀತಿನೀತಿಗಳನ್ನು, ತನ್ನ ಸುತ್ತಮುತ್ತಲಿನ ಪರಿಸರದಿಂದ ಪಡೆದ ಅನುಭವಗಳನ್ನು ತಮ್ಮ ಬರವಣಿಗೆಯ ಮೂಲಕ ಅಭಿವ್ಯಕ್ತಿಸುತ್ತಾರೆ. ಸಮಾಜದಲ್ಲಿನ ಹಸಿವು, ಬಡತನ, ಶೋಷಣೆ, ಸಂಘರ್ಷಗಳು ಹಾಗೂ ಇನ್ನಿತರ ಘಟನೆಗಳು ಅವರ ಬರವಣಿಗೆಯ ವಿಷಯಗಳಾಗಿರುತ್ತವೆ. ಅವರ ಸಾಮಾಜಿಕ ಕಳಕಳಿಯ ಬರವಣಿಗೆಗಳು, ವ್ಯಕ್ತಿಗಳಿಗೆ ಜಾಗೃತಿಯನ್ನು ಉಂಟು ಮಾಡುವ ಪ್ರಯತ್ನಮಾಡುತ್ತಿವೆ.

**೧.೩. ಅಧ್ಯಯನದ ಉದ್ದೇಶ**

ವ್ಯಕ್ತಿಯ ಮನಸ್ಸನ್ನು ತಕ್ಷಣ ಹಿಡಿದಿಟ್ಟು ಕೊಳ್ಳುವ ಕೆಲವೇ ಕೆಲವು ಸಾಹಿತ್ಯ ಪ್ರಕಾರಗಳಲ್ಲಿ ಕಥಾಸಾಹಿತ್ಯವು ಪ್ರಧಾನವಾಗಿದೆ. ಬಹು ಪಾಲು ಸಂದರ್ಭದಲ್ಲಿ ಜೀವನದಲ್ಲಿ ನಡೆಯುವ

ಘಟನೆಗಳು, ಕಥೆಯಲ್ಲಿರುವ ವಸ್ತುವಾಗಿ, ಪಾತ್ರವಾಗಿ, ಸಂಭಾಷಣೆ, ಹಿನ್ನೆಲೆ, ನಿರೂಪಣೆಯ ರೀತಿಯ ರೂಪದಲ್ಲಿ ಓದುಗರ ಮೇಲೆ ಹೆಚ್ಚು ಪ್ರಭಾವವನ್ನುಂಟುಮಾಡುತ್ತವೆ. ಇಂತಹ ಕಥೆಗಳು ವಿವಿಧ ಸಮಾಜದ ಪ್ರತಿನಿಧಿಗಳಿಂದ ರಚಿತಗೊಂಡಾಗ, ಆಯಾ ಸಮಾಜದ ಚಿತ್ರಣವನ್ನು ಓದುಗನು ಅರಿಯುವ ಮೂಲಕ, ತನ್ನ ದೃಷ್ಟಿಕೋನವನ್ನು ಧನಾತ್ಮಕವಾಗಿ ಯೋಚಿಸುವ ಕ್ರಿಯೆಗೆ ಇವು ಸಹಾಯಕವಾಗುತ್ತವೆ. ಅವುಗಳನ್ನು ಈ ಅಧ್ಯಯನದಲ್ಲಿ ಶೋಧಿಸಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ನವ್ಯ ಕಾಲಘಟ್ಟದಲ್ಲಿ ರಚನೆಯಾದ ಕಥಾ ಸಾಹಿತ್ಯವು ಹೆಚ್ಚಿನ ಪ್ರಾಮುಖ್ಯತೆಯನ್ನು ಹೊಂದಿದೆ. ಸ್ವಾತಂತ್ರ್ಯಪೂರ್ವದ ವಸಾಹತುಶಾಹಿಯ ಪರಿಣಾಮದಿಂದ ಆಧುನಿಕತೆ ಹಾಗೂ ಸ್ವಾತಂತ್ರ್ಯೋತ್ತರದ ನವ ವಸಾಹತುಶಾಹಿಯಿಂದ 'ನಗರೀಕರಣ' ಮಾನವನ ಜೀವನದಲ್ಲಿ ಪ್ರವೇಶಿಸಿ ಹೊಸ ಸಂಚಲನವನ್ನು ಉಂಟುಮಾಡಿತು. ವಿವಿಧ ಜಾತಿ ವರ್ಗದ ಸಮುದಾಯದ ವ್ಯಕ್ತಿಗಳು ತಮ್ಮ ಜೀವನದ ಅಸ್ತಿತ್ವಕ್ಕಾಗಿ ಹೋರಾಟ ನಡೆಸುತ್ತಾ ಬಂದಿದ್ದಾರೆ. ಈ ಹೋರಾಟದಲ್ಲಿ ಸೋಲು-ಗೆಲುವುಗಳನ್ನು ಕಂಡಿರುವ ರೀತಿಯನ್ನು ಅರಿಯುವ ಉದ್ದೇಶವಾಗಿದೆ.

ಅನುಲಕ್ಷಿಸಿರುವ ಕಥೆಗಾರರ ಕಥೆಗಳ ಚೌಕಟ್ಟಿನಲ್ಲಿ ಗಂಡು-ಹೆಣ್ಣಿನ ಸಂಬಂಧಗಳು, ದೈಹಿಕ ಸಂಬಂಧಗಳು, ಕೌಟುಂಬಿಕ ಜೀವನದ ಮೇಲೆ ಹೇಗೆ ರಿಕ್ತ-ವ್ಯತಿರಿಕ್ತ ಪರಿಣಾಮಗಳು, ಜಾತಿ ವರ್ಗಗಳ ಜೀವನದ ಕ್ರಮಗಳು, ಘಟನೆಗಳು, ಸಂಘರ್ಷಗಳು ಸಾಮಾಜಿಕವಾಗಿ ಹೇಗೆ ಪರಿಣಾಮ ಬೀರುತ್ತವೆ ಎಂಬುದನ್ನು ವಿಶ್ಲೇಷಣೆ ಮಾಡುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

### ೧.೪ ಅಧ್ಯಯನದ ಮಹತ್ವ

ವಿವಿಧ ಕಾಲಘಟ್ಟಗಳಲ್ಲಿ ರಚಿತವಾದ ಕಥೆಗಾರರ ಕಥೆಗಳಿಗೆ ಪ್ರಭಾವ, ಪ್ರೇರಣೆಗಳ ಸಂಗತಿಗಳನ್ನು ಕಾಣಬಹುದಾಗಿದೆ. ನವೋದಯ ಸಾಹಿತ್ಯಕ್ಕಿಂತ ಭಿನ್ನವಾಗಿ ನವ್ಯ ಸಾಹಿತ್ಯವು ರೂಪುಗೊಂಡರೆ, ನವ್ಯ ಸಾಹಿತ್ಯಕ್ಕಿಂತ ಭಿನ್ನವಾಗಿ ಪ್ರಗತಿಶೀಲ ಸಾಹಿತ್ಯ ರಚಿತವಾಗಿರುವುದನ್ನು ನೋಡಬಹುದಾಗಿದೆ. ಆದರೆ ಈ ಎಲ್ಲಾ ಕಾಲಘಟ್ಟಕ್ಕಿಂತ ನವ್ಯ-ನವ್ಯೋತ್ತರ ಸಾಹಿತ್ಯದ ಒಟ್ಟು ಚಿಂತನೆಗಳೇ ವಿಭಿನ್ನವಾಗಿ ರೂಪುಗೊಂಡಿರುವ ಸನ್ನಿವೇಶಗಳು ಹೆಚ್ಚಿನ ಮಹತ್ವವನ್ನು ಹೊಂದಿವೆ.

ಕನ್ನಡ ಸಾಹಿತ್ಯದಲ್ಲಿ ನವ್ಯ ಕಥಾ ಪ್ರಕಾರವು ತನ್ನದೇ ಆದ ಪ್ರಭಾವವನ್ನು ಹೊಂದಿದೆ. ಈ ಕಾಲಘಟ್ಟದಲ್ಲಿ ರಚನೆಯಾದ ಕಥೆಗಳು ವ್ಯಕ್ತಿ ಕೇಂದ್ರಿತವಾಗಿ ರಚನೆ ಯಾಗಿರುತ್ತವೆ. ಇಲ್ಲಿ ಹಸಿವು, ಬಡತನ, ಕಾಮ, ನಂಬಿಕೆಗಳು, ಆಚರಣೆಗಳು, ದುಡಿಮೆ, ಇವುಗಳನ್ನು ಒಳಗೊಂಡಂತೆ ಶೋಷಣೆ ಮಾಡುವ ರೀತಿ, ಕ್ರೌರ್ಯ, ಜಾತಿಯಲ್ಲಿನ

ಮೇಲು– ಕೀಳಿನ ಭಾವನೆಗಳು, ಸಂಘರ್ಷ, ಇವೆಲ್ಲವೂ ಅನಾವರಣ ಗೊಂಡಿವೆ. ಇವುಗಳು ಇಂದಿನ ಮನಷ್ಯನ ಸಂವೇದನಾ ಶೀಲ ಚಿಂತನೆಗಳಿಗೆ ವಸ್ತುಗಳಾಗಿವೆ.

ನವ್ಯ ಕಥೆಗಳ ವಸ್ತು, ಪಾತ್ರ, ಘಟನೆ, ತಂತ್ರ, ನಿರೂಪಣೆ, ಆಶಯ ಮತ್ತು ಪ್ರಾದೇಶಿಕ ಭಾಷೆ ಇವುಗಳನ್ನು ಬಳಸಿಕೊಂಡು, ತಾತ್ವಿಕ ಹಾಗೂ ವೈಚಾರಿಕ ನೆಲೆಗಟ್ಟಿನಲ್ಲಿ ಈ ಅಧ್ಯಯನವು ಮಹತ್ವಹೊಂದಿದೆ. ಈ ಕಥೆಗಳಲ್ಲಿ ಕಥೆಗಾರ ಪಾತ್ರವೂ ಆಗಿರುತ್ತಾನೆ. ಹಾಗೆಯೇ ನಿರೂಪಕನೂ ಆಗಿರುತ್ತಾನೆ. ಒಟ್ಟಾರೆಯಾಗಿ ಕಥೆಗಳಲ್ಲಿ ವ್ಯಕ್ತಿ ಕೇಂದ್ರಿತವಾಗಿರುವ ದೃಷ್ಟಿಕೋನದಿಂದಲೇ ಸಮಕಾಲೀನ ಸಮಾಜವನ್ನು ನೋಡಲು ಸಾಧ್ಯವೆಂಬ ನವೀನ ಸಾಧ್ಯತೆಯನ್ನು ಕಥೆಗಾರ ಹೊಂದಿರುವುದನ್ನು ಕಾಣಬಹುದಾಗಿದೆ.

**೧.೫ ಅಧ್ಯಯನದ ವ್ಯಾಪ್ತಿ**

ಕನ್ನಡದ ಕಥಾ ಸಾಹಿತ್ಯಕ್ಕೆ ಕೆ.ಪಿ. ಪೂರ್ಣಚಂದ್ರ ತೇಜಸ್ವಿಯವರ ಕೊಡುಗೆ ಅನನ್ಯವಾದುದು. ನವ್ಯ ಬರವಣಿಗೆಯಲ್ಲಿ ನಾಯಕ ಕೇಂದ್ರಿತವಾಗಿದ್ದ ರೀತಿಗಳನ್ನು ಬಿಟ್ಟು ಸಮಷ್ಠಿ ಪ್ರಜ್ಞೆಯ ಕಥೆಗಳನ್ನು ಬರೆದಿದ್ದಾರೆ. ಇವರ ಕಥೆಗಳು ಸಮಾಜದಲ್ಲಿನ ಜನ ಸಾಮಾನ್ಯರ ಬದುಕಿನ ಪುಟವನ್ನು ತೆರೆಯುತ್ತವೆ. ಇವರು ತಮ್ಮ ವಿದ್ಯಾಭ್ಯಾಸ ಪೂರ್ಣಗೊಂಡ ಮೇಲೆ ನಾಡಿನಿಂದ ಕಾಡಿಗೆ ಹೊರಟರು. ಪ್ರಕೃತಿಯ ಮಡಿಲಲ್ಲಿ, ಗ್ರಾಮೀಣರ ನಡುವೆ, ಬದುಕುವ ಮೂಲಕ ಬಡತನದಿಂದ ಕೂಡಿದ ಹಸಿವು, ಅನಕ್ಷರತೆ, ಮೌಢ್ಯತೆ ಮುಂತಾದ ಸಾಂಸ್ಕೃತಿಕ ಆಯಾಮಗಳನ್ನು ತಮ್ಮ ಸಾಹಿತ್ಯದ ಮೂಲಕ ಪ್ರಾಮಾಣಿಕವಾಗಿ ವಿವರಿಸುವ ಪ್ರಯತ್ನ ಮಾಡಿದ್ದಾರೆ.

ಇವರು ವೈಚಾರಿಕ ನಿಲುವು ಮತ್ತು ಆದರ್ಶಗಳನ್ನು ಉದ್ದೇಶ ಪೂರ್ವಕವಾಗಿ ಸೃಷ್ಟಿಸಿದ್ದಾರೆಂದು ಹೇಳಲು ಸಾಧ್ಯವಿಲ್ಲ. ಇವರ ಕಥೆಗಳಲ್ಲಿ ಬರುವ ಆಯಾಯ ಸನ್ನಿವೇಶಗಳ ಹಿನ್ನೆಲೆಯಲ್ಲಿ ಮೇಲಿನ ಅಂಶಗಳನ್ನು ಕಾಣಬಹುದು. ಇವರೇ ತಮ್ಮ ಕಥಾಸಂಕಲನದಲ್ಲಿ ಹೇಳಿಕೊಂಡಿರುವ ಲೋಹಿಯಾರವರ ಚಿಂತನೆ, ಕುವೆಂಪುರವರ ಕಲಾಸೃಷ್ಟಿ, ಕಾರಂತರ ಜೀವನದ ದೃಷ್ಟಿ, ಮತ್ತು ಬದುಕಿನ ಪ್ರಯೋಗಶೀಲತೆಯನ್ನು ಇವರ 'ಹುಲಿಯೂರಿನ ಸರಹದ್ದು', 'ಅಬಚೂರಿನ ಪೋಸ್ಟಾಫೀಸು,' 'ಕಿರಗೂರಿನ ಗಯ್ಯಾಳಿಗಳು' ಮತ್ತು 'ಪಾಕಕ್ರಾಂತಿ' ಕಥಾ ಸಂಕಲನಗಳಲ್ಲಿರುವ ಕಥೆಗಳನ್ನು ಮಹಾಪ್ರಬಂಧದ ವಿಚಾರಕ್ಕೆ ಸಂಬಂಧಿಸಿದಂತೆ ಅಧ್ಯಯನಕ್ಕೆ ಒಳಪಡಿಸಿ ಅಭ್ಯಸಿಸಲಾಗಿದೆ. ಇವರ ಪರಿಸರಕ್ಕೆ ಸಂಬಂಧಿಸಿದ ಕಥೆಗಳನ್ನು, ಕಾದಂಬರಿಗಳನ್ನು, ನಾಟಕಗಳನ್ನು ಸೈದ್ಧಾಂತಿಕ ಚಳುವಳಿಗಳನ್ನು, ಹೋರಾಟಗಳಿಗೆ ಸಂಬಂಧಿಸಿದ ವಿಚಾರಗಳು, ಕೃತಿಗಳನ್ನು ಅಧ್ಯಯನದ ವ್ಯಾಪ್ತಿ ಒಳಗೊಂಡಿಲ್ಲ.

ಪಿ.ಲಂಕೇಶರು ನವ್ಯ ಕಥೆಗಾರರಲ್ಲಿ ಪ್ರಮುಖರು. ಇವರು ಸಮಾಜವನ್ನು ಗ್ರಹಿಸಿದ ರೀತಿ ವಿಭಿನ್ನವಾದುದಾಗಿದೆ. ತಾವು ತಿಳಿದಿರುವ ವಿಚಾರವನ್ನು ಎಲ್ಲಿಯೂ ಅಳುಕದೆ, ಅಂಜದೆ, ನೇರವಾಗಿ, ತೀಕ್ಷ್ಣವಾಗಿ ಹೇಳುವವರಾಗಿದ್ದರು.

ಇವರ ಕಥೆಗಳ ವಸ್ತು, ಭಾಷೆ, ಅಭಿವ್ಯಕ್ತಿಯ ಮೂಲಕ ಕನ್ನಡ ಸಾಹಿತ್ಯ ಪ್ರಪಂಚಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಮಾನವನ ಸಹಜ ಮನಸ್ಥಿತಿಗಳಾದ ಸಣ್ಣತನ, ಮೋಸ, ಕಪಟ, ಅಸಹಾಯಕತೆ, ಅವಮಾನ, ಇವುಗಳ ಮೂಲಕ ಅಸ್ತಿತ್ವಕ್ಕಾಗಿ ನಡೆಸುವ ಹೋರಾಟವನ್ನು ಇವರ ಕಥೆಗಳಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಇವರ ಕಥಸಂಕಲನಗಳಾದ 'ಕೆರೆಯ ನೀರನು ಕೆರೆಗೆ ಚೆಲ್ಲಿ,' 'ನಾನಲ್ಲ,' 'ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ,' 'ಕಲ್ಲು ಕರಗುವ ಸಮಯ,' ಹಾಗೂ 'ಉಲ್ಲಂಘನೆ' ಕಥಾ ಸಂಕಲನದಲ್ಲಿ ಕೊನೆಯ ಎಂಟು ಸಂಗ್ರಹ ರೂಪದ ಕಥೆಗಳನ್ನು ಹೊರತು ಪಡಿಸಿ ಮತ್ತು 'ಮಂಜು ಕವಿದ ಸಂಜೆ' ಕಥಾ ಸಂಕಲನದಲ್ಲಿ ಕೊನೆಯ ಮೂರು ಕಥೆಗಳನ್ನು ಹೊರತು ಪಡಿಸಿ ಉಳಿದಂತಹ ಕಥೆಗಳನ್ನು ನನ್ನ ಅಧ್ಯಯನಕ್ಕೆ ಬಳಸಿಕೊಂಡಿರುತ್ತೇನೆ.

ಯು.ಆರ್. ಅನಂತಮೂರ್ತಿರವರು ನವ್ಯ ಕಥೆಗಾರರಲ್ಲಿ ಮತ್ತೊಬ್ಬ ಪ್ರಮುಖರಾಗಿದ್ದಾರೆ. ಇವರು ಕಥೆಗಳ ಮೂಲಕವೇ ಸಾಹಿತ್ಯಕ್ಕೆ ಪ್ರವೇಶಿಸಿದ್ದು. ಇವರ ಕಥೆಗಳಲ್ಲಿ ಕಥಾ ವಸ್ತು, ಭಾಷೆ, ತಂತ್ರ, ಶೈಲಿ, ವಿಭಿನ್ನವಾಗಿವೆ. ಇವರಲ್ಲಿ ಕಥಾ ವಸ್ತು, ವೈಚಾರಿಕವಾಗಿ, ಭಾಷೆ ಸೂಕ್ಷ್ಮವಾಗಿ ರಚನೆಗೊಂಡಿದೆ. ಬ್ರಾಹ್ಮಣ ಕೌಟುಂಬಿಕ ಜೀವನ ಹಿಡಿದಿಟ್ಟಿರುವ ಕಥೆಗಳಿವೆ. ಅವರ ಸಮಾಜದಲ್ಲಿನ ವಿಚಾರಗಳನ್ನು ಶೋಧಿಸುವುದು. ಮತ್ತು ಅದನ್ನು ತಮ್ಮದೇ ಆದ ವೈಚಾರಿಕ ನಿಲುವುಗಳಿಂದ ಅಭಿವ್ಯಕ್ತಪಡಿಸಿರುವುದನ್ನು ಕಥೆಗಳ ಮೂಲಕ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅವರ 'ಐದು ದಶಕದ ಕಥೆಗಳು' ಸಮಗ್ರ ಕಥೆಗಳ ಅಡಿಯಲ್ಲಿ 'ಎಂದೆಂದೂ ಮುಗಿಯದ ಕಥೆ', 'ಪ್ರಶ್ನೆ', 'ಮೌನಿ', 'ಆಕಾಶ ಮತ್ತು ಬೆಕ್ಕು', 'ಸೂರ್ಯನ ಕುದುರೆ' ಹಾಗೂ 'ಬೇಟೆ,ಬಳೆ ಮತ್ತು ಓತಿಕೇತ' ಕಥಾಸಂಕಲನಗಳ ಕಥೆಗಳನ್ನು ಮಾತ್ರ ನನ್ನ ಅಧ್ಯಯನ ಒಳಗೊಂಡಿದೆ.

ಸಮಾಜವಾದಿ ಚಿಂತನೆಯನ್ನು ಬಿತ್ತರಿಸುವ ನವ್ಯ ಹಾಗೂ ನವ್ಯೋತ್ತರ ಚಳುವಳಿಯಲ್ಲಿ ಕಾಣುವ ಪ್ರಮುಖ ಲೇಖಕರಾಗಿರುವ ತೇಜಸ್ವಿ, ಲಂಕೇಶ್, ಅನಂತಮೂರ್ತಿಯವರ ಕಥಾ ಸಾಹಿತ್ಯದಲ್ಲಿ ವ್ಯಕ್ತಿ ಕೇಂದ್ರಿತ ಹಾಗೂ ಸಮಾಜ ಕೇಂದ್ರಿತ ವಿಚಾರಗಳನ್ನು ಕುರಿತು ಅಧ್ಯಯನ ನಡೆಸಲಾಗಿದೆ. ಇವರುಗಳ ಸಮಗ್ರ ಚಿಂತನೆಗಳು, ಬರಹಗಳು, ಬೇರೆ ಬೇರೆ ಸಾಮಾಜಿಕ ಕ್ಷೇತ್ರಗಳ ಬಗ್ಗೆ, ವಿಶಾಲವಾದ ವಿಚಾರಧಾರೆಗಳು ಇರುವುದರಿಂದ ಕೂಲಂಕಶವಾಗಿ ಕಂಡುಕೊಳ್ಳಲು ಸಾಧ್ಯವಾಗದ ಕಾರಣ, ಈ ಮೂರು ಜನ ಕಥೆಗಾರರ ಕಥೆಗಳನ್ನು ಮಾತ್ರ ಅಧ್ಯಯನ ಮಾಡಿರುತ್ತೇನೆ. ಇದು ನನ್ನ ಅಧ್ಯಯನದ ವ್ಯಾಪ್ತಿ ಹಾಗೂ ಮಿತಿಯನ್ನು ಒಳಗೊಂಡಿದೆ.

**೧.೬ ಅಧ್ಯಯನದ ವೈಧಾನಿಕತೆ.**

ಈ ಮಹಾಪ್ರಬಂಧದ ಶೀರ್ಷಿಕೆಯಡಿಯಲ್ಲಿ ಕಥೆಗಳ ಚೌಕಟ್ಟಿನಲ್ಲಿ ಅಧ್ಯಾಯಗಳನ್ನು ವಿಂಗಡಿಸಿ ವಿಮರ್ಶಾತ್ಮಕ ಅಧ್ಯಯನ ವಿಧಾನವನ್ನು ಮುಖ್ಯವಾಗಿ ಅನುಸರಿಸಲು

ಉದ್ದೇಶಿಸಲಾಗಿದೆ. ಸಾಮಾಜಿಕ ನೆಲೆಯಿಂದ ಕಥಾ ಸಾಹಿತ್ಯವನ್ನು ಅಭ್ಯಾಸ ಮಾಡಿ ಆ ಮೂಲಕ ವಿಶ್ಲೇಷಿಸುವ ವಿಧಾನವನ್ನು ಬಳಸಿಕೊಂಡು ಅಧ್ಯಯನ ನಡೆಸಲಾಗಿದೆ.

ಪ್ರಸ್ತುತ ಸಂಶೋಧನೆಯು ಕಥೆಗಾರರ ಕಥೆಗಳ ಮೂಲಕ ಸಮಾಜ ಸ್ವರೂಪದ ಪರಿಕಲ್ಪನೆಯಲ್ಲಿ ತಮ್ಮ ನಿಲುವುಗಳನ್ನು ಸಾಹಿತ್ಯದಲ್ಲಿ ಹೇಗೆ ನಿರೂಪಿಸಿದ್ದಾರೆ ಎಂಬುದನ್ನು ಕೆಲವಾರು ನಿರ್ದಶನಗಳ ಮೂಲಕ ಚರ್ಚಿಸುವ ಪ್ರಯತ್ನ ಮಾಡಲಾಗುತ್ತದೆ. ಹಾಗೂ ಸಮಾಜ ಚರ್ಚಿತ ವಿಚಾರಗಳು ವೈಚಾರಿಕ ನಿಲುವುಗಳಿಗೆ ಹೇಗೆ ಪೂರಕವಾಗಿ ನಿಲ್ಲುತ್ತವೆ ಎಂಬುದನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ಈ ಪ್ರಬಂಧದ ಅಧ್ಯಯನವನ್ನು ಒಟ್ಟು ಆರು ಅಧ್ಯಾಯಗಳಲ್ಲಿ ಚರ್ಚಿಸಲು ಯೋಚಿಸಲಾಗಿದೆ. ಮೊದಲಿಗೆ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವವನ್ನು, ಹಾಗೂ ಕಥೆಗಾರರ ಸಾಹಿತ್ಯಕ್ಕೆ ಸಂಬಂಧಿಸಿದ ಇದುವರೆಗೆ ಬಂದಿರುವ ಲೇಖನಗಳು, ಕೃತಿಗಳು, ಸಂಶೋಧನಾ ಅಧ್ಯಯನ ಕೃತಿಗಳನ್ನು ಸಂಕ್ಷಿಪ್ತ ರೂಪದಲ್ಲಿ ಸಮೀಕ್ಷೆಯನ್ನು ನಡೆಸಲಾಗುತ್ತದೆ. ಮುಂದಿನ ನಾಲ್ಕು ಅಧ್ಯಾಯಗಳಲ್ಲಿ ಸಮಾಜದಲ್ಲಿನ ಕೌಟುಂಬಿಕ ವ್ಯವಸ್ಥೆಯಲ್ಲಿ ಸ್ತ್ರೀಪುರುಷರ ಸಂಬಂಧಗಳು, ಜಾತಿ-ಧರ್ಮಾಧಾರಿತ ಸಮುದಾಯದ ಪರಿಕಲ್ಪನೆ, ಜೀವನದ ಸ್ವರೂಪವನ್ನು, ವರ್ಗ ಸಮಾಜದ ಸಂಬಂಧಗಳು ಸಂಘರ್ಷಗಳು ಕಥೆಗಾರರ ಕಥೆಗಳಲ್ಲಿ ಹೇಗೆ ರೂಪುಗೊಂಡಿವೆ ಎಂಬುದನ್ನು ಅಧ್ಯಯನ ಮಾಡಿ ಅವುಗಳ ಒಟ್ಟು ಫಲಿತಗಳನ್ನು ತಾತ್ವೀಕರಿಸಿ ನಿರೂಪಿಸಲಾಗಿದೆ.

### ೧.೭ ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಕಥೆಗಾರರ ಸಾಹಿತ್ಯವನ್ನು ಕುರಿತಾಗಿ ಇದುವರೆಗೆ ಅನೇಕ ಲೇಖನಗಳು, ಕೃತಿಗಳು ಸಂಶೋಧನೆಗಳು ಹೊರಬಂದಿವೆ. ನನ್ನ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಇದುವರೆಗೂ ನಡೆದಿರುವ ಕೆಲವು ಅಧ್ಯಯನಗಳನ್ನು ಸಂಕ್ಷಿಪ್ತವಾಗಿಯೂ ಸಮೀಕ್ಷೆ ನಡೆಸಲಾಗಿದೆ. ಈ ಸಮೀಕ್ಷೆಯ ಅಭಿಪ್ರಾಯಗಳು ನನ್ನ ಅಧ್ಯಯನದ ಮಾನದಂಡಗಳಲ್ಲ. ಬದಲಾಗಿ ನನ್ನ ಅಧ್ಯಯನವನ್ನು ಕೈಗೊಳ್ಳುವ ಮೊದಲು ಈ ವಲಯದಲ್ಲಿ ಆಗಿರುವ ಸಂಶೋಧನೆಗಳನ್ನು ಸಮೀಕ್ಷಿಸುವುದರಿಂದ ಅಧ್ಯಯನಕ್ಕೆ ಒಂದು ವಿಶಿಷ್ಟತೆ ಸಿಗುತ್ತದೆ ಎಂಬ ಅಭಿಪ್ರಾಯದಿಂದ ಸಮೀಕ್ಷೆ ಮಾಡಿರುತ್ತೇನೆ.

'ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರ ಬದುಕು ಬರಹ" ಎಂಬ ಕೃತಿಯಲ್ಲಿ ಕರೀಗೌಡ ಬೀಚನಹಳ್ಳಿಯವರು ತೇಜಸ್ವಿಯವರ ವಿಚಾರಗಳ ಬಗೆಗೆ ಸಂಕ್ಷಿಪ್ತವಾದ ವಿವರಣೆಯನ್ನು ನೀಡಿದ್ದಾರೆ. ಒಟ್ಟು ಹದಿನೈದು ಅಧ್ಯಾಯಗಳನ್ನಾಗಿ ವಿಂಗಡಿಸಿ, ತೇಜಸ್ವಿಯವರ ಜೀವನ ಚರಿತ್ರೆ, ಕೃತಿಗಳನ್ನು ಒಳಗೊಂಡಂತೆ, ಅವರ ಸೈದ್ಧಾಂತಿಕ ಚಿಂತನೆ, ರೈತ ಪರ ಕಾಳಜಿ, ಪರಿಸರ ಕಥಾ ವಿನ್ಯಾಸಗಳು, ವೈಜ್ಞಾನಿಕ-ವೈಚಾರಿಕ ವಿಚಾರಗಳನ್ನು ಒಳಗೊಂಡಂತೆ ಪ್ರವಾಸ ಕಥನಗಳನ್ನು ಕೂಡ ಸಂಕ್ಷಿಪ್ತವಾಗಿ ಕೃತಿಯಲ್ಲಿ ಕಟ್ಟಿಕೊಟ್ಟಿದ್ದಾರೆ. ತೇಜಸ್ವಿಯವರ

ಕಥಾಸಂಕಲನಗಳನ್ನು ಇಡಿಯಾಗಿ ತೆಗೆದುಕೊಂಡು ಅವುಗಳ ಸಾರಗಳ ವಿಶ್ಲೇಷಣೆಯನ್ನು ತಮ್ಮ ಕೃತಿಯಲ್ಲಿ ತೋರಿಸಿದ್ದಾರೆ.

ಜಿ.ಎಸ್.ಭಟ್ಟರವರು ಸಂಪಾದಿಸಿರುವ 'ತೇಜಸ್ವಿಯವರ ಕೃತಿಗಳು' ಎಂಬ ಕೃತಿಯಲ್ಲಿ ಅನೇಕ ಲೇಖಕರು ತೇಜಸ್ವಿಯವರ ಕೃತಿಗಳನ್ನು ವಿಶ್ಲೇಷಿಸಿ ಮತ್ತು ಚರ್ಚಿಸಿ ತಮ್ಮ ಲೇಖನಗಳಲ್ಲಿ ಮಂಡಿಸಿದ್ದಾರೆ. ಜ್ಯೋತಿ ಶಂಕರ್‌ರವರು 'ಅಬಚೂರಿನ ಪೋಸ್ಟಾಪೀಸು' ಕಥಾ ಸಂಕಲನಕ್ಕೆ ಸಂಬಂಧಿಸಿದಂತೆ "ತೇಜಸ್ವಿಯವರು ಆಧುನಿಕ ನಾಗರಿಕತೆಯ ಪ್ರತೀಕವಾಗಿ ಹಳ್ಳಿಗೆ ಬಂದ ಪೋಸ್ಟಾಫೀಸು ಹೇಗೆ ಅನಾಹುತ ತಂದಿಟ್ಟಿತ್ತು ಎಂದು ಚಿತ್ರಿಸಿದ್ದಾರೆ. ಜೊತೆಗೆ ಮಾನವನ ಸಂಕೀರ್ಣತೆ ಹೊಸ ಬದಲಾವಣೆಯನ್ನು ಒಪ್ಪಿಕೊಳ್ಳಲು ಹೇಗೆ ನಿರಾಕರಿಸುತ್ತದೆ ಎನ್ನುವುದನ್ನು ಸೂಕ್ಷ್ಮವಾಗಿ ವಿವರಿಸುತ್ತದೆ." (ಪುಟ ೭) ಎಂದು ಅಭಿಪ್ರಾಯಪಡುತ್ತಾರೆ.

ಟಿ.ಪಿ. ಅಶೋಕ್‌ರವರು 'ತೇಜಸ್ವಿ ಕಥನ' ಎಂಬ ಕೃತಿಯಲ್ಲಿ ತೇಜಸ್ವಿಯವರ ಕತೆಗಳು, ಕಾದಂಬರಿಗಳು ಮತ್ತು ಅವರ ವಿವಿಧ ಲೇಖನಗಳ ಬಗ್ಗೆ ಸಂಕ್ಷಿಪ್ತವಾದ ವಿಶ್ಲೇಷಣ ರೂಪದ ವಿವರಣೆ ನೀಡಿದ್ದಾರೆ. ಕೃತಿಯಲ್ಲಿ ಎರಡು ಭಾಗಗಳು ಕಂಡು ಬರುತ್ತವೆ. ಮೊದಲ ಭಾಗದಲ್ಲಿ ತೇಜಸ್ವಿಯವರ ಕಥನಕ್ಕೆ ಸಂಬಂಧಿಸಿದ ಭಾಗದಲ್ಲಿ ತೇಜಸ್ವಿಯವರ ಹುಟ್ಟು ಬೆಳವಣಿಗೆ, ಬರಹಗಳ ರೂಪದ ಒಟ್ಟು ಕಥೆಗಳು, ಕಾದಂಬರಿಗಳು, ವೈಜ್ಞಾನಿಕ ಚಿಂತನೆಗಳ ಬಗ್ಗೆ ವಿಶ್ಲೇಷಿಸಿದ್ದಾರೆ. ಎರಡನೆಯ ಭಾಗದಲ್ಲಿ ಬಿಡಿಬಿಡಿಯಾಗಿ ಕಥೆಗಳನ್ನು, ಕಾದಂಬರಿಗಳನ್ನು, ಪರಿಸರ ಮತ್ತು ಪ್ರವಾಸ ಕಥನಗಳನ್ನು ವಿಶ್ಲೇಷಣೆ ಮಾಡಿದ್ದಾರೆ. ಅಶೋಕ್‌ರವರು ತೇಜಸ್ವಿಯವರ ಸಾಹಿತ್ಯದ ಬಗ್ಗೆ "ಸಂಸ್ಕೃತದ ಭಾರವೂ ಇಲ್ಲದೆ, ಇಂಗ್ಲೀಷಿನ ಭಾರವೂ ಇಲ್ಲದ ಅಚ್ಚಗನ್ನಡ ಶೈಲಿಯೊಂದನ್ನು ಅವರು ರೂಪಿಸಿಕೊಂಡಿದ್ದಾರೆ. ಎಂಥ ಜಟಿಲ, ತಾತ್ವಿಕ ವಿಷಯಗಳನ್ನೂ ಅವರು ಜಿಡುಕಿಲ್ಲದೆ ನಿರೂಪಿಸಬಲ್ಲರು. ವಿಜ್ಞಾನದ ವಿಷಯಗಳ ಬಗ್ಗೆ, ಇವರಷ್ಟು ಸರಳವಾಗಿ ತಿಳಿಯಾಗಿ ಬರೆಯುವವರು ತೀರ ವಿರಳ. ಅನುವಾದಗಳಲ್ಲೂ ತೇಜಸ್ವಿ, ಎತ್ತಿದ ಕೈ. ತೇಜಸ್ವಿಯವರ ಲವಲವಿಕೆಯ ಬರವಣಿಗೆ ಅವರ ವೈವಿಧ್ಯಮಯ ಸಮೃದ್ಧ ಬದುಕಿನಷ್ಟೇ ಸಮೃದ್ಧ. ಪ್ರಾಯಶಃ ಶಿವರಾಮ ಕಾರಂತರನ್ನು ಬಿಟ್ಟರೆ ತೇಜಸ್ವಿಯೊಬ್ಬರೇ ಪ್ರಮುಖ ಸಾಹಿತಿಯಾಗಿಯೂ ಸಾಹಿತ್ಯೇತರ ಚಟುವಟಿಕೆಗಳ ಬಗ್ಗೆಯೂ ಅಷ್ಟೊಂದು ತೀವ್ರವಾದ ಆಸಕ್ತಿ ಇಟ್ಟುಕೊಂಡಿರುವುದು." (ಪುಟ ೧೧) ಎನ್ನುತ್ತಾರೆ.

ನಾಗಭೂಷಣ ಬಗ್ಗನಡುರವರು ಸಂಪಾದಿಸಿರುವ "ಲಂಕೇಶ್ ಒಂದು ನೆನಪು" ಕೃತಿಯಲ್ಲಿ ಅನೇಕ ವಿದ್ವಾಂಸರು ಲಂಕೇಶ್‌ರ ಬಹುಮುಖ ಪ್ರತಿಭೆಯ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಹೇಳಿದ್ದಾರೆ. ನಟರಾಜ್ ಹುಳಿಯಾರ್ ಜಾತಿಯ ಪರಿಕಲ್ಪನೆ ಲಂಕೇಶ್‌ರ ಕಥೆಗಳಲ್ಲಿ ರೂಪುಗೊಂಡಿರುವ ಬಗ್ಗೆ ಹೇಳುತ್ತಾ " 'ಮುಟ್ಟಿಸಿಕೊಂಡವನು' ಕತೆಯಲ್ಲಿ

ಭಾರತಕ್ಕೆ ಗಾಂಧೀವಾದದ ಮೂಲಕ ಲಂಕೇಶರು ಕಂಡುಕೊಂಡ ಸ್ಪರ್ಶದ ರೂಪಕ ಈ ಕತೆ. ಸ್ಪೃಶ್ಯ, ಅಸ್ಪೃಶ್ಯರು ಪರಸ್ಪರ ಮುಟ್ಟುವುದರ ಜೊತೆಗೆ ಗಾಂಧಿಯ ಪರೀಕ್ಷೆ ಮತ್ತು ಸ್ವೀಕಾರವನ್ನು ರೂಪಿಸಿದವರು. ನವ್ಯ ಲೇಖಕರಾದ ಲಂಕೇಶರು ಹಳೆಯ ಬರಹಗಳಿಗೂ, ಪತ್ರಿಕೆ ಆರಂಭಿಸಿದ ನಂತರದ ಗದ್ಯ ಬರಹಗಳಿಗೂ ವ್ಯತ್ಯಾಸವಿದೆ. ಸರಳ ಗದ್ಯದ ಮೂಲಕ ಜನರ ಮನಸ್ಸನ್ನು ಪ್ರವೇಶಿಸುವಲ್ಲಿ ಯಶಸ್ವಿಯೂ ಆದರು."( ಪುಟ ೧೮, ೧೯) ಎಂದು ಲಂಕೇಶರ ಸಾಹಿತ್ಯ ಮತ್ತು ಅವರ ಚಿಂತನೆಗಳ ಬಗ್ಗೆ ಹೇಳುತ್ತಾರೆ. ಕಾ.ವೆಂ. ಶ್ರೀನಿವಾಸಮೂರ್ತಿಯವರು  ಲಂಕೇಶರ ಕಥಾ ಸಾಹಿತ್ಯದ ಕೆಲವು ಪರಿಕಲ್ಪನೆಗಳನ್ನು ಹೇಳುವಾಗ "ಹೊಸ ಲೈಂಗಿಕ ಸಂಬಂಧಗಳು ಮತ್ತು ಪರಕೀಯ ಅಥವಾ ಅನಾಥ ಪ್ರಜ್ಞೆ" ಹೇಗೆ  ಕಥೆಗಳಲ್ಲಿ ಪ್ರತಿಬಿಂಬಿಸಿವೆ ಎಂಬುದನ್ನು ಹೇಳುತ್ತಾರೆ.

ಗೌರಿ ಸುಂದರ್‌ರವರ ಸಂಪಾದಿಸಿರುವ 'ಸಾಹಿತ್ಯ ದರ್ಶನ' ಕೃತಿಯಲ್ಲಿ ಅನಂತಮೂರ್ತಿಯವರ ಕಾವ್ಯ-ನಾಟಕ, ಕಥೆ-ಕಾದಂಬರಿ, ವೈಚಾರಿಕತೆ, ನೆನಪುಗಳು-ಸಂದರ್ಶನ-ಇತ್ಯಾದಿ, ಎಂಬ ಅಧ್ಯಾಯಗಳಲ್ಲಿ ನಾಡಿನ ವಿವಿಧ ಲೇಖಕರು ಅನಂತಮೂರ್ತಿಯವರ ಬರಹಗಳು, ಚಿಂತನೆಗಳನ್ನು ಒಳಗೊಂಡಂತೆ ಲೇಖನಗಳನ್ನು ವಿಶ್ಲೇಷಣೆ ರೂಪದಲ್ಲಿ ಬರೆದಿದ್ದಾರೆ. ಈ ಕೃತಿಯಲ್ಲಿ ಎಸ್.ವಿ. ಪ್ರಭಾವತಿಯವರು 'ಅನಂತಮೂರ್ತಿ ಅವರ ಸೂರ್ಯನ ಕುದುರೆ-ಒಂದು ವಿಶ್ಲೇಷಣೆ' ಎಂಬ ಲೇಖನದಲ್ಲಿ ಕಥೆಗೆ ಸಂಬಂಧಿಸಿದಂತೆ "ಯಾವುದೇ ಸಂಸ್ಕೃತಿಯಾದರೂ ಕಪ್ಪು ಬಿಳುಪಿನ ಪಡಿಯಚ್ಚಾಗಿರದೆ ಒಳ್ಳೆಯ ಕೆಟ್ಟ ಅಂಶಗಳೆರಡನ್ನೂ ಹೊಂದಿರುತ್ತದೆ, ವೆಂಕಟನ ವ್ಯಕ್ತಿತ್ವನ್ನು ಹೇಳುವಾಗ ಭಾರತೀಯ ಸಂಸ್ಕೃತಿಯ ವಿಫಲ ಮುಖವನ್ನು ಸಾರಸಗಟಾಗಿ ತಳ್ಳಿ ಹಾಕಲಾಗುವುದಿಲ್ಲ. ಹಾಗೆಯೇ ಕಥೆಯ ಕೊನೆಯ ವಿಚಾರವನ್ನು ವಿಶ್ಲೇಷಿಸುವಾಗ ಭಾರತೀಯ ಸಂಸ್ಕೃತಿಯಲ್ಲಿ ಉತ್ತಮಾಂಶಗಳು ಇವೆ" ಎಂದು ಅಭಿಪ್ರಾಯಪಡುತ್ತಾರೆ.

ಕವಿತ ಎಸ್.ರವರು 'ಪೂರ್ಣಚಂದ್ರ ತೇಜಸ್ವಿ ಕಥೆಗಳಲ್ಲಿ ಸಂಘರ್ಷ ಮತ್ತು ಸ್ಥಿತ್ಯಂತರ' ಎಂಬ ಮಹಾಪ್ರಬಂಧದವನ್ನು ಮಂಡಿಸಿದ್ದಾರೆ. ಇದರಲ್ಲಿ ತೇಜಸ್ವಿಯವರ ಬದುಕುಬರಹಗಳ ಬಗ್ಗೆ ವಿವರಣೆ ನೀಡಿ ಅವರ ಒಟ್ಟು ಕೃತಿಗಳ ಬಗ್ಗೆ ವಿಶ್ಲೇಷಣೆ ಮಾಡಿರುತ್ತಾರೆ. ತೇಜಸ್ವಿಯವರ ಸಮಕಾಲೀನರ ವಿಚಾರಗಳನ್ನು ಒಳಗೊಂಡತೆ ಪರಿಸರದ ವಿಚಾರಗಳನ್ನು ಚರ್ಚಿಸುತ್ತಾ, ವಾಸ್ತವ ಆದರ್ಶ ಹಾಗೂ ಮೂರ್ತ ಅಮೂರ್ತ ಕಲ್ಪನೆಯಲ್ಲಿ ಸಾಂಸ್ಕೃತಿಕ ಸನ್ನಿವೇಶಗಳನ್ನು ನೋಡಿರುತ್ತಾರೆ.

ಶಿವಕುಮಾರ್ ಎಚ್‌ರವರ 'ಲಂಕೇಶ್‌ರ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ-ಒಂದು ಅಧ್ಯಯನ' ಕೃತಿಯು ಮೂಲತಃ ಲಂಕೇಶರ ಕಾದಂಬರಿ ಸಾಹಿತ್ಯವನ್ನು ಕುರಿತ ಸಂಶೋಧನ ಅಧ್ಯಯನವಾಗಿದೆ. ಲಂಕೇಶರವರ ಸಾಮಾಜಿಕ ಪ್ರಜ್ಞೆಯ ಬಗ್ಗೆ ವಿಶ್ಲೇಷಿಸುತ್ತಾ  ವ್ಯಕ್ತಿಯ

ಪ್ರೀತಿ, ದ್ವೇಷ, ಅಸೂಯೆಗಳನ್ನು ಒಳಗೊಂಡ ವಿಚಾರಗಳನ್ನು ಚರ್ಚಿಸಿದ್ದಾರೆ. ಗ್ರಾಮ ಸ್ವರೂಪದ ಕಲ್ಪನೆಯನ್ನು ಹಾಗೂ ಲಂಕೇಶರ ಸಮಕಾಲೀನರ ನಿರೂಪಣ ಶೈಲಿಯನ್ನು ವಿಶ್ಲೇಷಿಸುತ್ತಾ, ಸಮಕಾಲೀನ ಸಾಹಿತ್ಯದ ತೌಲನಿಕ ಅಧ್ಯಯನ ಮಾಡಿರುತ್ತಾರೆ.

'ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಬೆಸಗರಹಳ್ಳಿ ರಾಮಣ್ಣ ಮತ್ತು ಕುಂ ವೀರಭದ್ರಪ್ಪನವರ ಕಥೆಗಳಲ್ಲಿ ಗ್ರಾಮೀಣ ಸಂವೇದನೆಗಳು' ಎಂಬ ಸಂಶೋಧನ ಕೃತಿಯನ್ನು ರುದ್ರೇಶ್ ವಿ.ಜಿ.ಯವರು ಮಂಡಿಸಿರುತ್ತಾರೆ. ಅವರ ಅಧ್ಯಯನದಲ್ಲಿ ಕಥೆಗಾರರ ಬದುಕುಬರಹಗಳನ್ನು ಒಳಗೊಂಡಂತೆ, ಸಾಮಾಜಿಕ ಸಂವೇದನೆಗಳನ್ನು ಕಥೆಗಾರರ ಕೃತಿಗಳನ್ನು ಪ್ರತ್ಯೇಕವಾಗಿ ವಿಂಗಡಿಸಿ ಅಧ್ಯಯನ ಮಾಡಿ ಗ್ರಾಮೀಣ ಸಂವೇದನೆಯನ್ನು ತಮ್ಮ ಕೃತಿಯಲ್ಲಿ ಕಟ್ಟಿಕೊಡುವ ಪ್ರಯತ್ನ ಮಾಡಿರುತ್ತಾರೆ.

ಮಂಜುಳ ಎಂ.ಕೆ.ಯವರ 'ಯಶವಂತ ಚಿತ್ತಾಲ, ಶಾಂತಿನಾಥ ದೇಸಾಯಿ ಮತ್ತು ಪಿ.ಲಂಕೇಶ್ ಅವರ ಕಥೆಗಳಲ್ಲಿ ಸ್ತ್ರೀ ಪಾತ್ರಗಳು' ಸಂಶೋಧನ ಕೃತಿಯಲ್ಲಿ ಸ್ತ್ರೀಗೆ ಸಂಬಂಧಿಸಿದ ವಿಚಾರಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಕಥೆಗಾರರ ಹಿನ್ನೆಲೆಯಲ್ಲಿ ನೋಡಿರುತ್ತಾರೆ. ಅವರ ಸಂಶೋಧನೆಯ ಕೃತಿಯಲ್ಲಿ ಲಂಕೇಶರ ಕಥೆಗಳಲ್ಲಿ ಸ್ತ್ರೀ ಸಂಬಂಧಿಸಿದ ಅಧ್ಯಾಯ ಮಾಡಿಕೊಂಡು ಹೆಣ್ಣಿನ ಸಂಸಾರ, ಪ್ರೀತಿ, ಕಾಮ, ಜಾತಿಸಂಬಂಧಗಳು, ಅಂತರ್‌ಜಾತಿಯ ವಿವಾಹಗಳ ಅಂಶಗಳನ್ನು ಒಳಗೊಂಡಿದೆ, ವಿಚಾರಗಳನ್ನು ಚರ್ಚಿಸಿದ್ದಾರೆ. ಹಾಗೆಯೇ ಉಳಿದಂತೆ ಸಂಬಂಧ ಪಟ್ಟ ಕಥೆಗಾರರ ಅಧ್ಯಾಯಗಳಲ್ಲಿ ಸ್ತ್ರೀಯ ಬಗ್ಗೆ ವಿಶ್ಲೇಷಣೆ ಮಾಡಿರುತ್ತಾರೆ. ಅಂತಿಮವಾಗಿ ಮೂರು ಜನ ಕಥೆಗಾರರ ಒಟ್ಟು ವಿಚಾರಗಳನ್ನು ತೌಲನಿಕವಾಗಿ ನೋಡಿರುತ್ತಾರೆ.

'ಯು.ಆರ್.ಅನಂತಮೂರ್ತಿ ಮತ್ತು ಲಂಕೇಶರ ಕಥಾ ಸಾಹಿತ್ಯದ ತೌಲನಿಕ ಅಧ್ಯಯನ' ಸಂಶೋಧನಾ ಕೃತಿಯನ್ನು ಮಹೇಂದ್ರಮೂರ್ತಿ ಡಿ.ಎಂ. ರವರು ಸಂಬಂಧಿಸಿದ ಲೇಖಕರ ಕಥೆಗಳು, ಕಾದಂಬರಿಗಳನ್ನು ಪ್ರತ್ಯೇಕವಾದ ಅಧ್ಯಾಯಗಳಾಗಿ ವಿಂಗಡಿಸಿ ಅಧ್ಯಯನಕ್ಕೆ ಒಳಪಡಿಸಿ ಅಧ್ಯಯನ ಮಾಡಿರುತ್ತಾರೆ. ಹೆಣ್ಣು ಗಂಡುಗಳ ವಿಚಾರಗಳಿಗೆ ಸಂಬಂಧಿಸಿದಂತೆ ಇಬ್ಬರ ಕೃತಿಗಳಲ್ಲಿರುವ ವಿಚಾರಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿರುತ್ತಾರೆ. ಅಂತಿಮ ಭಾಗದಲ್ಲಿ ಕಥೆಗಳ ಸಾಮ್ಯತೆ, ವೈರುದ್ಯತೆಗಳನ್ನು ನೋಡಿರುತ್ತಾರೆ.

ಹೀಗೆ ಕಥೆಗಾರರ ಕಥೆಗಳು ಮತ್ತು ಸಂಶೋಧನಾ ಅಧ್ಯಯನಗಳು ಹಲವು ದೃಷ್ಟಿಕೋನಗಳನ್ನು ಇಟ್ಟುಕೊಂಡು ವಿಶ್ಲೇಷಣಾ ವಿಧಾನದಲ್ಲಿ ಮಂಡಿತವಾಗಿವೆ. ವಿವಿಧ ರೂಪದ ಬರವಣಿಗೆಗಳು ಈ ಸಮೀಕ್ಷೆಯ ಭಾಗದಲ್ಲಿದ್ದು ಅವುಗಳನ್ನು ಸಂಕ್ಷಿಪ್ತವಾಗಿ ನೋಡಿರುತ್ತೇನೆ.

************

## ಅಧ್ಯಾಯ-೨

## ಸ್ತ್ರೀ-ಪುರುಷ ಸಂಬಂಧಗಳು.

---

# ಅಧ್ಯಾಯ-೨

# ಸ್ತ್ರೀ-ಪುರುಷ ಸಂಬಂಧಗಳು.

ಸಮಾಜದ ಕುಟುಂಬ ವ್ಯವಸ್ಥೆಯಲ್ಲಿ ಸ್ತ್ರೀ-ಪುರುಷ ಸಂಬಂಧಗಳು ಅತಿ ಹೆಚ್ಚಿನ ಮಹತ್ವವನ್ನು ಹೊಂದಿವೆ. ಕೌಟುಂಬಿಕ ಜೀವನದಲ್ಲಿ ಬರುವ ಕುಟುಂಬದಲ್ಲಿನ ಸದಸ್ಯರ ಬದುಕಿನ ಕ್ರಮಗಳು ಒಟ್ಟು ಕುಟುಂಬದಲ್ಲಿ ಪ್ರಭಾವ ಬೀರುವುದನ್ನು ಕಾಣಬಹುದು. ಅವಿಭಕ್ತ ಕುಟುಂಬಗಳು ಸಾಂಸಾರಿಕ ಬದುಕಿನಲ್ಲಿ ಅತಿ ಮಹತ್ವವನ್ನು ಹೊಂದಿರುತ್ತವೆ. ಆ ರೀತಿಯ ಕೌಟುಂಬಿಕ ಜಗತ್ತಿನಲ್ಲಿ ಬೆಳೆಯುವ ಜನಾಂಗ ಸಮಾಜದಲ್ಲಿ ಎದುರಾಗುವ ಸಮಸ್ಯೆಗಳನ್ನು ಮೆಟ್ಟಿ ನಿಲ್ಲುವ ಶಕ್ತಿ ಬೆಳೆಸಿಕೊಳ್ಳುತ್ತಾರೆ.

ಕೌಟುಂಬಿಕ ವಾತಾವರಣದಲ್ಲಿ ಆರ್ಥಿಕವಾಗಿ ಸಂಸಾರಗಳು ಸದೃಢತೆಯನ್ನು ಹೊಂದುವುದು ಅನಿವಾರ್ಯವಾಗುತ್ತದೆ. ಅದಕ್ಕೆ ಅವಕಾಶ ದೊರಕದಿದ್ದರೆ ಬದುಕಿನಲ್ಲಿ ನಡೆಯುವ ಘಟನೆಗಳು ಏರುಪೇರಿನಿಂದ ಕೂಡುತ್ತವೆ. ಸಂಸಾರದ ಜೀವನ ನಿರ್ವಹಣೆಯಲ್ಲಿ ಪುರುಷನಷ್ಟೆ ಸ್ತ್ರೀ ಕೂಡ ಜವಬ್ದಾರಿಯನ್ನು ಹೊರುತ್ತಾಳೆ. ಪುರುಷನ ಅಹಂ ವಿಚಾರಗಳಿಂದ ಸಂಸಾರವು ಅರ್ಥ ಕಳೆದುಕೊಳ್ಳುವ ಸಂದರ್ಭದಲ್ಲಿ ಅದನ್ನು ಕಾಪಾಡಿಕೊಳ್ಳುವ ಸನ್ನಿವೇಶ ಬಂದಾಗ ಹೆಣ್ಣಿನ ಪಾತ್ರ ಅತಿಮುಖ್ಯವಾಗಿರುತ್ತದೆ. ಆಕೆಯೂ ಕೂಡ ದುಡಿಯುವ ಮೂಲಕ ಸಂಸಾರದ ಆರ್ಥಿಕ ನಿರ್ವಹಣೆಯಲ್ಲಿ ಪಾಲುದಾರಳಾಗುತ್ತಾಳೆ.

ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ದುಡಿಯುವ ಹೆಣ್ಣು ಯಜಮಾನಿಕೆಯ ಅಡಿಯಲ್ಲಿ ಶೋಷಣೆಗೆ ಒಳಗಾಗುವ ಸಾಧ್ಯತೆಗಳು ಇರುತ್ತದೆ. ಅವಶ್ಯಕತೆಗಿಂತ ಅನಿವಾರ್ಯವಾಗಿ ದೈಹಿಕ ಸಂಬಂಧಗಳನ್ನು ಬೆಳೆಸುವ ಪರಿಸ್ಥಿತಿಗೆ ಸಿಲುಕುತ್ತಾಳೆ. ಅದರೂ ಅಂತಿಮವಾಗಿ ಪುರುಷ ಸಮಾಜದಲ್ಲಿ ಹೆಣ್ಣು ಶೋಷಣೆಗೆ ಒಳಗಾಗುತ್ತಾಳೆ.

ಸ್ತ್ರೀ-ಪುರುಷ ಸಂಬಂಧಗಳ ಶೀರ್ಷಿಕೆಯ ಅಡಿಯಲ್ಲಿ ಸಾಂಸಾರಿಕ ಜೀವನ, ವಿವಾಹ-ವಿವಾಹೇತರ ದೈಹಿಕ ಸಂಬಂಧಗಳು ಮತ್ತು ಲಿಂಗಧಾರಿತ ಶೋಷಣೆಯ ಮುಖಗಳನ್ನು ವಿಶ್ಲೇಷಿಸಲಾಗಿದೆ.

## ೨.೧. ಸಾಂಸಾರಿಕ ಜೀವನ.

ಗ್ರಾಮೀಣ ಭಾರತವನ್ನು ಸದೃಢಗೊಳಿಸುವಲ್ಲಿ ಹಾಗೂ ಮಾನವೀಯ ಮೌಲ್ಯಗಳನ್ನು ಜೀವಂತವಿಡುವಲ್ಲಿ ಅವಿಭಕ್ತ ಕುಟುಂಬಗಳ ಪಾತ್ರ ಮಹತ್ವದ್ದಾಗಿದೆ. ಆರ್ಥಿಕ, ಸಾಮಾಜಿಕ ಕಾರಣಗಳಿಗೆ ಈ ಕುಟುಂಬಗಳು ಬಿಗಿಯಾದ ಬಂಧವನ್ನು ನಿರ್ಮಿಸಿವೆ. ಇಂದು ಹೆಚ್ಚಾದ

ಆರ್ಥಿಕ ಪರಿಸ್ಥಿತಿಗಳ ಅವಲಂಬನೆಯಿಂದ ಅವಿಭಕ್ತ ಕುಟುಂಬಗಳು ತಮ್ಮ ಮೂಲ ರೂಪವನ್ನು ಕಳೆದುಕೊಳ್ಳುತ್ತಿವೆ. ಅನಂತಮೂರ್ತಿಯವರು “ಹಳ್ಳಿಗಳಲ್ಲಿನ ಜನರಿಗೆ ಇರುವಲ್ಲೇ ದುಡಿದು ಬದುಕುವ ಅವಕಾಶ ಲಭ್ಯವಾಗುತ್ತಿದ್ದರೆ ಅವರು ಪಟ್ಟಣಗಳ ಕುರಿತು ಮೋಹಿತರಾಗುತ್ತಿರಲಿಲ್ಲ. ಪಟ್ಟಣಗಳಲ್ಲಿ ಬೃಹತ್ ಯಂತ್ರಗಳು ಕಾರ್ಖಾನೆಗಳನ್ನು ಪ್ರವೇಶಿಸುತ್ತ ಹೆಚ್ಚು ಉತ್ಪನ್ನಗಳನ್ನು ಮಾರುಕಟ್ಟೆಗಳಿಗೆ ಬಿಡುಗಡೆ ಮಾಡುವ ಜೊತೆಗೆ ಹೆಚ್ಚು ನೌಕರರನ್ನೂ ನಿರುದ್ಯೋಗಿಗಳನ್ನಾಗಿಸುತ್ತವೆ. ಆಧುನಿಕ ಯಂತ್ರಗಳ ಆಗಮನ ನೌಕರರ ಸಂಖ್ಯೆಯನ್ನು ಕಡಿತಗೊಳಿಸುವುದು, ಮಾಲೀಕರುಗಳಿಗೆ ಲಾಭದಾಯಕವೇನೋ ಹೌದು. ಆದರೆ ಜನಸಂಖ್ಯೆಯ ಭಾರ ಹೊತ್ತಿರುವ ಭಾರತದಲ್ಲಿ ನಿರುದ್ಯೋಗಿಗಳೇ ಹೆಚ್ಚುತ್ತ ಹೋದರೆ ಪಾತಕಗಳ ಸಂಖ್ಯೆಯೂ ಹೆಚ್ಚುತ್ತ ಹೋಗುತ್ತದೆ.”[೧] ಎಂದು ಹೇಳಿದ್ದಾರೆ.

ಇಂದು ನಾಗರಿಕ ಸಮಾಜ ಬೆಳೆದಂತೆ ಅವಿಭಕ್ತ ಕುಟುಂಬಗಳು, ಅಪ್ರಸ್ತುತವೆನಿಸುವ ಮಟ್ಟಿಗೆ ದೂರವಾಗುತ್ತಿವೆ. ಗೋಪಾಲಕೃಷ್ಣ ಅಡಿಗರು ‘ಎಂದೆಂದೂ ಮುಗಿಯದ ಕಥಾ ಸಂಕಲನದ ಮುನ್ನುಡಿಯಲ್ಲಿ “ಅತಿ ಪುರಾತನ ಕಾಲದಲ್ಲೇ ನಮ್ಮ ದೇಶ ಧರ್ಮದ ತಳಹದಿಯ ಮೇಲೆ ಸಮಾಜವನ್ನು ಕಟ್ಟಿ ವ್ಯಕ್ತಿ ಮತ್ತು ಸಮಾಜಗಳ ವಿಭಿನ್ನ ಧರ್ಮಗಳಲ್ಲಿ ಒಂದು ಸಮನ್ವಯವನ್ನೂ ಸಾಮರಸ್ಯವನ್ನೂ ಸ್ಥಾಪಿಸಿತು. .......... ಈ ಜಗತ್ತು ಇದ್ದ ಹಾಗೆ ಇರತಕ್ಕದ್ದಲ್ಲ– ಸದಾ ಭ್ರಮಣ ಶೀಲ. ಅತ್ಯುತ್ತಮವಾದ ವ್ಯವಸ್ಥೆಯೂ ಕೂಡಾ ಸಡಿಲಿಸಿ ಅವನತಿ ಪರವಾಗಿ ಮಾನವಕುಲ ಪಡಬಾರದ ಪಾಡುಪಟ್ಟು ಮತ್ತೆ ತನ್ನ ಅಗ್ನಿ ದಿವ್ಯದಿಂದ ಹೊರಬಿದ್ದು ಪುನಃ ತನ್ನ ಸಮತೂಕಕ್ಕೆ ಬೇಕಾದ ಧರ್ಮವನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಇದೂ ಮತ್ತೆ ಮತ್ತೆ ನಡೆಯುವ ಕೆಲಸ.”[೨] ಎಂದು ಹೇಳುತ್ತಾರೆ.

ಮಾನವನ ನಾಗರಿಕ ಸಮಾಜದಲ್ಲಿ ಬದಲಾವಣೆಗಳು ಸಹಜವಾಗಿ ನಡೆಯುತ್ತಿರುತ್ತವೆ. ಇದು ಸಹಜವಾಗಿ ನಡೆಯುವ ಜೀವಂತ ಪ್ರಕ್ರಿಯೆ. ಆಧುನಿಕ ಬದಲಾವಣೆಗಳು ಕ್ರಮಬದ್ಧವಾದ ಯೋಚನೆಗಳಿಂದ ಕೂಡಿ ಯೋಜನೆಗಳು ಕಾರ್ಯರೂಪಕ್ಕೆ ಬಂದಾಗ ಯಾವ ಸಮಸ್ಯೆಯನ್ನು ತಂದೊಡ್ಡುವುದಿಲ್ಲ. ಒಂದು ವೇಳೆ ಬದಲಾವಣೆಗಳು ವಿವೇಕರಹಿತವಾಗಿದ್ದರೆ ಸಮಸ್ಯೆಗಳನ್ನು ಉಂಟುಮಾಡುತ್ತವೆ. ಕುಟುಂಬಗಳನ್ನು ದುರಂತಕ್ಕೆ ಕೊಂಡೊಯ್ಯುತ್ತವೆ. ಆ ರೀತಿಯ ಸನ್ನಿವೇಶವನ್ನು ತೇಜಸ್ವಿಯವರ ‘ಅಬಚೂರಿನ ಪೋಸ್ಟಾಫೀಸು’ ಕಥೆಯಲ್ಲಿ ಕಾಣಬಹುದು. ಕಥೆಯಲ್ಲಿನ ಬೋಬಣ್ಣನು ಸಕಲೇಶಪುರದ ಹತ್ತಿರ ಕೊಡಲಿಪೇಟೆಯ ಹಳ್ಳಿಯವನು. ಅವನು ಮಾಚಮ್ಮಳ ಮಗಳು ಕಾವೇರಿಯನ್ನು ಮದುವೆಯಾಗಿ ಇಬ್ಬರು ಮಕ್ಕಳನ್ನು ಪಡೆದು ಅಲ್ಲೀಜಾನ್ ಸಾಬರ ತೋಟದಲ್ಲಿ ರೈಟರ್ ಕೆಲಸಕ್ಕೆ ಸೇರಿರುತ್ತಾನೆ. ಹೊಸದಾಗಿ ಆರಂಭವಾಗಿದ್ದ ಅಬಚೂರಿನ ಪೋಸ್ಟಾಫೀಸಿನಲ್ಲಿ ಹಂಗಾಮಿಯಾಗಿ ಪೋಸ್ಟ್‌ಮಾಸ್ತರನಾಗಿರುತ್ತಾನೆ. ಅಬಚೂರಿನಲ್ಲಿ ಆರಂಭವಾದ

ಪೋಸ್ಟಾಫೀಸು ಆಧುನಿಕತೆಯ ಬದಲಾವಣೆಯನ್ನು ತರುವ ಬದಲು ಬೋಬಣ್ಣನ ಬದುಕಿನಲ್ಲಿ ಸಮಸ್ಯೆಯನ್ನು ತರುತ್ತದೆ.

ಹಳ್ಳಿಯ ಜನರು ಬೋಬಣ್ಣನನ್ನು ಪೋಸ್ಟ್ ಮಾಸ್ತರೆಂದು ಕರೆಯುತ್ತಿದ್ದಾಗ ಆತನಿಗೆ ತಾನೊಬ್ಬ ದಿಲ್ಲಿಯೊಡನೆ ಸಂಪರ್ಕ ಹೊಂದಿರುವ ಭಾರತದ ಪ್ರಜೆ ಎಂದು ಹೆಮ್ಮೆಯುಂಟಾಗುತ್ತಿರುತ್ತದೆ. ಆದರೆ ಈ ಬದಲಾವಣೆಯ ಪ್ರಮುಖವಾದ ಎರಡು ಘಟನೆಗಳು ಸಂಸಾರವನ್ನು ತಲ್ಲಣಕ್ಕೀಡು ಮಾಡುತ್ತವೆ.

ಮಂಗಳೂರಿನಲ್ಲಿ ಓದುತ್ತಿದ್ದ ಅಲ್ಲೀಜಾನ್ ಸಾಬರ ಮಗ ಅಜೀಜ್‌ಗೆ, ಪೋಸ್ಟ್ ಮೂಲಕ ಕಳುಹಿಸಿದ್ದ ಕವರ್‌ನ್ನು ಕದ್ದು ಕುತೂಹಲದಿಂದ ನೋಡುತ್ತಾನೆ. ಆ ಕವರಿನಲ್ಲಿ ನಗ್ನಳಾಗಿದ್ದ ಹೆಂಗಸಿನ ಚಿತ್ರವೊಂದು ಕಾಣುತ್ತದೆ. ಬೋಬಣ್ಣನಿಗೆ 'ಹೆಂಡತಿಯ ನಗ್ನತೆಯ ಸ್ಪರ್ಶದ ಅರಿವಿತ್ತೇ ಹೊರತು ಯಾವತ್ತೂ ಬೆಳಕಿನಲ್ಲಿ ಕಂಡೇ ಇರಲಿಲ್ಲ.'[೩] ನಗ್ನತೆಯ ಫೋಟೋವು ಸಹಜವಾಗಿ ಬೋಬಣ್ಣನ ಮನಸ್ಸಿನ ಮೇಲೆ ಪರಿಣಾಮ ಬೀರತೊಡಗುತ್ತದೆ. ಮುಂದುವರೆದಂತೆ, ನಗ್ನಳಾಗಿದ್ದ ಹೆಂಗಸಿನ ಹಾವಭಾವಗಳ ಕಲ್ಪನೆಗಳ ಚಿತ್ರವನ್ನು ತನ್ನ ಹೆಂಡತಿಯ ಮೂಲಕ ನೋಡಲು ಬಯಸುತ್ತಾನೆ. ಈ ರೀತಿ ಅವರಿವರ ಕಾರ್ಡುಗಳನ್ನು ಓದುವುದು, ಯಾರಿಗಾದರೂ ಯಾವುದಾದರೂ ಪುಸ್ತಕ ಬಂದರೆ ಅದನ್ನು ಉಪಾಯವಾಗಿ ಬಿಚ್ಚಿ ಓದುವುದು, ಅನಂತರ ಅದನ್ನು ತಲುಪಿಸುವುದು ಮುಂತಾದ ಚೇಷ್ಟೆಗಳನ್ನು ಸಹಜವಾಗಿ ಮೈಗೂಡಿಸಿಕೊಂಡನು.

ಮತ್ತೊಂದು ಸನ್ನಿವೇಶದಲ್ಲಿ ಬೇಲಾಯುದ ಎಂಬುವವನಿಗೆ ಪತ್ರ ಬಂದಿರುತ್ತದೆ. ಆ ಪತ್ರದಲ್ಲಿ ಬೇಲಾಯುದನ ಮಗಳು ಪದ್ಮಿ ದಾರಿತಪ್ಪಿರುತ್ತಾಳೆ ಎಂಬುದನ್ನು ಬರೆದಿರುತ್ತದೆ. ಈ ವಿಚಾರವನ್ನು ಕೂಡ ಬೋಬಣ್ಣನು ಓದುತ್ತಾನೆ. ಪದ್ಮಿಯ ಪ್ರಸಂಗ ಹಾಗೂ ಅಜೀಜ್‌ನಿಗೆ ಬಂದಿದ್ದ ಪೋಟೋಗಳಿಂದ ಮನಸ್ಸು ಕದಡುತ್ತದೆ. ಅವನಲ್ಲಿ ಅಸಂತೃಪ್ತಿಯು ಉಂಟಾಗುತ್ತದೆ. ಇವುಗಳಿಂದ ಹೆಚ್ಚಾಗಿ ಕಾವೇರಿಯ ಸಖ್ಯವನ್ನು ಹೆಚ್ಚಾಗಿ ಬಯಸಲು ಮುಂದಾಗುತ್ತಾನೆ. ಆದರೆ ಅಂತಹ ಕ್ಷಣಗಳಿಂದ ಕಾವೇರಿ ದೂರವಾಗತೊಡಗುತ್ತಾಳೆ. ಇದರಿಂದ ಕೋಪಗೊಂಡ ಬೋಬಣ್ಣನು ಹೆಂಡತಿಯನ್ನು 'ಶನಿ' ಎಂದುಕೊಳ್ಳುತ್ತಾನೆ. ಒಮ್ಮೆ ಗಂಡಹೆಂಡತಿಯರ ನಡುವೆ ದೈಹಿಕ ಸಂಬಂಧದ ವಿಚಾರವಾಗಿ ದೊಡ್ಡ ರಾದ್ಧಾಂತವಾಗುತ್ತದೆ.

"ಥತ್ ದರಿದ್ರವಳೆ ನಿನಗೆ ತೆವಲು ಹೆಚ್ಚಾದಾಗ ಮುದುಕಿಗೆ ಕಾಣದಂತೆ ಕದ್ದು ಕದ್ದು ಬರ್‍ತಿದ್ದೆ! ಈಗ ಹೀಗನ್ತೀಯ. ಸೂಳೇರು ವಾಸಿ ನಿನಗಿಂತ. ಸಿಡಿ ಸಿಡಿ ಅನ್ನದೆ ದುಡ್ಡಿಸ್ಕೊಂಡು ಕುಪ್ಪಸ ಬಿಚ್ಚುತ್ತಾರೆ. ಎಂದು ರೇಗಿದ. ಬೋಬಣ್ಣ ಸೂಳೆ ಮನೆಗೇನೂ ಹೋಗಿರಲಿಲ್ಲ. ಕಾವೇರಿ ಮನ ನೋಯಿಸಲಿಕ್ಕಾಗಿ ಒಂದು ಅಂದಾಜಿನ ಮೇಲೆ ಹೇಳಿದ್ದ. ಕಾವೇರಿಗೂ ಇದು ಗೊತ್ತಿದ್ದಿತು.

ಕಾವೇರಿಗೂ ಸಿಟ್ಟು ಬಂತು. 'ಹಂಗೆ ಹತ್ತೂ ಕಡೆ ತೆವಲು ತೀರಿಸಿಕೊಂಡಿದ್ದರೇ ಮನೇಲಿ ಹಿಂಗಾಗೋದು' ಎಂದಂದಳು."[೪]

ಈ ಎರಡು ಅಂಶಗಳ ಪರಿಣಾಮದಿಂದ ಅಶಾಂತಿಗೆ ಒಳಗಾಗುತ್ತಾನೆ. ಇವು ಆತನ ಸಾಂಸಾರಿಕ ಬದುಕಿನ ಮೇಲೆ ಪರಿಣಾಮ ಬೀರುತ್ತದೆ. ಗಂಡ-ಹೆಂಡತಿಯ ಸಂಬಂಧಗಳು ಹಾಳಾಗುತ್ತವೆ. ಮುಂದೆ ವ್ಯತಿರಿಕ್ತ ಘಟನೆಗಳು ಜರುಗಿ ಸಂಸಾರವೇ ಹಾಳಾಗುತ್ತವೆ. ಬೋಬಣ್ಣನು ಅಬಚೂರಿನಿಂದ ದೂರ ಹೋಗುತ್ತಾನೆ. ಪೋಸ್ಟಾಫೀಸು ಮುಚ್ಚಲ್ಪಡುತ್ತದೆ. ಕಾವೇರಿ ಮಾಚಮ್ಮನೊಂದಿಗೆ ತೋಟದ ಕೆಲಸಕ್ಕೆ ಹೋಗುತ್ತಾಳೆ. ಆಧುನಿಕತೆಯ ಸಂಕೇತ ಪೋಸ್ಟಾಫೀಸು. ಅದರ ಬಳಕೆ ಸದ್ಬಳಕೆಯಾಗದಿದ್ದರೆ ತಲ್ಲಣಗಳು ಶುರುವಾಗುತ್ತವೆ. ಬೋಬಣ್ಣನಂತಹವರ ಸಂಸಾರಗಳು ಹಾಳಾಗುತ್ತವೆ ಎಂಬುದನ್ನು ನೋಡಬಹುದು.

ವಿವೇಕ ರಹಿತವಾದ ಕುತೂಹಲಗಳ ಬೆನ್ನುಹತ್ತಿದ ಬೋಬಣ್ಣನು ಈ ಸಮಸ್ಯೆಯಿಂದ ಹೊರಬರಲಾರನು. ಈ ರೀತಿಯ ಘಟನೆಗಳು ಸಮಸ್ಯೆಗಳನ್ನು ಸೃಷ್ಟಿಸುತ್ತವೆ ಎಂಬುದಕ್ಕೆ 'ಅಬಚೂರಿನ ಪೋಸ್ಟಾಫೀಸು' ಕಥೆ ನಿದರ್ಶನವಾಗುತ್ತದೆ.

ತೇಜಸ್ವಿಯವರು ಆಧುನಿಕತೆಯ ನಿರ್ವಹಣೆಯ ಕೊರತೆಗಳು, ಸಂಸಾರಗಳ ಸಮಸ್ಯೆಗಳಿಗೆ ಹೇಗೆ ಕಾರಣವಾಗುತ್ತವೆ ಎಂಬುದನ್ನು ಕಥೆಗಳ ಮೂಲಕ ವಿವರಿಸಿದ್ದಾರೆ. ಆ ರೀತಿಯ ಕಥೆಗಳಲ್ಲಿ 'ತುಕ್ಕೋಜಿ' ಕಥೆಯಲ್ಲಿ ಆಗುವ ಬದಲಾವಣೆಗಳನ್ನು ಗಮನಿಸಬಹುದಾಗಿದೆ. ತುಕ್ಕೋಜಿಯು ಮೂಲತಃ ಟೈಲರ್ ಆಗಿರುತ್ತಾನೆ. "ತುಕ್ಕೋಜಿಯ ಮನತೆನವೇ ದರ್ಜಿಯದು. ಅವನ ತಂದೆ ಹಾಸನದ ಹೆಸರಾಂತ ಬಟ್ಟೆ ವ್ಯಾಪಾರಿ. ಆದರೆ ಮದುವೆ ಸಮಯದಲ್ಲಿ ತುಕ್ಕೋಜಿ ತಂದೆಗೆ ಅವಿಧೇಯನಾಗಿ ಅನೇಕ ವರದಕ್ಷಿಣೆ ಸಹಿತವಾಗಿ ಬಂದ ಹೆಣ್ಣುಗಳನ್ನು ತಿರಸ್ಕರಿಸಿ, ಕೃಷ್ಣಾಬಾಯಿ ಎಂಬ ವಿಧವೆಯೊಬ್ಬರ ಮಗಳಾದ ಸರೋಜಳನ್ನು ಹಠದಿಂದ ಮದುವೆಯಾಗಿದ್ದನು. ಈ ಕಾರಣಕ್ಕಾಗಿ ರಾದ್ಧಾಂತವಾಗಿ ತುಕ್ಕೋಜಿ ತಂದೆಯ ಆಸ್ತಿಪಾಸ್ತಿಯನ್ನೆಲ್ಲಾ ತಿರಸ್ಕರಿಸಿ ಹೆಂಡತಿಯೊಂದಿಗೆ ಹೊಸದಾಗಿ ಪೇಟೆಯಾಗಿ ರೂಪುಗೊಳ್ಳುತ್ತಿದ್ದ ಗುರುಗಳ್ಳಿಗೆ ಬಂದಿದ್ದನು."[೫] ಹೀಗೆ ಬಂದ ತುಕ್ಕೋಜಿ ಹಣವಿಲ್ಲದಿದ್ದರೂ ದುಡಿಮೆಯನ್ನು ತಿಳಿದವನಾಗಿದ್ದವನು. ಪರಿಣಾಮವಾಗಿ ಆಧುನಿಕತೆಯನ್ನು ಮೈಗೂಡಿಸಿಕೊಂಡು ಬೆಳೆಯುತ್ತಿದ್ದ ಗುರುಗಳ್ಳಿಯಲ್ಲಿ ಬದುಕನ್ನು ಕಟ್ಟಿಕೊಳ್ಳುತ್ತಾನೆ. ಹೆಂಡತಿ ಸರೋಜಳು ಕೂಡ ಗಂಡನ ಕಾಯಕದಲ್ಲಿ ಸಹಾಯ ಮಾಡುತ್ತಿರುತ್ತಾಳೆ. ಒಂದು ಕಡೆ ಹಳ್ಳಿ ಬೆಳೆಯುತ್ತಿರುತ್ತದೆ. ಮತ್ತೊಂದು ಕಡೆ ತುಕ್ಕೋಜಿ ವೃತ್ತಿಯಲ್ಲಿ ಪ್ರವರ್ಧಮಾನಕ್ಕೆ ಬರುತ್ತಿರುತ್ತಾನೆ. ಈ ಕಥೆಯು ಇಷ್ಟಕ್ಕೆ ನಿಲ್ಲುವುದಿಲ್ಲ. ಹಳ್ಳಿಯ ಬದಲಾವಣೆಯಂತೆ ತುಕ್ಕೋಜಿ ಸಂಸಾರದಲ್ಲೂ ಬದಲಾವಣೆ ಆಗುತ್ತದೆ. ಮಗು ಜನಿಸಿ, ಬೆಳವಣಿಗೆಯಾದಂತೆ ತುಕ್ಕೋಜಿಯ ವೃತ್ತಿಯಲ್ಲೂ ಸಮಸ್ಯೆ ಪ್ರಾರಂಭವಾಗುತ್ತದೆ.

ಮಗುವಿನ ಆಟಗಳು ಇವನ ಟೈಲರಿಂಗ್ ಕೆಲಸಕ್ಕೆ ತೊಂದರೆಯನ್ನು ಉಂಟುಮಾಡುತ್ತವೆ. ಗಂಡ-ಹೆಂಡತಿಯರ ನಡುವೆ ಮನಸ್ತಾಪಗಳು ಹೆಚ್ಚಾಗುತ್ತವೆ. ಸರೋಜಳು ಒಮ್ಮೆಯಂತೂ ಗಂಡನಿಗೆ " ನೀವು ಹುಟ್ಟಿಸಿದ್ದನ್ನು ಒಂದು ನಿಮಿಷಾನೂ ನೋಡಿಕೊಳ್ಳೋದಕ್ಕೆ ನಿಮಗೆ ಆಗದಿದ್ದರೆ ನಮಗೆ ಮಕ್ಕಳು ಯಾಕೆ ಹೇಳಿ, ಸದಾ ದುಡಿಯೋದು! ಹೊಲಿಯೋದು! ಅಂತ ಕೆಲಸದ ಮೇಲೆ ಇದ್ದರೆ ಹೆಂಡತಿ ಯಾಕೆ? ಮಕ್ಕಳು ಯಾಕೆ? ನಿಮಗೆ. ಒಂದು ಮಾತಿಲ್ಲ, ಒಂದು ಕತೆ ಇಲ್ಲ. ನಮ್ಮ ಬಾಯನ್ನೂ ಹೊಲಿದುಕೊಂಡು ಬಿಟ್ಟರೆ ಒಳ್ಳೇದಂತ ಕಾಣ್ತದೆ "[೬] ಎಂದು ರೇಗುತ್ತಾಳೆ.

ತುಕ್ಕೋಜಿಯ ದುಡಿಮೆಯೂ ಕೂಡ ದಿನೇ ದಿನೇ ಹದಗೆಡುತ್ತದೆ. ಬಟ್ಟೆಯನ್ನು ಹೊಲೆಯುವ ಸಂದರ್ಭಗಳಂತೂ ತನ್ನ ವೃತ್ತಿಯನ್ನು ಮರೆಸಿದಂತಾಗಿ ಮಾಡುತ್ತವೆ. ಗುರುಗಹಳ್ಳಿಗೆ ರೈಲು ನಿಲ್ದಾಣ ಆಗುತ್ತದೆ. ಹೇಮಾವತಿ ನದಿಗೆ ಸೇತುವೆ ಕಟ್ಟುವ ಕೆಲಸ ಆರಂಭವಾಗುತ್ತದೆ. ಮಗ ಕಿಟ್ಟು ಬೆಳೆದಂತೆ ಒಟ್ಟಾರೆ ಊರು ಕೂಡ ಬೆಳೆಯುತ್ತದೆ. ಈ ನಾಗರೀಕತೆಯ ವಿಕಾಸದ ಪರಿಣಾಮ ಹೋಟೆಲ್ಲು, ಆಸ್ಪತ್ರೆಯ ಮೇಲೆ ಪರಿಣಾಮ ಬೀರಿದಂತೆ ತುಕ್ಕೋಜಿಯ ಮೇಲೂ ಆಗುತ್ತದೆ. ಬಟ್ಟೆ ಹೊಲಿಸಿಕೊಳ್ಳುವವರು ಬರಬರುತ್ತಾ ತುಕ್ಕೋಜಿಯ ಟೈಲರಿಂಗ್ ಬಗ್ಗೆ ಅಸಹನೆಯನ್ನು ಹೊರಹಾಕತೊಡಗುತ್ತಾರೆ. ಹುಡುಗಿಯ ಕುಪ್ಪಸ ಹೊಲಿಯುವ ರೀತಿ ತಪ್ಪುತ್ತದೆ. ಕಾಲೇಜಿನ ಉಪಾಧ್ಯಾಯನ ಪ್ಯಾಂಟಿನ ಹೊಲಿಗೆ ಸರಿಬರುವುದಿಲ್ಲ. ಹೀಗೆ ಒಂದೊಂದು ರೀತಿಯ ತಪ್ಪುಗಳು ತನ್ನ ವೃತ್ತಿಯಲ್ಲಿ ಕಾಣುತ್ತವೆ.

ಕಿಟ್ಟು ಒಮ್ಮೆ ಆಟವಾಡುತ್ತಿರುವಾಗ ಕ್ರಾಲರ್ ಮೇಲೆ ಕಲ್ಲು ಹೊಡೆಯುತ್ತಾನೆ. ಆಗ ಡ್ರೈವರ್ ಬಂದು ತುಕ್ಕೋಜಿ ಮತ್ತು ಸರೋಜಳಿಗೆ ಅವರ ಮಗನ ವಿಚಾರವನ್ನು ತಿಳಿಸುತ್ತಾನೆ. ಇದು ಮುಂದುವರೆದಂತೆ ಒಂದು ದಿನ ಡ್ರೈವರ್ ಕಿಟ್ಟುವನ್ನು ಕ್ರಾಲರ್ ಮೇಲೆ ಕುಳ್ಳರಿಸಿಕೊಂಡು ಹೋಗುತ್ತಾನೆ. ತುಕ್ಕೋಜಿ ಮತ್ತು ಸರೋಜಳಿಗೆ ಮಗನು ಕಾಣದಿದ್ದಾಗ ಭಯ,ಆತಂಕ, ಆವರಿಸತೊಡಗುತ್ತದೆ. ಸರೋಜಳಂತೂ ಸೇತುವೆಯ ವಿಷಯಕ್ಕೆ ಸಂಬಂಧಿಸಿದಂತೆ ನರಬಲಿ ವಿಚಾರ ತಲೆಯೊಳಗೆ ಹೊಕ್ಕು ಮಗನ ವಿಚಾರವಾಗಿ ಹೆದರುತ್ತಾಳೆ. ಸ್ವಲ್ಪ ಸಮಯದ ನಂತರ ಕ್ರಾಲರ್ ಡ್ರೈವರ್ ಆ ಮಗುವನ್ನು ತಂದು ಬಿಟ್ಟಾಗ ಗಂಡ ಹೆಂಡತಿಯರಿಗೆ ನಿಟ್ಟುಸಿರು ಮತ್ತು ತಮ್ಮ ಭ್ರಾಂತಿಯ ಬಗ್ಗೆ ನಾಚಿಕೆಯಾಗುತ್ತದೆ. ಆಧುನಿಕತೆಗೆ ಗ್ರಾಮೀಣ ಜನತೆಯ ಪ್ರತಿಕ್ರಿಯೆ ಹೇಗಿರುತ್ತದೆ ಎಂಬುದನ್ನು ತೇಜಸ್ವಿಯವರು ತೋರಿಸಿದ್ದಾರೆ.

ಗ್ರಾಮೀಣ ಭಾಗದ ಕುಟುಂಬಗಳ ವಿಚಾರಕ್ಕೆ ಸಂಬಂಧಿಸಿದಂತೆ, ತೇಜಸ್ವಿಯವರ ಕಥೆಗಳಲ್ಲಿ ಮತ್ತೊಂದು ಪ್ರಮುಖ ಅಂಶವನ್ನು ಗಮನಿಸುವುದಾದರೆ ಪುರುಷರ ಸರಿಸಮಾನವಾಗಿ ಸ್ತ್ರೀಯರನ್ನು ಕಥೆಯ ಚೌಕಟ್ಟಿನಲ್ಲಿ ತರುತ್ತಾರೆ. ಆ ಪಾತ್ರಗಳ ಮೂಲಕ ಸಮಾಜದ ಸಾಂಸಾರಿಕ ಚಿತ್ರಣವನ್ನು ಎಣೆಯುತ್ತಾರೆ. ಅವರ 'ಕಿರಗೂರಿನ ಗಯ್ಯಾಳಿಗಳು'

ಕಥೆಯ ಹಂದರದಲ್ಲಿ ದಾನಮ್ಮಳ ಮತ್ತು ನಾಗಮ್ಮಳ ಪಾತ್ರವನ್ನು ತಂದಿದ್ದಾರೆ. ಒಂದು ಹೆಣ್ಣಿನ ವೇದನೆಗಳಿಗೆ ಮತ್ತೊಂದು ಹೆಣ್ಣು ಸ್ಪಂದಿಸುವ ರೀತಿಯನ್ನು ವಿಭಿನ್ನವಾಗಿ ಕಥೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಕಾಳೇಗೌಡನ ಹೆಂಡತಿ ನಾಗಮ್ಮ. ಗಂಡನು ಸೊಂಟ ಉಳುಕಿನ ನೋವಿನಿಂದ ಸಂಕಟಪಡುವಾಗ ಅನೇಕ ಔಷಧಿಗಳನ್ನು ಹಚ್ಚಿ ತಿಕ್ಕಿದ್ದರೂ ಪ್ರಯೋಜನ ವಾಗುವುದಿಲ್ಲ. ಕೇರಳದ ನಂಬೂದರಿ ಪಂಡಿತ ಕಾಳೇಗೌಡನ ನೋವನ್ನು ವಾಸಿ ಮಾಡಲು ಬರುತ್ತಾನೆ. ಆದರೆ ಕಾಳೇಗೌಡನ ಖಾಯಿಲೆ ವಾಸಿಮಾಡುವ ಬದಲು ಆ ಪಂಡಿತನು ನಾಗಮ್ಮಳಿಗೆ ಕಾಮನೆಗಳನ್ನು ಉಂಟುಮಾಡುತ್ತಾನೆ. ಕೊನೆಗೆ ನಾಗಮ್ಮ ಗಂಡನನ್ನು ಬಿಟ್ಟು ಪಂಡಿತನ ಹಿಂದೆ ಹೋಗುತ್ತಾಳೆ. ಮೊದಲೆ ಕಾಳೇಗೌಡನು ನಾಗಮ್ಮಳಿಗೆ ಮಕ್ಕಳಾಗಲಿಲ್ಲವೆಂದು ಯೋಚಿಸಿ ಮತ್ತೊಂದು ಮದುವೆಯಾಗಬೇಕೆಂದು ತೀರ್ಮಾನಿಸಿರುತ್ತಾನೆ. ಆದರೆ ಈ ಘಟನೆಯ ಪರಿಣಾಮದಿಂದ ತನಗೆ ಎರಡನೆಯ ಮದುವೆ ಸಾಧ್ಯವಾಗಲಿಲ್ಲವೆಂದು ಕಾಳೇಗೌಡನು ತನ್ನ ಅಳಲನ್ನು ತೋಡಿಕೊಳ್ಳುತ್ತಾನೆ. ನ್ಯಾಯ ಪಂಚಾಯ್ತಿಯ ಮೂಲಕ ನಾಗಮ್ಮಳನ್ನು ಪುನಃ ಸೇರಿಸುವ ಬದಲು ರಾದ್ಧಾಂತವಾಗುತ್ತದೆ. ಆ ಊರಿನ ಶಂಕ್ರಪ್ಪ ಮತ್ತು ಹೆಗ್ಡೆಯ ಕಿತಾಪತಿಯಿಂದ ನಾಗಮ್ಮಳ ಮೇಲೆ ಆಗುತ್ತಿದ್ದ ಅನ್ಯಾಯವನ್ನು ತಪ್ಪಿಸುವುದು ದಾನಮ್ಮಳದ್ದಾಗಿರುತ್ತದೆ.

ತೇಜಸ್ವಿಯವರು ಕಥೆಯ ಆರಂಭದಲ್ಲಿಯೇ ದಾನಮ್ಮಳ ಸೌಂದರ್ಯ ಮತ್ತು ಸ್ವಭಾವವನ್ನು ತಿಳಿಸುತ್ತಾರೆ. ಆಕೆಯು ಸುಬ್ಬಯ್ಯನ ಹೆಂಡತಿಯಾಗಿರುತ್ತಾಳೆ. ಹೆಣ್ಣಿನ ಅನ್ಯಾಯಕ್ಕೆ ಧ್ವನಿಯೆತ್ತುವ ಮತ್ತು ಪರಿಹಾರವನ್ನು ಸೂಚಿಸುವ ಕೆಲಸವನ್ನು ಕಥೆಗಾರರು ದಾನಮ್ಮಳ ಪಾತ್ರದ ಮೂಲಕ ತಿಳಿಸುತ್ತಾರೆ. ಪಂಚಾಯ್ತಿಯಲ್ಲಿ ನಾಗಮ್ಮಳಿಗೆ ಆಗುತ್ತಿದ್ದ ಅನ್ಯಾಯವನ್ನು ವಾಸ್ತವ ನೆಲೆಗಟ್ಟಿನಲ್ಲಿ ವಿವರಿಸುವ ಸನ್ನಿವೇಶವನ್ನು ತರುತ್ತಾರೆ.

ನಾಗಮ್ಮಳು ಪಂಡಿತನ ಹಿಂದೆ ಹೋದ ಕಾರಣಗಳಿಗೆ, ದಾನಮ್ಮಳು ನಾಗಮ್ಮಳ ಪ್ರತಿನಿಧಿಯಾಗಿ ಪಂಚಾಯ್ತಿಯಲ್ಲಿದ್ದ ಹೆಗ್ಡೆ, ಶಂಕ್ರಪ್ಪ, ಕಾಳೇಗೌಡನಿಗೆ ತನ್ನದೇ ರೀತಿಯಲ್ಲಿ ಉತ್ತರ ನೀಡುತ್ತಾಳೆ.

ಹೆಗ್ಡೆ "ಏನು ಕಂಡು ಆ ಪಂಡಿತನ ಹಿಂದೆ ಓಡೋದ್ಲು" ಎಂದು ಕೇಳಿದಾಗ

"ಅದ್ಯಾಕೆ ಹೇಳಬೇಕೋ ನಿಂಗೆ. ಹೆಂಗ್ಸರು ಗಂಡ್ಸರ ಜೊತೆ ಯಾಕೆ ಹೋಗ್ತಾರಂತ ಹೆಂಗ್ಸಿನ ಬಾಯಾಗೆ ಹೇಳಬೇಕ ನಿಂಗೆ? ಇಲ್ಯಾಕೆ ಬೆತ್ತ ಅಲ್ಲಾಡಿಸ್ತ ನಿಂತಿದ್ದೀಯಾ. ಹೋಗಿ ನಿನ್ನ ಹೆಂಡ್ತಿ ಇದ್ರೆ ಕೇಳಿಕೊಂಡು ಬಾ" ಎನ್ನುತ್ತಾಳೆ.

ಇದೇ ವೇಳೆಗೆ ಶಂಕ್ರಪ್ಪನು ನಾಲಿಗೆಯ ಮೇಲೆ ಹಿಡಿತವಿಲ್ಲದಂತೆ "ಕೈ ಹಿಡಿದ ಗಂಡಾ ಇರಬೇಕಾದರೆ ಮಿಂಡನ ಹಿಂದೆ ಓಡೋಗಿ ಊರೊಟ್ಟಿನ ಮರ್ಯಾದೆ..." ಎಂದು ಕೇಳುತ್ತಾನೆ.

"ಅನ್ನಿಸಿದ್ದನ್ನೂ ಗಟ್ಟಿಯಾಗಿ ಅನ್ನೋ. ಅದ್ಯಾಕೆ ಒಳಗೊಳಗೇ ನುಂಗ್ತೀಯಾ. ಏನನ್ತೀರೋ ಅದ್ನೆಲ್ಲಾ ಕೇಳಕ್ಕೆ ಇಲ್ಲಿಗೆ ಬಂದಿದ್ದೀನಿ. ಕೈ ಹಿಡಿದ ಗಂಡಾಂತೀಯಾ? ಮಕ್ಕಳಾಗಲಿಲ್ಲಾಂತ ಮತ್ತೊಬ್ಬಳನ್ನು ಕಟ್ಕೋಬೌದ ಈ ಗಂಡ್ಸು .....ಇವತ್ತು ಬಾಯಿ ಬಿಟ್ಟೇ ಕೇಳ್ತೀನಿ? ಸೊಂಟಾ ಬಿದ್ದ ಗಂಡಸರತ್ರ ಸಂಸಾರ ಮಾಡೋದೇನ್ನ? ಉತ್ತರ ಹೇಳ್ತೀಯಾ" ಎನ್ನುತ್ತಾಳೆ.

ಕಾಳೇಗೌಡನು ಮಕ್ಕಳಾಗದಿದ್ರೆ ಹೇಗೆ ಸಂಸಾರ ಮಾಡೋದು ಎನ್ನುವುದನ್ನು ಶಂಕ್ರಪ್ಪನು ಕೇಳಿಸಿಕೊಂಡು "ಬಂಜೆ ಕಟ್ಟಿಕೊಂಡು ಕಾಲ ಹಾಕಬೇಕಾ" ಎನ್ನುತ್ತಾನೆ. ಅದಕ್ಕೆ ದಾನಮ್ಮಳು "ನಿನ್ನಂಗಡೀಲಿ ಸೇಂದಿ ಕುಡಿದು ಓತಿಕ್ಯಾತನಂಗೆ ಆಗಿದಾವೆ. ಹಿಚ್ಚಿದರೆ ಮುಕ್ಕೀಲಿ ಮೂರು ತೊಲ ಮಾಂಸ ಇಲ್ಲ. ಕುಡಿದು ರಾತ್ರೆಲ್ಲಾ ರಸ್ತೇಲೋ ಚರಂಡೀಲೋ ಬಿದ್ದು ಬಂದ್ರೆ ಮಕ್ಕಳು ಹೆಂಗೋ ಆಗ್ತವೆ? ಮಕ್ಕಲಾಗಲಿಲ್ಲಂತೆ! ಅಮಾಸೆಗೊಂದು ಸಾರಿ ಹುಣ್ಣಿಮೆಗೆ ಒಂದು ಸಾರಿ ಹೆಣ್ತಿ ನೆನಪಾದ್ರೆ ಮಕ್ಕಳಾಗ್ತವಾ? ಥೂ ಬೇವರ್‍ಸಿ. ನೀನು ನಿಜವಾಗ್ಲು ನಿಮ್ಮಪ್ಪಂಗೆ ಹುಟ್ಟಿದ್ರೆ ಹೋಗಿ ಕೇಳ್ಕೊಂಡು ಬಾ ಹ್ಯಾಗೆ ಹುಟ್ಟಿಸ್ತೆ ಅಂತ"[೭] ಎಂದು ನೇರವಾಗಿ ಶಂಕ್ರಪ್ಪನನ್ನು ಪ್ರಶ್ನಿಸುತ್ತಾಳೆ. ಹೆಣ್ಣು ಮತ್ತೊಬ್ಬ ಗಂಡನನ್ನು ಏಕೆ ಬಯಸುತ್ತಾಳೆ ಎಂಬ ಸ್ಪಷ್ಟತೆಯನ್ನು ಕೊಡುತ್ತಾಳೆ.

ತೇಜಸ್ವಿಯವರು ಗಂಡು-ಹೆಣ್ಣಿನ ಸಂಬಂಧದ ಸ್ಪಷ್ಟನೆಯನ್ನು ಆಯಾ ಪಾತ್ರಗಳ ಮೂಲಕ ನಿರೂಪಿಸುತ್ತಾರೆ. ಪತಿ-ಪತ್ನಿಯರ ಸಂಸಾರದ ಪರಿಕಲ್ಪನೆಯನ್ನು ಸ್ಪಷ್ಟ ಪಡಿಸುತ್ತಾರೆ.

ತೇಜಸ್ವಿಯವರು ಪ್ರಯೋಗ ಶೀಲ ಕಥೆಗಾರರಾಗಿದ್ದಾರೆ. ಅವರ ರಚನಾತ್ಮಕತೆಯ ಬರಹದಲ್ಲಿ ತಮ್ಮ ಬದುಕನ್ನು ಕಥೆಯ ಚೌಕಟ್ಟಿನಲ್ಲಿ ತಂದಿರುವುದನ್ನು ಓದುಗರು ನೋಡಬಹುದಾಗಿದೆ. 'ಪಾಕಕ್ರಾಂತಿ' ಕಥೆಯಲ್ಲಿ, ಅಡುಗೆಯ ವಿಚಾರದಲ್ಲಿ ಗಂಡನಿಗಿಂತ ಹೆಂಡತಿಯು ಸೂಕ್ತವಾದ ವ್ಯಕ್ತಿಯಾಗುತ್ತಾಳೆಂಬುದನ್ನು ಸ್ವತಃ ತೇಜಸ್ವಿಯವರು ಹೆಂಡತಿ ರಾಜೇಶ್ವರಿ ಊರಿಗೆ ಹೋದಾಗ ಅನುಭವಿಸುತ್ತಾರೆ. 'ಅಡುಗೆ' ಒಂದು ವಿಚಾರವಷ್ಟೆ. ಆದರೆ ಅದರ ಹಿನ್ನೆಲೆಯಲ್ಲಿ ನಡೆಯುವ ಘಟನೆಗಳು ಸಂಸಾರದಲ್ಲಿನ ಗಂಡುಹೆಣ್ಣಿನ ಅನಿವಾರ್ಯತೆಯನ್ನು ಸಮಾಜಕ್ಕೆ ತಿಳಿಸುವ ಸನ್ನಿವೇಶವನ್ನು ಕಾಣಬಹುದಾಗಿದೆ.

ತೇಜಸ್ವಿಯವರ ಒಂದೊಂದು ಕಥೆಗಳ ನಿರೂಪಣೆಗಳಲ್ಲೂ ಗಂಡುಹೆಣ್ಣಿನ ಸಾಂಸಾರಿಕ ಪರಿಕಲ್ಪನೆಯನ್ನು ಸ್ಪಷ್ಟ ಪಡಿಸುವುದು, ಆಧುನಿಕತೆಯ ಬದಲಾವಣೆಗಳು, ಗ್ರಾಮೀಣ ಪರಿಸರದಲ್ಲಿ ಜರುಗುವ ಸನ್ನಿವೇಶಗಳು, ಅವುಗಳಲ್ಲಿರುವ ಗಾಂಭೀರ್ಯತೆಯನ್ನು ಮತ್ತು ಸೂಕ್ಷ್ಮತೆಯನ್ನು ಅರಿಯುವಲ್ಲಿ ವ್ಯಕ್ತಿ ಸೋತಾಗ ಬರುವ ವ್ಯತಿರಿಕ್ತ ಪರಿಣಾಮಗಳನ್ನು ಬರಹದ ರೂಪದಲ್ಲಿ ಓದುಗನಿಗೆ ತಲುಪಿಸುವುದನ್ನು ಕಾಣಬಹುದಾಗಿದೆ.

ನವ್ಯ ಕಥೆಗಳಲ್ಲಿ ವಾಸ್ತವ ಬದುಕಿನ ಮುಂದೆ ಸೌಂದರ್ಯದ ಕಲ್ಪನೆಯ ಬದುಕು ಕೃತಕವೆನಿಸುತ್ತದೆ. ಸಂಸಾರದ ಚಿತ್ರಣಗಳಲ್ಲಿ ಬಹುಪಾಲು ಸಂಘರ್ಷಗಳನ್ನು ಕಾಣಲಾಗುತ್ತದೆ.

ಇಂತಹ ಸನ್ನಿವೇಶಗಳನ್ನು ಲಂಕೇಶರ ಕಥೆಗಳಲ್ಲೂ ನೋಡಬಹುದಾಗಿದೆ. ಲಂಕೇಶರ ಕಥೆಗಳಲ್ಲಿ ರಮ್ಯತೆಯ ಒಲವುಗಳು ವಿರಳ. ಒಂದೊಂದು ಕಥೆಯ ಸನ್ನಿವೇಶಗಳಲ್ಲಿ ಬದುಕಿನ ಹುಡುಕಾಟ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಬದುಕಿನಲ್ಲಿ ಕೆಲವನ್ನು ಪಡೆಯಲು ಮನುಷ್ಯನು ಹವಣಿಸುತ್ತಾನೆ. ಇನ್ನೂ ಕೆಲವು ಸಿಕ್ಕಿದರೂ ಅವುಗಳ ಮಹತ್ವವನ್ನು ಅರಿಯದವನಾಗುತ್ತಾನೆ. ಕಳೆದುಕೊಂಡ ವಿಚಾರಗಳಿಗೆ ಪರಿತಪಿಸುತ್ತಾನೆ. ಈ ಅಂಶಗಳು ಲಂಕೇಶರ ಕಥೆಗಳಲ್ಲಿ ಕಾಣಸಿಗುತ್ತವೆ. ವೈವಾಹಿಕ ಸಂಬಂಧಗಳಲ್ಲಿ ಘರ್ಷಣೆ ಸಹಜ. ಒಂದು ವೇಳೆ ಆ ಘರ್ಷಣೆಯಲ್ಲಿಯೇ ಮುಳುಗಿದರೆ ಬದುಕಿನ ಅರ್ಥ ಕೆಡುತ್ತದೆ ಎಂಬುದನ್ನು ಲಂಕೇಶ್‌ರ ಕಥೆಗಳ ಮೂಲಕ ತಿಳಿಯಬಹುದು.

'ಅಸ್ವಸ್ಥರು' ಕಥೆಯಲ್ಲಿ ಶಂಕರನ ಹೆಂಡತಿ ಚಂಪಾಳು, ಪೇಪರನ್ನು ಓದುವ ಮೂಲಕ ಸಕ್ರೆ ಬಯಲಲ್ಲಿ ಮದುವೆಯಾದ ನಾಲ್ಕು ವರ್ಷಕ್ಕೆ ಹೆಂಡತಿಯನ್ನು ಕೊಂದ ವಿಚಾರವನ್ನು, ಗಂಡನಿಗೆ ತಿಳಿಸುತ್ತಾಳೆ. ಇದರ ಮುಂದುವರೆದ ವಿಚಾರಕ್ಕೆ ಚಂಪಾ ಮತ್ತು ಶಂಕರನು ಜಗಳವಾಡುತ್ತಾರೆ. ಈ ವಿಚಾರವನ್ನು ಶಂಕರನು, ಶಿವುನ ಬಳಿ ಹೇಳಿಕೊಳ್ಳುತ್ತಾನೆ. ಶಿವು, ಶಂಕರನ ಗೆಳೆಯ. ಆತನ ಹೆಂಡತಿ ಹೆರಿಗೆಗಾಗಿ ತವರಿಗೆ ಹೋಗಿರುತ್ತಾಳೆ. ಹೆಂಡತಿ ಹತ್ತಿರವಿಲ್ಲದೆ ಶಿವು ಪರಿತಪಿಸುತ್ತಿರುತ್ತಾನೆ. ಈ ಮೂರು ಸನ್ನಿವೇಶಗಳನ್ನು, ಲಂಕೇಶ್‌ರವರು ಕಥೆಯಲ್ಲಿ ಹೆಣೆಯುತ್ತಾರೆ. ಮುಂದುವರೆದಂತೆ ಶಂಕರನು ಹೆಂಡತಿಯ ಜೊತೆ ಜಗಳವಾಡುತ್ತಾನೆ. ಆದರೆ ಪುನಃ ಒಂದಾಗುತ್ತಾರೆ. ಸಂಸಾರದಲ್ಲಿ 'ದೇಹದ ಸೆಳೆತ ಬದುಕಿನ ತುಡಿತವು' ಜೊತೆಜೊತೆಯಲ್ಲಿ ಸಾಗುತ್ತವೆ. ಒಂದು ಲಯ ತಪ್ಪಿದರೂ ದುರಂತಕ್ಕೆ ದಾರಿ ಮಾಡಿಕೊಡುತ್ತವೆ ಎಂಬುದು ಶಂಕರ ಮತ್ತು ಚಂಪಾಳ ಬದುಕಿನ ನಡುವೆ ಸಾಗುತ್ತದೆ. ಗಂಡನ ಜೊತೆ ಜಗಳ ಅತಿರೇಕಕ್ಕೆ ಹೋದಾಗ ಚಂಪಾಳು ವಿಷ ಕುಡಿಯುತ್ತಾಳೆ. ಹೆಂಡತಿಯ ಸಾವಿನ ಸನ್ನಿವೇಶವು ಎದುರು ಬಂದಾಗ ಶಂಕರನಿಗೆ ಆಕೆಯ ಇರುವಿಕೆಯ ಮಹತ್ವ ತಿಳಿಯುತ್ತದೆ. ಹೆಂಡತಿಯ ಉಳಿವಿಗಾಗಿ ಆಸ್ಪತ್ರೆಗೆ ಕರೆದುಕೊಂಡು ಹೋಗಿ, ಡಾಕ್ಟರ್‌ರ ಅನುಮಾನಕ್ಕೂ ಕಾರಣನಾಗಿ ಹೆಂಡತಿಯನ್ನು ಬದುಕಿಸಿಕೊಳ್ಳುತ್ತಾನೆ. ಸಕ್ರೆಬಯಲಿನಲ್ಲಿ ಗಂಡ ಹೆಂಡತಿಯನ್ನು ಕೊಂದದ್ದು, ಶಿವು ಹೆಂಡತಿಯನ್ನು ಹೆರಿಗೆಗಾಗಿ ತವರಿಗೆ ಕಳುಹಿಸಿದ್ದು, ಶಂಕರನು ಜೊತೆಯಲ್ಲಿದ್ದ ಹೆಂಡತಿ ಚಂಪಾಳನ್ನು ಸಾವಿನ ಹತ್ತಿರ ಹೋಗುವಂತೆ ಮಾಡಿರುವ ಸನ್ನಿವೇಶಗಳು ಮಾನವನ ಅಸ್ವಸ್ಥ ಮನಸ್ಥಿತಿಯ ಘಟನಾವಳಿಗಳಾಗಿವೆ.

ಲಂಕೇಶರವರು ಸಂಸಾರದಲ್ಲಿನ ಗಂಡ-ಹೆಂಡತಿಯರ ವ್ಯಾವಹಾರಿಕ ಸಂಬಂಧಗಳ ಬಗ್ಗೆ, ತಮ್ಮದೆ ಆದ ನಿಲುವನ್ನು ಹೊಂದಿದ್ದಾರೆ. ಅವರ 'ದೇವಿ ಕಥೆ'ಯಲ್ಲಿ ಅಧಿಕಾರದಲ್ಲಿನ ವ್ಯಕ್ತಿಗಳು ಸನ್ನಿವೇಶಗಳನ್ನು ಹೇಗೆ ಲಾಭ ಮಾಡಿಕೊಳ್ಳಬಹುದು ಎಂಬುದನ್ನು ಓದುಗರಿಗೆ ನೀಡಿದ್ದಾರೆ. ಕಥೆಯಲ್ಲಿನ ದೇವಿ ಐದನೇ ತರಗತಿಯವರಿಗೆ ಓದಿರುತ್ತಾಳೆ. ಆದರೆ

ಅವಳ ಗಂಡ ಚಂದ್ರಪ್ಪನು ಪದವೀಧರ. ನೌಕರಿ ಸಿಕ್ಕಿದೊಡನೆ ಮದುವೆಯಾಗಿರುತ್ತಾನೆ. ಗಂಡನು ಉನ್ನತ ಅಧಿಕಾರಕ್ಕೆ ಹೋದಂತೆ ಬದುಕಿನಲ್ಲೂ ಬದಲಾವಣೆಯಾಗುತ್ತಿರುತ್ತದೆ. ರವಿನಾಯ್ಡು ಮೈಸೂರಿನಲ್ಲಿ ಆನೆಗಳಿಂದ ಕೂಡಿದ ಚಿತ್ರವನ್ನು ಮಾಡಲು ಪಿನಾಕಿನಿ ಎಂಬ ಹಿರೋಹಿನ್‌ಳ ಜೊತೆ ಬಂದಿರುತ್ತಾನೆ. ಅವನ ಸಹಾಯಕ್ಕೆ ಚಂದ್ರಪ್ಪನ ಗೈರುಹಾಜರಿಯಲ್ಲಿ ದೇವಿ ಎಲ್ಲವನ್ನೂ ನೋಡಿಕೊಳ್ಳುವ ಜವಾಬ್ದಾರಿ ವಹಿಸಿಕೊಳ್ಳುತ್ತಾಳೆ. ಆಕೆ ವ್ಯಾವಹಾರಿಕವಾಗಿ ಬುದ್ಧಿವಂತಳು, ಜೊತೆಗೆ ಸುಂದರಿಯೂ ಹೌದು. ರವಿನಾಯ್ಡು ಪಿನಾಕಿನಿಯನ್ನು ಅನುಭೋಗಿಸುವ ಮನಸ್ಥಿತಿಯೊಂದಿಗೆ ಚಿತ್ರೀಕರಣ ಮಾಡಲು ಬಂದಿದ್ದರೂ ದೇವಿಯ ಚಾಕಚಕ್ಯತೆಯ ನಡೆಗೆ ಮನಸೋಲುತ್ತಾನೆ. ಅವಳಿಗಾಗಿ ಪಾರ್ಟಿಯನ್ನು ಏರ್ಪಡಿಸುತ್ತಾನೆ. ತನ್ನ ಆಸೆಯನ್ನು ದೇವಿಯ ಬಳಿ ನಿವೇದಿಸಿಕೊಂಡಾಗಲೂ ಕೇವಲ ಔಪಚಾರಿಕವಾಗಿ ಮತ್ತು ವ್ಯಾವಹಾರಿಕವಾಗಿ ಈ ಸನ್ನಿವೇಶವನ್ನು ದೇವಿ ಸಮರ್ಥವಾಗಿ ನಿಭಾಯಿಸುತ್ತಾಳೆ. ಈ ವಿಷಯಗಳೆಲ್ಲಾ ಚಂದ್ರಪ್ಪನಿಗೆ ಗೊತ್ತಿದ್ದರೂ ತಮಾಷೆ ಮಾಡಿ ನಗುತ್ತಾನೆ. ಚಂದ್ರಪ್ಪನಂತಹ ವ್ಯಕ್ತಿಯು ಕೂಡ ಒಮ್ಮೆ ಅತಿಥಿಗಳ ಜೊತೆ ಕುಡಿದ ಸಂದರ್ಭದಲ್ಲಿ ತಾನೂ ಕೂಡ ಬಾಗಲಕೋಟೆಯ ಅಧಿಕಾರಿಯಾಗಿದ್ದಾಗ, ಅಲ್ಲಿನ ಶಾಲೆಯ ಜಾನೆಟ್ ಗೀತಾಳ ಜೊತೆ ಮೊದಲ ರಾತ್ರಿಯನ್ನು ಅನುಭವಿಸಿದ್ದ ವಿಷಯವನ್ನು ಹೆಂಡತಿಯ ಎದುರೇ ಬಂದಂತಹ ಅತಿಥಿಗಳ ಮುಂದೆ ಹೇಳಿ ನಗುತ್ತಾನೆ. ದೇವಿಯೂ ಕೂಡ ಆ ವಿಚಾರಕ್ಕೆ ನಗುತ್ತಾಳೆ. ಈ ಕಥೆಯಲ್ಲಿ ಲಂಕೇಶರವರು ಉನ್ನತ ವರ್ಗದವರ ವ್ಯವಹಾರಿಕ ಮನಸ್ಥಿತಿಯನ್ನು ಗುರುತಿಸಿದ್ದಾರೆ.

ಆರ್ಥಿಕವಾಗಿ ಸಂಸಾರವು ಸದೃಢವಾಗದಿದ್ದರೆ. ಸಾಂಸಾರಿಕ ಬದುಕಿನ ಪ್ರತಿಯೊಂದು ವಿಚಾರಕ್ಕೂ ಲೆಕ್ಕಾಚಾರ ಆರಂಭವಾಗುತ್ತದೆ. ಆ ಮೂಲಕ ಗೊಂದಲವಾಗಿ ಅಂತ್ಯಗೊಳ್ಳುತ್ತದೆ ಎಂಬುದನ್ನು 'ಕುರುಡು ಕಾಂಚಾಣ'ಕಥೆಯಲ್ಲಿ ಲಂಕೇಶ್‌ರವರು ಸ್ಪಷ್ಟಪಡಿಸುವ ಕೆಲಸ ಮಾಡಿದ್ದಾರೆ. ಕಥೆಯ ನಾಯಕನು ಕಾಲೇಜಿನ ಉಪನ್ಯಾಸಕ. ಪುಸ್ತಕವನ್ನು ಓದುವಾಗ ವಿಮರ್ಶಿಸುವಾಗ, ಕೈಯಲ್ಲಿ ಹಣವಿಲ್ಲದಿದ್ದರೂ ಕ್ರಾಂತಿಕಾರಿ ಮನಸ್ಥಿತಿಯವನು. ಹೆಂಡತಿ ಪಾರ್ವತಿ ಮಾತ್ರ ಕನಿಷ್ಟ ಅವಶ್ಯಕತೆಗೆ ಪ್ರತಿ ತಿಂಗಳು ಗಂಡನ ಸಂಬಳವನ್ನು ಎದುರು ನೋಡುತ್ತಿರುತ್ತಾಳೆ. ಗಂಡನು ಹಜಾಮನಿಗೆ ಕನಿಷ್ಟ ಹಣದ ಸಹಾಯಮಾಡಲು ಅಸಹಾಯಕನಾಗುತ್ತಾನೆ. ಅದು ಅನಿವಾರ್ಯವೂ ಕೂಡ ಹೌದು. ಆತನ ಹೆಂಡತಿ ಪಾರ್ವತಿಯು, ತಿಂಗಳ ಸಂಬಳದ ಖರ್ಚನ್ನು, ಮೊದಲೆ ತಿಳಿಸುತ್ತಾಳೆ. ಆ ವಿಚಾರವಾಗಿ ಗಂಡ ಹೆಂಡತಿಯ ನಡುವೆ ಚರ್ಚೆಯು ಆರಂಭವಾಗುತ್ತದೆ.

ಆಕೆಯು " ಏನೆಲ್ಲ ಖರ್ಚಿದೆ ನೋಡಿ, ಆ ಹಾಳು ಓನರ್ ಮನೆ ಬಾಡಿಗೆ ಜಾಸ್ತಿ ಮಾಡಿದಾನೆ. ಕಾಟ್‌ಗೆ ಆರ್ಡರ್ ಕೊಟ್ಟಿದ್ದೇನೆ ಅಂದ್ರಿ, ಎಂದು ಮುಂತಾಗಿ ಮಗ ಸಂಜೀವನ ಕುಲಾವಿ, ಹಾಲಿನವರಿಗೆ ಬಜೆಟ್ ಓದಿತು.

ನಾನು ಸುಮ್ಮನಿದ್ದುದ್ದು ಕಂಡು ಪಾರ್ವತಿ ಮುಂದುವರಿಸಿದಳು:

ಸಂಜೀವನ ಚೈನಿನ ವಿಚಾರ ಏನಾಯ್ತು?

ನಾನು ಯೋಚಿಸುತ್ತಿದ್ದಂತೆ,

ಕಾಲುಚೀಲ, ಸ್ವೆಟರ್....

ನಾನು ಸುಮ್ಮನಿದ್ದದ್ದು ಕಂಡು ಆಕೆಗೆ ರೇಗಿತು. ರೇಗಬೇಡ ಅಂದೆ. ಒಂದೇ ತಿಂಗಳು ಅಷ್ಟೆಲ್ಲ ಕೊಂಡುಕೊಂಡರೆ ಸಾಲಗಾರನ ಮನೆಯ ಆಳಾಗಬೇಕಾದೀತು ಎಂದು ಎಚ್ಚರಿಸಿದೆ. ಹಾಗೆ ಎಚ್ಚರಿಸುವಾಗ ನನಗನ್ನಿಸುತ್ತಿತ್ತು– ಮೊದಲ ಮಗು ನಡೆಯುವಂತಾದಾಗ ನಾಲ್ಕು ಒಳ್ಳೆಯ ಬಟ್ಟೆ, ಒಂದು ಒಳ್ಳೆಯ ಚೈನು ಕೊಡಿಸುವುದಕ್ಕೆ ಹಿಂದೆಮುಂದೆ ನೋಡಿದರೆ ಹೇಗೆ? ಆಗ ಪಾರ್ವತಿಯೂ ಹಾಗೇ ಯೋಚಿಸಿರಬೇಕು. ಸಿಟ್ಟಿನಿಂದ ಅಂದಳು: ಹಾಗಾದರೆ ನೋಡಿ, ದುಡ್ಡಿನ ವಿಚಾರ ನನ್ನ ಹತ್ತಿರ ಎತ್ತಲೇಬೇಡಿ. ಏನಾದರೂ ಮಾಡ್ಕೊಳ್ಳಿ."[೮] ಲಂಕೇಶ್‌ರವರು ಗಂಡ–ಹೆಂಡತಿಯ ನಡುವಿನ ಚರ್ಚೆಯು ನಗರದ ನಾಗರಿಕ ಜಗತ್ತಿನಲ್ಲಿ ಪ್ರತಿದಿನ ಅವರ ಬಜೆಟ್‌ಗೆ ಅನುಗುಣವಾಗಿ ನಡೆಯುತ್ತಿರುವ ಸಾಮಾನ್ಯ ಸಮಸ್ಯೆಯನ್ನು, ತಮ್ಮ 'ಕುರುಡು ಕಾಂಚಾಣ' ಕಥೆಯಲ್ಲಿ ಕಟ್ಟುಕೊಟ್ಟಿದ್ದಾರೆ.

ಸಂಸಾರದಲ್ಲಿ ನಡೆಯುವ ಒಂದೊಂದು ವಿಚಾರಗಳ ಸೂಕ್ಷ್ಮತೆಯನ್ನು ನವ್ಯ ಪ್ರಜ್ಞೆಯುಳ್ಳ ಲಂಕೇಶರವರು ತಮ್ಮ ಕಥೆಗಳಲ್ಲಿ ಅನಾವರಣಗೊಳಿಸುತ್ತಾರೆ.

ಅನಂತಮೂರ್ತಿಯವರ ಮೊದಲ ಕಥಾ ಸಂಕಲನದ, ಮೊದಲ ಕಥೆಯೇ ಸಂತೃಪ್ತ ಅವಿಭಕ್ತ ಕುಟುಂಬದ ಕಲ್ಪನೆಯನ್ನು ಒಳಗೊಂಡ 'ಎಂದೆಂದೂ ಮುಗಿಯದ ಕಥೆ'. ಈ ಕಥೆ ತೊಂಬತ್ತು ವರ್ಷವಾಗಿರುವ ಹಣ್ಣು ಮುದುಕ, ಮನಸ್ಸಿನಲ್ಲಿಯೇ ಚಳಿಯನ್ನು ಕಲ್ಪಿಸಿಕೊಂಡು ನಡುಗುವುದರ ಮೂಲಕ ಪ್ರಾರಂಭವಾಗುತ್ತದೆ.

ಕಥೆಗಾರರು ಒಂದು ಕುಟುಂಬದ ಸಂತೃಪ್ತಿ ಹೇಗಿರಬಹುದೆಂಬ ಊಹೆಯ ಮೂಲಕ ಚಿಕ್ಕದಾಗಿ ವಿವರನ್ನು ಕೊಡುತ್ತಾರೆ. "ದೇವರ ದಯೆ ಎನ್ನಬೇಕು. ಸುಖವಾದ ಬದುಕು. ತುಂಬಿದ ಮನೆ. ವಯಸ್ಸಾಗಿದ್ದರೂ ಮನೆ ವೈವಾಟೆಲ್ಲವನ್ನೂ ಅವನ ಮಗನೇ ನೋಡಿಕೊಂಡು ಹೋಗುತ್ತಾನೆ. ಅವನಿಗೂ ಕೈಗೆ ಬಂದ ನಾಲ್ಕು ಮಕ್ಕಳು. ಎಲ್ಲರಿಗೂ ಲಕ್ಷ್ಮಿಯಂತಹ ಹೆಂಡಿರು.... ಮತ್ತೆ ಮುದ್ದು ಮುದ್ದಾಗಿ ಹುಟ್ಟಿರುವ ಆ ಮೊಮ್ಮಕ್ಕಳ ಮಕ್ಕಳು, ಮರಿಮಕ್ಕಳು!!".[೯]

ಹಣ್ಣು ಮುದುಕನಿಗೆ ಜೊತೆಗಾರ್ತಿಯಾಗಿರುವ ಹೆಂಡತಿ ಕೂಡ ಮುದುಕಿಯಾಗಿದ್ದಾಳೆ. ಈಕೆಗೂ ಕೂಡ ವಯಸ್ಸಾಗಿದೆ. ಮೊಮ್ಮಕ್ಕಳ ಮಕ್ಕಳಿಗೆ ಈ ಅಜ್ಜಿಯೇ ಕಥೆ ಹೇಳಬೇಕು. ಆ ಕಥೆಯೇ ರಾಜಕುಮಾರ ರಾಜಕುಮಾರಿಯರ ಎಂದೆಂದೂ ಮುಗಿಯದ ಕಥೆ.

ಈ ಕಥೆಯು ಕೇವಲ ಕಥೆಯಾಗಿ ಉಳಿಯದೆ ತನ್ನ ಒಡಲಲ್ಲಿ ಜನಪದೀಯ ಗೀತೆಯನ್ನು ಹುದುಗಿಸಿಕೊಂಡಿದೆ.

"'ಯಾಕಳುವೆ ಎಲೆ ರಂಗ ಬೇಕಾದ್ದು ನಿನಗೀವೆ.......ನಾಲ್ಕೆಮ್ಮೆ ಕರೆದಾ ನೊರೆ ಹಾಲು...'

ಆ ಜೋಗುಳಕ್ಕೆ ಕೊನೆಯೇ ಇಲ್ಲವೋ ಎನೋ!

ಆ ತೊಟ್ಟಿಲಿನಲ್ಲೇ..... ಅವನೂ!...

ಅವನ ಮಗನೂ !.....

ಮಗನ ಮಗನೂ.....

ಅವನ ಮಗನ ಮಗನ ಮಗನೂ!.....

ಆ ತೊಟ್ಟಿಲು ಆಡದೇ ನಿಂತ ದಿನವೇ ಇಲ್ಲ!

ಆ ಜೋಗುಳ ಹಾಡದೇ ಇದ್ದ ದಿನವೂ ಇಲ್ಲ!

ಅವನ ಪಾಲಿಗೆ ಆ ಜೋಗಳ ಎಷ್ಟು ಸತ್ಯ! "[೧೦]

ತಲೆ ತಲೆಮಾರುಗಳು ತೊಟ್ಟಿಲಿನಲ್ಲಿ ಬೆಳೆದ ಬಗೆಯನ್ನು ಕಥೆಗಾರನು ಆ ಮನೆಯ ಮುದುಕಿಯೇ ಹೇಳುವಂತೆ ಒಂದಕ್ಕೊಂದು ಕೊಂಡಿಯ ರೂಪದಲ್ಲಿ ಗೀತೆಯನ್ನು ರಚಿಸುತ್ತಾನೆ.

ಒಂದು ಸಂತೃಪ್ತ ಬದುಕನ್ನು ಸೃಷ್ಟಿಸುವ 'ಎಂದೆಂದೂ ಮುಗಿಯದ ಕಥೆ' ಆಧುನಿಕ ಜಗತ್ತಿನಲ್ಲಿ ಅಜ್ಜ-ಅಜ್ಜಿ, ತಂದೆ-ತಾಯಿ, ದೊಡ್ಡಪ್ಪ-ಚಿಕ್ಕಪ್ಪ, ದೊಡ್ಡಮ್ಮ-ಚಿಕ್ಕಮ್ಮ, ಅಣ್ಣ-ತಮ್ಮ, ವಾರಗಿತ್ತಿಯ ಸಂಬಂಧಗಳ ಪ್ರೀತಿಯಿಂದ ದೂರವಾಗುತ್ತಿರುವ ಚಿಕ್ಕ ಚಿಕ್ಕ ಕುಟುಂಬಗಳು ಸಂಕುಚಿತ ಮನಸ್ಸಿನಿಂದ ಕೂಡಿದ ಧಾವಂತ ಬದುಕಿಗೆ ಉತ್ತರವಾಗಿದೆ.

ಅವಿಭಕ್ತ ಕುಟುಂಬದಲ್ಲಿ ಬೆಳೆಯುವ ಮಕ್ಕಳು ಸಮಾಜಮುಖಿಯಾಗುತ್ತಾರೆ. ಬರುವ ಸಮಸ್ಯೆಗಳನ್ನು ಎದುರಿಸಿ ನಿಲ್ಲುವ ಶಕ್ತಿಯನ್ನು ಹೊಂದುತ್ತಾರೆ. ಅವಿಭಕ್ತ ಕುಟುಂಬವು ಮಾನವಜನ್ಮದಲ್ಲಿ ಮುಂದಿನ ತಲೆಮಾರನ್ನು ರಕ್ಷಣೆಯ ಮಾಡುವ ಜವಬ್ದಾರಿಯನ್ನು ಹಂತಹಂತವಾಗಿ ವಹಿಸುತ್ತವೆ. ಇಲ್ಲಿಯೂ ಕೂಡ ಸಮಸ್ಯೆಗಳಿವೆ. ಆದರೆ ಅವುಗಳನ್ನು ಮೆಟ್ಟಿ ನಿಂತು ಸಾರ್ಥಕ ಬದುಕನ್ನು ಈ ಅವಿಭಕ್ತ ಕುಟುಂಬಗಳು ನಿರ್ವಹಿಸುತ್ತವೆ.

'ಎಂದೆಂದೂ ಮುಗಿಯದ ಕಥೆ'ಯಲ್ಲಿನ ಬದುಕು ನಿರಂತರವಾಗಿ ಹರಿಯುತ್ತದೆ. ಇದರ ಕೊನೆ ಯಾವಾಗ ಎಂಬುದು ತಿಳಿಯುವುದಿಲ್ಲ. ಹಾಗಯೇ ಕಥೆಯಲ್ಲಿರುವಂತೆ ಮನುಷ್ಯನ ಪ್ರೇಮದ ಆಟವೂ ಮುಗಿಯುವುದಿಲ್ಲ. ಅದು ನಿರಂತರವಾಗಿರುತ್ತದೆ. ಎಂಬುದು ಈ ಕಥೆಯಲ್ಲಿ ಕಂಡುಬರುತ್ತದೆ.

ಇಂದಿನ ಸಮಾಜದಲ್ಲಿ ವಿವಾಹವು ಒಂದು ವಾಣಿಜ್ಯ ಉದ್ದಿಮೆಯಾಗಿ ಹೊರಹೊಮ್ಮುತ್ತಿದೆ. ಇಲ್ಲಿ ಭಾವನಾತ್ಮಕ ಸಂಬಂಧಗಳಿಗಿಂತ ವ್ಯವಹಾರಿಕ ಸಂಬಂಧಗಳೇ ಹೆಚ್ಚು. ಇಂಥ ಸಂದರ್ಭದಲ್ಲಿ ಅವಿಭಕ್ತ ಕುಟುಂಬಗಳ ಪಾತ್ರ ಮಹತ್ತರವಾಗಿರುತ್ತದೆ.

ಆದಷ್ಟು ವ್ಯಾವಹಾರಿಕವಾಗುತ್ತಿರುವ ವಿವಾಹಕ್ಕೆ ಭಾವನಾತ್ಮಕ ಕಡಿವಾಣ ಈ ಅವಿಭಕ್ತ ಕುಟುಂಬಗಳಿಂದ ಮಾತ್ರ ಸಾಧ್ಯ.

ಅನಂತಮೂರ್ತಿಯವರ ಮತ್ತೊಂದು ಕಥೆಯೆಂದರೆ ಕೌಟುಂಬಿಕ ಬದುಕಿನಲ್ಲಿ ಏರಿಳಿತವನ್ನು ಕಂಡ 'ಕಾರ್ತೀಕ'. ಅವಿಭಕ್ತ ಕುಟುಂಬದಲ್ಲಿ ಇದ್ದ ನೋವು-ನಲಿವುಗಳನ್ನು ಕಥೆಯ ಮೂಲಕ ಮುನ್ನಡೆಸುವ ರಾಘವನು ಭೂತಕಾಲದ ಘಟನೆಗಳನ್ನು ವರ್ತಮಾನದಲ್ಲಿ ನಿಂತು ನೆನಪುಮಾಡಿಕೊಳ್ಳುವ ಘಟನೆಯುಳ್ಳ ಕಥೆಯಾಗಿದೆ. ಇದು 'ಎಂದೆಂದೂ ಮುಗಿಯದ ಕಥೆ'ಯ ರೂಪದಲ್ಲಿ ಕೌಟುಂಬಿಕ ವಿಷಯಗಳನ್ನು ಕುರಿತು ಹೇಳುವುದಾದರೂ ಕಥೆ ಕಳೆದ ಬದುಕಿನ ನೆನಪನ್ನು ಮೆಲಕು ಹಾಕುವ ರೀತಿಯಲ್ಲಿದೆ.

ನಿರೂಪಕನ ಮೂಲಕ ಕಥೆ ಪ್ರಾರಂಭವಾಗುತ್ತದೆ. ಆದರೆ ಪ್ರತಿಯೊಂದು ವರ್ತಮಾನದ ಘಟನೆಗಳಿಗೆ ಭೂತಕಾಲದಲ್ಲಿ ಕಳೆದಿರುವ ಘಟನೆಗಳನ್ನು ಹೋಲಿಕೆ ಮಾಡುತ್ತಾ ಹೋಗುತ್ತದೆ. ರಾಘವನ ತಾತ ರಾಗಜ್ಜ, ಅಜ್ಜಿ, ಅಪ್ಪಅಮ್ಮರ ಪ್ರೀತಿಯಲ್ಲಿ ಬಾಲ್ಯವನ್ನು ಕಳೆಯುವ ರಾಘವನು ಪ್ರತಿಯೊಂದು ಸನ್ನಿವೇಶವನ್ನು ವರ್ತಮಾನದಲ್ಲಿ ಕಳೆದುಕೊಂಡವನಂತೆ ಕಾಣುತ್ತಾನೆ. "ಹೊಗೆಸೊಪ್ಪು ತಿಕ್ಕುತ್ತ ಕೂತ ರಾಗಜ್ಜ ಅರ್ಧ ರಾಜ್ಯ ಕೊಡ್ತೇನೆ, ಬೆನ್ನು ತುರಿಸೋ ಅಪ್ಪು ಎಂದರೆ ಒಳಗಿನಿಂದ ಅಮ್ಮನ ಗದರಿಕೆ – ಓದಿಕೊಳ್ಳಬಾರದ? ಮನೆಗೆ ಹಿರಿಯರೆಂದವರೇ ಹಾದಿ ಹಾಕಿಕೊಟ್ಟ ಮೇಲೆ..."[೧೧] ರಾಘವನ ತಾಯಿ ಪ್ರತಿ ವಿಚಾರದಲ್ಲೂ ಅಜ್ಜ ಮತ್ತು ಅಜ್ಜಿಯ ನಡುವಿನ ಸಲುಗೆಯ ಬಗೆಗೆ ಸಿಡುಕತ್ತಲೇ ಹೋಗುತ್ತಾಳೆ.

ರಾಘವನ ತಾಯಿ ಅಜ್ಜ ಮತ್ತು ಅಜ್ಜಿಯ ಮೇಲೆ ರಾಘವ ಊಟದಲ್ಲಿ 'ಅಜ್ಜನ ಎಂಜಲನ್ನು' ತಿನ್ನುವ ವಿಷಯಕ್ಕೆ ಸಂಬಂಧಿಸಿದಂತೆ ದೊಡ್ಡ ರಾದ್ಧಂತವನ್ನೇ ಮಾಡುತ್ತಾಳೆ. ಇದರಿಂದ ನೊಂದ ಅಜ್ಜ ಅಜ್ಜಿಯರು ಊಟವನ್ನೇ ಮಾಡದೇ ಮೇಲೇಳುತ್ತಾರೆ. ರಾಘವನ ತಂದೆ ತಾಯಿ ಮತ್ತು ಹೆಂಡತಿಯ ವಿಷಯಕ್ಕೆ ತುಂಬಾ ಕೋಪಗೊಳ್ಳುತ್ತಾರೆ. ಆ ದಿನದ ಘಟನೆಯ ಸನ್ನಿವೇಶವನ್ನು ಮುಂದೊಮ್ಮೆ ರಾಘವನು ತನ್ನ ಹೆಂಡತಿಯಾದ ಛಾಯಾಳ ವಿಷಯದಲ್ಲೂ ತಂದೆ ಮತ್ತು ತಾಯಿಗೆ ಆದ ಕಹಿ ಅನುಭವವನ್ನು ಎದುರಿಸುತ್ತಾನೆ.

ರಾಘವನಿಗೆ ಬದುಕಿನ ಬಗ್ಗೆ ಒಂದು ಸತ್ಯ ಮಾತ್ರ ತಿಳಿಯುತ್ತದೆ. "ನರಸಿಂಹ ಮಾವ ಸತ್ತ. ರಾಗಜ್ಜ ಸತ್ತರು. ಅಮ್ಮ ಸತ್ತಳು. ಒಂದಲ್ಲ ಒಂದು ದಿನ ಎಲ್ಲರೂ ಸಾಯಬೇಕನ್ನುವ ಮೃತ್ಯು ಪ್ರಜ್ಞೆಯಲ್ಲಿ ಹಬ್ಬ ಹುಣ್ಣಿಮೆ ಸಡಗರವೆಲ್ಲ ಅಹ ಎಷ್ಟು ಸುಂದರ,–ನೋಯುವುದು, ನೋಯಿಸುವುದು ಎಷ್ಟು ವ್ಯರ್ಥ ಎಂದು. ಬಾಳು ಹದವಾಗಬೇಕು, ಮೃದುವಾಗಬೇಕು, ಅದರ ಬದಲು–ಎಷ್ಟೆಲ್ಲ ತಿಳಿದರೂ ಈಗ ನಾನೇ."[೧೨] ಎಂಬ ವಿಚಾರ ತಿಳಿದರೂ ಕೆಲವೊಮ್ಮೆ ವಿನಃ ಕಾರಣ ಯೋಚಿಸುತ್ತಾನೆ.

ರಾಘವನು ಬಾಲ್ಯದಲ್ಲಿ ಹಬ್ಬಗಳಲ್ಲಿ ಅನುಭವಿಸುತ್ತಿದ್ದ ಘಟನೆಗಳನ್ನು ಬರೆಯಲು ಮುಂದಾಗುತ್ತಾನೆ. ಅದುವೇ ಕಾರ್ತೀಕದ ದಿನಗಳಲ್ಲಿ ಬರುವ ದೀಪಾವಳಿಯ ಹಬ್ಬ.

"....ಕಾರ್ತೀಕದ ದಿನಗಳು ಋತುಚಕ್ರದಲ್ಲಿ ಮರಳಿ, ಹತ್ತಿಸಿಟ್ಟ ಹಣತೆಗಳು ಮಂಕಾಗಿ ಉರಿಯುವುದು ನೋಡಿದಾಗ, ಸತ್ತದ್ದು, ಕೆಟ್ಟದ್ದು, ನೊಂದದ್ದು, ಬೇಕೆಂದೇ ನೋಯಿಸಿದ್ದು ನೆನಪಾಗುತ್ತದೆ. ತಾನೇ ಆ ಬಾಲಕ – ಆದರೂ ಈಗಿನ ಪರಕೀಯ. ಆದ್ದರಿಂದ ಈ ಕಣ್ಣಿನಿಂದ ಆ ಕಣ್ಣಿನಿಂದ ಒಟ್ಟಾಗಿ ಕಾಲವನ್ನು ನೋಡಬಹುದು."[೧೩] ಹಬ್ಬದಲ್ಲಿ ವಿಶೇಷವಾಗಿ ಮನೆಯನ್ನು ಸಿಂಗರಿಸುವುದು ಹಾಗೂ ಆ ಹಬ್ಬದಲ್ಲಿ ಕೂಗುವ ಪದವನ್ನು ನಿರೂಪಕನು ನೆನಪುಮಾಡಿಕೊಳ್ಳುತ್ತಾನೆ. " ದೀಪ್ ದೀಪ್ ದೀಪ್ ಓಳ್ಗೆ – ಹಬ್ಬಕ್ಕೊಂದು ಹೋಳ್ಗೆ"[೧೪]

ನಿರೂಪಕನು ಬಾಲ್ಯದಲ್ಲಿರುವ ಘಟನೆಗಳನ್ನು ಕಳೆದುಕೊಳ್ಳುತ್ತಿದ್ದಾನೆ. ಅವನಲ್ಲಿ ಪರಕೀಯ ಭಾವನೆ ಬೇರೂರತೊಡಗಿದೆ. ಜೀವನದ ಬಗ್ಗೆ ಕಸಿವಿಸಿಯಾಗುತ್ತದೆ. ಆತನೇ ಹೇಳಿಕೊಳ್ಳುವಂತೆ " ಜೀವನ ಅಗ್ನಿದಿವ್ಯವಾಗಲಿ ಎಂದು ಬಯಸುವುದು ಮನಸ್ಸಿನ ರೋಗವೆ? ಅಥವಾ ನೋವಿನ ಬಾಲ್ಯದ ದಿನಗಳಿಂದ ಮುಕ್ತನಾಗಬೇಕೆಂದು ತಾಯಿತಂದೆಯನ್ನು ಧಿಕ್ಕರಿಸದೆನೆ? ಯಾಕೆ ನನ್ನ–ಛಾಯಳ ಸಂಬಂಧ ಇನ್ನೂ ಸಂಪೂರ್ಣ ಸರಳವಾಗಿಲ್ಲ? – ಕತ್ತಲಿನಲ್ಲಿ ಉತ್ತರವಿರಲಿಲ್ಲ. ಕಾರ್ತೀಕದ ರಾತ್ರಿ ಕಳೆದ ಕಾರ್ತೀಕದ ನೆನಪುಗಳನ್ನು ಹೊತ್ತಿಸುತ್ತದೆ."[೧೫]

ರಾಘವನು ಆಧುನಿಕ ಕೌಟುಂಬಿಕ ವ್ಯವಸ್ಥೆಯಲ್ಲಿ ಯೋಚಿಸುತ್ತಾನೆ. ಬಾಲ್ಯ ಮತ್ತು ತನ್ನ ಹಿರಿಯರಿಂದ ದೂರವಾಗುತ್ತಾನೆ. ವಿಘಟನೆಯ ಕೌಟುಂಬಿಕ ಜೀವನದಲ್ಲಿ ತನ್ನ ಭಾವನಾತ್ಮಕ ಜೀವನದಿಂದ ದೂರವಾಗುತ್ತಾನೆ. "ಪಶ್ಚಿಮದ.... ಮಾಯೆಗೆ ನಾವು ಜನಸಾಮಾನ್ಯರು ಮಾರು ಹೋಗಿದ್ದೇವೆ. ನಮ್ಮ ಒಟ್ಟು ಸಮಾಜದ ಸಮಸ್ಯೆಯೆಂದರೆ ನಾವು ಬಹಿರಂಗದಲ್ಲಿ ಪಶ್ಚಿಮವನ್ನು ಎಷ್ಟೇ ವಿರೋಧಿಸಿದರೂ ಕೂಡ ಅಂತರಂಗದಲ್ಲಿ ಮಾತ್ರ ಅವರ ಮಾದರಿಗಳನ್ನು ಮನ್ನಿಸುತ್ತೇವೆ. ನಮಗೆ ಅರಿವಿಲ್ಲದೆ ಅವರ ರಾಷ್ಟ್ರಕಲ್ಪನೆ ಹಾಗೂ ಚರಿತ್ರೆಯ ಕಲ್ಪನೆಗಳನ್ನು ಅನುಸರಿಸುತ್ತೇವೆ. ಊಟ ತಿಂಡಿ, ಉಡುಗೆ ತೊಡುಗೆ, ಚಿಂತನೆ ಕ್ರಿಯೆಗಳಲ್ಲೆಲ್ಲ ಅವರನ್ನು ಹೋಲುವ ಭರದಲ್ಲಿ ನಮ್ಮ ಅನನ್ಯತೆ ನಷ್ಟವಾಗುತ್ತಿರುವುದರ ಬಗ್ಗೆ ನಮಗೆ ಅಷ್ಟು ಎಚ್ಚರವಿರುವುದಿಲ್ಲ."[೧೬]

ಅನಂತಮೂರ್ತಿಯವರು, 'ಎಂದೆಂದೂ ಮುಗಿಯದ ಕಥೆ'ಯಲ್ಲಿ ಸಂತೃಪ್ತಿಯ ಜೀವನವನ್ನು ಗ್ರಾಮೀಣ ಭಾಗದ ಅವಿಭಕ್ತ ಕುಟುಂಬದ ನೆಲೆಗಟ್ಟಿನಲ್ಲಿ ನೋಡಿದ್ದಾರೆ. ಹಾಗೆಯೇ ಆಧುನಿಕ ಪರಿಕಲ್ಪನೆಯಲ್ಲಿರುವ ವಿಭಕ್ತ ಕುಟುಂಬದಲ್ಲಿರುವ ಕಥಾ ನಾಯಕನು ಅವಿಭಕ್ತ ಕುಟುಂಬದಲ್ಲಿನ ಬಾಲ್ಯ ಬದುಕಿನ ರೀತಿನೀತಿಗಳನ್ನು ನೋಡಿ ಪ್ರಸ್ತುತದಲ್ಲಿ ನೆನಪುಗಳಾಗಿ ಕಾಡುವ ಕಥೆಯಾಗಿ 'ಕಾರ್ತೀಕ'ವನ್ನು ರೂಪಿಸಿದ್ದಾರೆ.

ಭಾರತೀಯ ಸಮಾಜದಲ್ಲಿ ಸ್ತ್ರೀಪುರುಷರ ದಾಂಪತ್ಯಕ್ಕೆ ತನ್ನದೇ ಆದ ಮಹತ್ವವಿದೆ. ಪುರುಷ ಪ್ರಧಾನ ಕುಟುಂಬದಲ್ಲಿ ಹೆಣ್ಣು ಅಧೀನಳಾಗಿ ಇರುವುದನ್ನು ನೋಡುತ್ತೇವೆ. ಇಂಥ ವಿಚಾರಗಳು ಅನಂತಮೂರ್ತಿಯವರ ಕಥೆಗಳ ಗಂಡು–ಹೆಣ್ಣಿನ ಸಂಬಂಧಗಳಲ್ಲಿ ಕಾಣುತ್ತದೆ.

‘ಪಂಜರಗಿಣಿ’ ಕಥೆಯಲ್ಲಿ ರಾಮು ಸೌಂದರ್ಯವತಿಯಾದ ಕಾಮಾಕ್ಷಿ ಹೆಂಡತಿಯನ್ನು ತುಂಬಾ ಮೋಹಿಸುತ್ತಿರುತ್ತಾನೆ. ಹಾಗೆಯೇ ಬುದ್ಧನಂತೆ ಸಂಸಾರದಿಂದ ಬಿಡುಗಡೆಯಾಗಬೇಕೆಂದು ಬಯಸುತ್ತಾನೆ. ಒಂದು ದಿನ ರಾಮು ಹೆಂಡತಿಯನ್ನು ಬಿಟ್ಟು ಮನೆಯಿಂದ ಹೊರಹೋಗುತ್ತಾನೆ. ಅದೇ ಸಂದರ್ಭದಲ್ಲಿ ತನ್ನಂತೆಯೇ ಪಂಜರದಲ್ಲಿ ಬಂಧಿಯಾಗಿರುವ ಗಿಣಿಯನ್ನು ಬಿಡುಗಡೆಗೊಳಿಸುತ್ತಾನೆ. ರಾಮು ಹೊರಹೋದರೂ ತನ್ನ ಸಂಸಾರದ ಭಾಗವಾಗಿದ್ದ ಹೆಂಡತಿ ಕಾಮಾಕ್ಷಿಯನ್ನು ಬಿಟ್ಟು ಬುದ್ಧ ಆಗಲಾರನು. ಪುನಃ ಹಿಂತಿರುಗಿ ಮನೆಗೆ ಬರುತ್ತಾನೆ. ಹಾರುವುದನ್ನೇ ಮರೆತ ಗಿಣಿ ಪುನಃ ಪಂಜರಕ್ಕೆ ಸೇರುತ್ತದೆ. ಹಾಗೆಯೇ ರಾಮು ಕೂಡ ಪುನಃ ಮನೆಗೆ ಬರುತ್ತಾನೆ. ಕಾಮಾಕ್ಷಿಯ ಮೋಹದಿಂದ ದೂರ ಸರಿಯಲಾರನು. ರಾಮು ಬುದ್ಧನಂತೆ ಸಾಂಸರಿಕ ಬದುಕನ್ನು ತಿರಸ್ಕರಿಸಬೇಕೆಂದು ಯೋಚಿಸುತ್ತಾನೆ. ಆದರೆ ಕೌಟುಂಬಿಕ ಬದುಕಿನಲ್ಲಿ ಪುನಃ ಹೊಸ ಬದುಕನ್ನು ಪಡೆಯುವ ವ್ಯಕ್ತಿಯಾಗುತ್ತಾನೆ. ಭಾರತೀಯ ಸಮಾಜದಲ್ಲಿ ದಾಂಪತ್ಯಕ್ಕೆ ಒಂದು ವಿಶಿಷ್ಟ ಸ್ಥಾನ ಇಂದಿಗೂ ಇದೆ. “ವಿವಾಹ ಮತ್ತು ಕುಟುಂಬ ಇವು ಭಾರತೀಯ ಸಾಮಾಜಿಕ ವ್ಯವಸ್ಥೆಗೆ ಒತ್ತಾಸೆ ನೀಡಿರುವ ಎರಡು ಪ್ರಮುಖ ಸಾಮಾಜಿಕ ಸಂಸ್ಥೆಗಳು. ಪರಿವರ್ತನೆಯ ದಾಳಿಯನ್ನು ಎದುರಿಸಿಯೂ ತಮ್ಮ ಅಸ್ತಿತ್ವವನ್ನು ಕಾಯ್ದುಕೊಂಡಿರುವ ಸಂಸ್ಥೆಗಳಿವು. ಇವು ಎಷ್ಟು ಸಾರ್ವತ್ರಿಕವಾಗಿವೆಯೋ ಇಂದಿಗೂ ಎಷ್ಟೇ ಸದೃಢವಾಗಿ ಮುಂದುವರಿದಿವೆ.” [೧೭]

ಭಾರತೀಯ ವೈವಾಹಿಕ ಸಂಬಂಧದಲ್ಲಿ ಪುರುಷ ಪ್ರಧಾನವಾಗಿರುತ್ತಾನೆ. “ವಿವಾಹದ ನಂಟು ಒಂದು ಬ್ರಹ್ಮ ಗಂಟು”, “ಯಾವ ಹೆಣ್ಣಿಗೆ ಯಾವ ಗಂಡು ಎಂಬುದು ದೈವ ನಿಯಾಮಕ” “ಒಳ್ಳೆಯ ಗಂಡ ಅಥವಾ ಒಳ್ಳೆಯ ಹೆಂಡತಿ ಸಿಗುವುದು, ಸಿಗದಿರುವುದು ಅವರವರ ಕರ್ಮಫಲ”– ಈ ಬಗೆಯ ಅಭಿಪ್ರಾಯಗಳು ಹಿಂದುಗಳಲ್ಲಿ ಇಂದಿಗೂ ಇದೆ. ವಿವಾಹವನ್ನು ಪಾಶ್ಚಾತ್ಯರು ಪರಿಗಣಿಸುವಂತೆ ಕೇವಲ ಒಂದು “ಸಾಮಾಜಿಕ ಒಪ್ಪಂದ” ಎಂದು ಹಿಂದುಗಳು ಪರಿಗಣಿಸುವುದಿಲ್ಲ. “ಮೋಕ್ಷ ಪ್ರಾಪ್ತಿ” ಗಾಗಿ ಅಲ್ಲವಾದರೂ ಕುಟುಂಬದ ರಥವನ್ನು ಮುನ್ನಡೆಸಲು, ಪರಂಪರೆಯನ್ನು ನಡೆಸಿಕೊಂಡು ಬರಲು ಗಂಡುಸಂತಾನ ಬೇಕೆಂಬ ಬಯಕೆ ಇಂದಿಗೂ ಇದೆ. ಅದಾಗ್ಯೂ ಹೆಣ್ಣು ಮಕ್ಕಳನ್ನು ಅವಗಣಿಸುವುದಿಲ್ಲ. ‘ಪಾತಿವ್ರತ್ಯ’ದ ಮೌಲ್ಯ ದುರ್ಬಲವಾಗಿದ್ದರೂ ಸ್ತ್ರೀಯರನ್ನು ವಿವಾಹದಲ್ಲಿ ಪುರುಷರಿಗೆ ಸಮಾನಸ್ಕಂಧರನ್ನಾಗಿ ಇಂದಿಗೂ ಪರಿಗಣಿಸುವುದಿಲ್ಲ.”[೧೮] ‘ಹುಲಿಯ ಹೆಂಗರುಳು’ ಕಥೆಯಲ್ಲಿ ಜನರು ಹೇಳುವಂತೆ ಸಿದ್ದನ ಹೆಂಡತಿ ‘ಬಜಾರಿಯಾಗಿದ್ದು, ಸೇರೇಗಾರನಾದ ಸೀನಸೆಟ್ಟಿಯನ್ನು ಇಟ್ಕೊಂಡಿರುತ್ತಾಳೆ’. ಸಿದ್ದನು ಹೆಂಡತಿಯ ವಿಷಯದಲ್ಲಿ ಹತಾಶೆಯನ್ನು ಹೊಂದಿರುತ್ತಾನೆ. ಅದಕ್ಕಾಗಿಯೇ ಜೀವದ ಹಂಗನ್ನೇ ತೊರೆದು ತುಂಬಿದ ತುಂಗಾ ನದಿಯಲ್ಲಿ ದೋಣಿಯನ್ನು ಮುನ್ನಡೆಸಲು ಬರುತ್ತಾನೆ. ದೋಣಿಯನ್ನು ನಡೆಸುವಾಗ

ಅವನ ಛಲ, ಅಸಹಾಯಕತೆಯ ಮನಸ್ಥಿತಿ ಕಾಣುತ್ತದೆ. ಅತಿವೃಷ್ಟಿಯಿಂದ ಕೂಡಿದ ಮಳೆಯ ವಾತಾವರಣವು ಸಮಸ್ಯೆಯನ್ನು ಹೇಗೆ ಸೃಷ್ಟಿ ಮಾಡುತ್ತದೆಯೋ ಹಾಗೆಯೇ ದಾಂಪತ್ಯದ ಜೀವನ ದಿಕ್ಕು ತಪ್ಪಿದರೆ ಗಂಡು ಹೆಣ್ಣಿನ ಸಂಬಂಧಗಳು ನಾಶವಾಗುತ್ತ ವೆಂಬುದುನ್ನು ಅನಂತಮೂರ್ತಿಯವರು ಈ ಕಥೆಯಲ್ಲಿ ತರುತ್ತಾರೆ.

ಸಹಜವಾದ ಸಾಂಸಾರಿಕ ಸುಖದ ಪರಿಕಲ್ಪನೆಯು ವಯಸ್ಸು ದಾಟಿದ ಮೇಲೆ ದೊರಕುವುದಿಲ್ಲವೆಂಬುದನ್ನು 'ಪ್ರಸ್ತ' ಕಥೆಯ ಮೂಲಕ ಅನಂತಮೂರ್ತಿಯು ನಿರೂಪಿಸಿದ್ದಾರೆ. ಪ್ರವೀರಾಚಾರ್ಯರಿಗೆ ವೆಂಕಮ್ಮ ಎರಡನೆಯ ಹೆಂಡತಿಯಾಗಿ ಬಂದಿರುತ್ತಾಳೆ. ಅವರಿಗೆ ಸೀತಾ ಮಗಳಾಗಿರುತ್ತಾಳೆ. ಪ್ರವೀರಾಚಾರ್ಯನಿಗೆ ಭಾಗವತರಾಟದ ಮೇಳದಲ್ಲಿದ್ದ ಶ್ಯಾಮಭಟ್ಟನ ಯೌವನದ ರಸಿಕ ಜೀವನ ಇಷ್ಟವಾಗಿರುತ್ತದೆ. ಒಂದು ದಿನ ಪ್ರವೀರಾಚಾರ್ಯರು ಶ್ಯಾಮಭಟ್ಟನಿಗೆ ತನ್ನ ಮಗಳನ್ನು ಕೊಡಬೇಕೆಂದು ಪ್ರಸ್ತಾಪ ಮಾಡುತ್ತಾನೆ. ಪ್ರೀತಿಯ ಋಣ, ದಾಕ್ಷಿಣ್ಯ ಮರೆತು ಶ್ಯಾಮಭಟ್ಟನು ಸೀತಾಳನ್ನು ಮದುವೆಯಾಗಲು ಒಪ್ಪುವುದಿಲ್ಲ. ಕಾಲ ಕ್ರಮೇಣದಲ್ಲಿ ಪ್ರವೀರಾಚಾರ್ಯನು ಶೀನಪ್ಪಯ್ಯನಿಗೆ ಸೀತಾಳನ್ನು ಕೊಟ್ಟು ಮದುವೆ ಮಾಡುತ್ತಾನೆ. ಆದರೆ ಶೀನಪ್ಪಯ್ಯನಿಗೆ ಸೂಳೆಯ ಸಹವಾಸದಿಂದ ಮೈನೆರೆಯದ ಸೀತಕ್ಕಳಿಗೆ ಕಷ್ಟವನ್ನು ಕೊಡುವ ಮೂಲಕ ಸಂಸಾರ ಸುಖದ ಕಲ್ಪನೆಯಿಂದ ಆಕೆಯು ವಂಚಿತಳಾಗುವ ಸನ್ನಿವೇಶವಿದೆ. ಸಂಪ್ರದಾಯದ ಅಡಿಯಲ್ಲಿ ಪುನಃ ಸೀತಾಳಿಗೂ ಮತ್ತು ಶೀನಪ್ಪಯ್ಯನಿಗೆ ಪ್ರಸ್ತ ಶಾಸ್ತ್ರ ಮಾಡಲಾಗುತ್ತದೆ. ಈ ವೇಳೆಗಾಗಲೇ ಸೀತಾಳಿಗೆ ಮುಟ್ಟು ನಿಂತಿರುತ್ತದೆ. ಯಾವುದೇ ಸಂಸಾರದ ಸುಖ ಆ ಜೋಡಿ ಪಡೆಯದೆ ಹೋಗುತ್ತದೆ. ಆದರೆ ಕಥೆಯಲ್ಲಿ ಬರುವ ಮತ್ತೊಂದು ಜೋಡಿ ಪುಂಡರೀಕ ಮತ್ತು ನೇತ್ರಾವತಿಯರು ದೈಹಿಕ ಸುಖವನ್ನು ಸಾಂಸಾರಿಕವಾಗಿ ಅನುಭವಿಸುತ್ತಾರೆ. ಮದುವೆಯೇ ಆಗದ ಶ್ಯಾಮಭಟ್ಟರಿಗೂ ಮತ್ತು ಪುಟ್ಟಿಗೂ ದೈಹಿಕ ಸಂಬಂಧವಿರುವ ಕಥೆಯಾಗಿದೆ. ಮೂರು ಜೋಡಿಗಳ ಮೂರು ವಿಭಿನ್ನ ನಿಲುವುಗಳು ಈ ಕಥೆಯಲ್ಲಿ ಅನಾವರಣಗೊಂಡಿದೆ.

ಭಾರತೀಯ ಸಮಾಜದಲ್ಲಿ ಕೌಟುಂಬಿಕ ಜವಾಬ್ದಾರಿ ಸಹಜವಾಗಿ ಪುರುಷ ಪ್ರಧಾನವಾಗಿರುತ್ತದೆ. ಪುರುಷನಾದವನು ಸಂಸಾರದ ಜವಬ್ದಾರಿಯನ್ನು ಹೊಂದಿರುತ್ತಾನೆ. ಒಂದು ವೇಳೆ ಆತನು ವಿಮುಖನಾದರೂ ಕುಟುಂಬದಲ್ಲಿ ಸಮಸ್ಯೆಗಳು ತಲೆದೋರುತ್ತ ವೆಂಬುದು 'ಸೂರ್ಯನ ಕುದುರೆ' ಕಥೆಯಲ್ಲಿ ಅನಾವರಣಗೊಂಡಿದೆ. ಕಥೆಯಲ್ಲಿ ಲೇಖಕನು ನಿರೂಪಕನಾಗಿರುತ್ತಾನೆ. ನಿರೂಪಕನು ವೆಂಕಟ ಜೋಯಿಸನೆಂಬ ಸ್ನೇಹಿತನನ್ನು ನೋಡಲು ಹೋದಾಗ ನಡೆಯುವ ಆ ಜೋಯಿಸನ ಕೌಟುಂಬಿಕ ವಿಚಾರಗಳು ಕಥೆಯಾಗಿ ರೂಪಿತವಾಗಿದೆ.

ವೆಂಕಟ ಜೋಯಿಸನ ಹೆಂಡತಿ ರುಕ್ಮಿಣಿಗೆ ಚಿಕ್ಕ ವಯಸ್ಸಿನಲ್ಲಿಯೇ ಮದುವೆಯಾಗಿರುತ್ತದೆ. ಮಕ್ಕಳು ನಾಲ್ಕು. ಸುಬ್ಬ ಎಂಬ ಮಗ. ಗೌರಿ, ಶಕುಂತಲ, ಗಂಗ ಎಂಬ ಮೂರು ಹೆಣ್ಣು ಮಕ್ಕಳು. ಆದರೆ ಮಕ್ಕಳಿಗೆ ಇನ್ನೂ ಮದುವೆಯಾಗಿರುವುದಿಲ್ಲ. ಜೋಯಿಸನು ವರದಕ್ಷಣೆ ಕೊಟ್ಟು ಮದುವೆ ಮಾಡುವಷ್ಟು ಶಕ್ತನಲ್ಲ. ಆದರೆ ಯಾರಾದರೂ ಮದುವೆಯಾಗುತ್ತಾರೆ ಎಂಬ ನಂಬಿಕೆ ಅವನಲ್ಲಿರುತ್ತದೆ. ಅವನಲ್ಲಿರುವ ಗುಣವೆಂದರೆ ತಲೆಗೆ ತೈಲವನ್ನು ಹಾಕಿ ಸ್ನಾನ ಮಾಡಿಸುವುದು. ಅದರ ಅನುಭವ ಲೇಖಕರಿಗೂ ಆಗುತ್ತದೆ. ಆ ಸಮಯದಲ್ಲಿಯೇ ಜೋಯಿಸನ ಮನೆಯ ವಿಚಾರಗಳು ತಿಳಿಯುತ್ತದೆ.

ವೆಂಕಟ ಜೋಯಿಸನ ಸಂಸಾರದ ಜವಾಬ್ದಾರಿ ಪರಿಪೂರ್ಣತೆಯನ್ನು ಹೊಂದಿಲ್ಲ ವೆಂಬುದನ್ನು ಆತನ ಮೂಲಕ ಹೇಳಲಾಗುತ್ತದೆ. 'ಹುರಿಮೀಸೆಯ ಜಬರುದಸ್ತಿನ ಪೌರುಷ ನನ್ನಂಥವರಿಗೆ ಸಲ್ಲದು. ಈ ಲೋಕಕ್ಕೆ ನನ್ನದು ಹಡೆ ಸೇವೆ ಎಂದೇ ಇಟ್ಟುಕೋ. ನಿನಗೀಗ ಉಂಡು ಮಲಗೋ ಆಸೆ. ನಿದ್ದೆಯಲ್ಲಿ ನೀನೂ ಕೂಡ ಕುಡಿಯುತ್ತಿ. ಮಕ್ಕಳು ಕುಡಿಯೋವಾಗ ತಾಯೀನ ಒದೀತಾವೆ. ನಿನ್ನ ಆಸೆಗೆ ತಕ್ಕಂತೆ ಲೋಕಾನ್ನ ಜಗ್ಗಬೇಕೆಂಬ ನಿನ್ನ ಪೌರುಷದ ಹಟಕ್ಕೆ ಮುಂಚೆ ಹೊಟ್ಟೆ ಒಂದಿಷ್ಟು ತಂಪಾಗಬೇಕೋ ಬೇಡವೋ? ಆ ತಂಪು ನಿನಗೆಲ್ಲಿಂದ ಸಿಕ್ಕೋದು? ಅಮ್ಮನ ಹಾಲಿನಿಂದ, ನನ್ನ ಅಭ್ಯಂಜನದಿಂದ......'[೧೯]

ಕಥೆಯ ಶೀರ್ಷಿಕೆಯೇ 'ಸೂರ್ಯನ ಕುದುರೆ' ಇದರ ಪರಿಕಲ್ಪನೆಯನ್ನು ಲೇಖಕನು ವೆಂಕಟ ಜೋಯಿಸನಿಗೆ ಹೋಲಿಸುವ ಕಥೆ ಇದಾಗಿದೆ. "ಎದುರಿಗೊಂದು ಪುಟ್ಟ ಗಿಡ. ಗಿಡದ ಮೇಲೊಂದು ಎಲೆ, ಎಲೆ ಮೇಲೊಂದು ಎಲೆ, ಎಲೆ ಮೇಲೊಂದು ಚಂಗನೆ ನೆಗೀತಿದೆ. ಚಂಗನೆ ನೆಗೀತಿದೆ.... ಪುಟೀತಿದೆ.... ಹೀಗೇ...ನಿಂಗೆ ಯಾವತ್ತೋ ಒಂದು ದಿನ ನೀನು ಸ್ಕೂಲಿಗೆ ಬರ್ತಿದ್ದಾಗದು ನೆಗೆದಿತ್ತು–ಅಲ್ವ? ನೀನು ಚೀಲಾನ್ನ ಬಿಸಾಕಿ ನೋಡ್ತಾ ನಿಂತಿ, ನೋಡ್ತಾ ನಿಂತ, ನೋಡ್ತಾನೇ.....

ಸೂರ್ಯನ ಕುದುರೇನ ನೋಡ್ತಾ ನಿಂತಿ. ಅದರ ಡೊಂಕು ಕಾಲನ್ನ ನೋಡ್ತಾ ನಿಂತಿ, ಅದರ ಡುಬ್ಬು ಬೆನ್ನನ್ನು ನೋಡ್ತಾ ನಿಂತಿ. ಅತ್ತ, ಮತ್ತಿತ್ತ, ಅತ್ತ, ಮತ್ತಿತ್ತ, ಅತ್ತ, ಮತ್ತಿತ್ತ.... ಅರೆರೆ ಮತ್ತಿತ್ತ....

ಪುಟ್ಟ ಕುದುರೆ, ಪುಟಾಣಿ ಕುದುರೆ... ಹೇಗೆ ಸೂರ್ಯ ಅದರ ಬೆನ್ನ ಮೇಲೆ ಸವಾರಿ ಮಾಡ್ತಾನಲ್ಲಾಂತಾ ನೋಡ್ತಾ ನಿಂತಿ...

ಹಸಿರಿನ ಮೇಲೆ ಸೂರ್ಯ ಸವಾರಿ ಮಾಡ್ತಾನೋ– ಸರದಾರ ಅವ.... ಇದು ಪುಟ್ಟ ಕುದುರೆ. ಹಸಿರು ಬಣ್ಣದ ಪುಟಾಣಿ ಕುದುರೆ. ಚಂಗನೆ ಹಗುರಾಗಿ ಹಾರೋ ಕುದುರೆ. ಅದರ ಡುಬ್ಬು ಬೆನ್ನಿನ ಮೇಲೆ ದೊಡ್ಡ ಸೂರ್ಯ ಈಟೀಟು ಕೂತ, ಈಟೀಟು ಕೂತ, ಹಗುರಾಗಿ ಕೂತ, ಕಾಣದಂತೆ ಕೂತ, ಸಂದೀಲಿ ಮಿಂಚುತಾ ಕೂತ...."[೨೦]

ಹೀಗೆ ಸೂರ್ಯನ ಕುದುರೆಯಂತೆ ಯಾರಿಗೂ ತೊಂದರೆ ಕೊಡದೆ ಇರುವ ನಿರುಪದ್ರವಿ ವೆಂಕಟಜೋಯಿಸನು, ಆತನ ಸಂಸಾರವಾಯಿತು, ಅವನಾಯಿತು ಎನ್ನುವಂತಿದೆ. ಆದರೆ ಮಗನ ಬದುಕು ಸರಿದಾರಿ ಕಾಣಲಿಲ್ಲ. ಹೆಣ್ಣು ಮಕ್ಕಳಿಗೆ ಮದುವೆಯಾಗಿಲ್ಲ. ಜೋಯಿಸನು ನಂಬಿದ ಹೆಂಡತಿಯೂ ಕೂಡ ಕೌಟುಂಬಿಕ ಸುಖ ಕಾಣಲಿಲ್ಲ. ಲೇಖಕನ ಹೋಲಿಕೆ ಒಂದು ಕೀಟಕ್ಕೆ ಮೀಸಲಂತಿದ್ದರೂ ಅದರ ಮಹತ್ವ ಈ ಕಥೆಯಲ್ಲಿ ತಂದಿದ್ದಾರೆ.

* * * * * * * *

## ೨.೨. ವಿವಾಹ-ವಿವಾಹೇತರ ದೈಹಿಕ ಸಂಬಂಧಗಳು.

ಸಮಾಜದಲ್ಲಿನ ನಾಗರಿಕತೆಯನ್ನು ಮೈಗೂಡಿಸಿಕೊಂಡಿರುವ ಮನುಷ್ಯನಲ್ಲಿ ಇತರೆ ಪ್ರಾಣಿ-ಪಕ್ಷಿಗಳಂತೆ,ಹಸಿವು,ಬಾಯಾರಿಕೆ,ಮೈಥುನ,ನಿದ್ದೆಯ,ವಿಚಾರಗಳು ಪ್ರಕೃತಿದತ್ತವಾಗಿರುತ್ತವೆ.

ಭಾರತೀಯರ ಸಮಾಜದಲ್ಲಿ ವೈವಾಹಿಕ ಜೀವನವು ಪ್ರಮುಖವಾದ ಸ್ಥಾನವನ್ನು ಪಡೆದುಕೊಂಡಿದೆ. ಪ್ರಮುಖವಾಗಿ ಹಿಂದೂ ಧರ್ಮದ ವಿವಾಹವು ಅದರದೆ ಆದ ಆಚಾರ-ವಿಚಾರಗಳ ಸಂಪ್ರದಾಯದ ಅಡಿಯಲ್ಲಿ ಜರುಗುತ್ತದೆ. ವೈವಾಹಿಕ ವಿಷಯದ ಬಗ್ಗೆ ಚ.ನ. ಶಂಕರ್‌ರಾವ್ "ಹಿಂದೂ ವಿವಾಹವು ಒಂದು ಸಾಮಾಜಿಕ ಒಪ್ಪಂದವಲ್ಲ. ಅಥವಾ ಲೈಂಗಿಕ ಕ್ರಿಯೆಯಲ್ಲಿ ತೊಡಗಲು ಕೊಡಲಾಗುವ ಪರವಾನಗಿಯೂ ಅಲ್ಲ. ಅದೊಂದು ಪವಿತ್ರವಾದ ವಿಧಿ ಅಥವಾ ಸಂಸ್ಕಾರ, ಅದೊಂದು ಧಾರ್ಮಿಕ ಕರ್ತವ್ಯ ಕೂಡಾ. ಹಿಂದುಗಳು ಅನುಸರಿಸುವ ಹಲವಾರು ಸಂಸ್ಕಾರ ವಿಧಿಗಳಲ್ಲಿ ವಿವಾಹವೂ ಅತ್ಯಂತ ಮುಖ್ಯವಾದುದು."[೨೮] ಎನ್ನುತ್ತಾರೆ.

ಸ್ತ್ರೀ ಪ್ರಧಾನ ಸಂಬಂಧಗಳಿಗೆ ಸಂಬಂಧಿಸಿದಂತೆ ಶ್ರೀಮತಿಯವರು, ಹೆಣ್ಣಿನ ಸ್ಥಾನಮಾನಗಳ ಬಗ್ಗೆ ವಿವರಿಸುತ್ತಾ "ಸಾಮಾಜಿಕ ಜೀವನವನ್ನು ಕಟ್ಟುವಲ್ಲಿ ಜಂಡರ್ ಪಾತ್ರ ದೊಡ್ಡದು. ಎಲ್ಲ ಮಾನವರೂ ಇದರ ವ್ಯಾಪ್ತಿಗೆ ಬರುತ್ತಾರೆ. ಹೆಣ್ಣು ಗಂಡು ಎಂಬ ವಿಭಜನೆಗೆ ಒಳಗಾಗದೆ ಯಾವೊಬ್ಬ ವ್ಯಕ್ತಿಯೂ ಪಾರಾಗುವುದು ಸಾಧ್ಯವೇ ಇಲ್ಲ. ಜಂಡರ್ ಎಂಬುದು ಒಂದು ಸಾಮಾಜಿಕ ರಚನೆಯಾಗಿರುವುದರಿಂದಲೇ ಅದು ಮುಖ್ಯ. ಇದನ್ನು ನಮ್ಮ ನಿತ್ಯದ ವ್ಯವಹಾರಗಳಲ್ಲಿ ಅಚರಿಸುತ್ತಿರುತ್ತೇವೆ. ಇದಕ್ಕೂ ನಮ್ಮ ಸ್ವಭಾವ ಇಲ್ಲವೇ ಜೈವಿಕ ರಚನೆಗೂ ಸಂಬಂಧವಿಲ್ಲ. ಧರ್ಮ, ಕುಲಚಹರೆ, ವಯಸ್ಸು, ವರ್ಗ, ಲೈಂಗಿಕ ದೃಷ್ಟಿಕೋನ, ಪ್ರದೇಶ – ಮುಂತಾದುವುಗಳೊಡನೆ ಜಂಡರ್‌ಗೆ ಸಂಬಂಧವಿದೆ. ಇವೆಲ್ಲವೂ ಪರಸ್ಪರ ಕ್ರಿಯಾಶೀಲವಾಗಿರುತ್ತವೆ."[೨೨] ಎಂದು ಹೇಳುತ್ತಾರೆ.

ದೈಹಿಕ ಸಂಬಂಧಳಿಗೆ ಗಂಡು-ಹೆಣ್ಣಿನ ನಡುವೆ ತಾರತಮ್ಯಗಳು ಇರುವುದಿಲ್ಲ. ಸಾಮಾಜಿಕವಾಗಿ ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀ ಗಂಡಸಿನ ಅಧೀನದಲ್ಲಿ ಇರುತ್ತಾಳೆ. ಅದು ತಾತ್ಕಾಲಿಕವೆಂಬುದನ್ನು ಕಥೆಗಾರರ ಕಥೆಗಳನ್ನು ಅವಲೋಕಿಸಿದಾಗ ತಿಳಿಯುತ್ತದೆ. ಸ್ತ್ರೀ ಪ್ರಧಾನ ದೈಹಿಕ ಸಂಬಂಧಗಳು ಪುರುಷನಷ್ಟೆ ಶಕ್ತಿಯನ್ನು ಹೊಂದಿರುತ್ತವೆಂಬುದನ್ನು ಅಧ್ಯಯನಕ್ಕೆ ಬಳಸಿಕೊಂಡಿರುವ ಕಥೆಗಳಲ್ಲಿ ಗುರುತಿಸಲಾಗಿದೆ.

### ೨.೨.೧. ಸ್ತ್ರೀ ಪ್ರಧಾನ ದೈಹಿಕ ಸಂಬಂಧಗಳು

ದೈಹಿಕ ಸಂಬಂಧದ ವಿಚಾರಕ್ಕೆ ಪುರುಷನಷ್ಟೆ ಸ್ತ್ರೀಯು ಪ್ರಮುಖಳಾಗುತ್ತಾಳೆ. ಅವಳು ಲೈಂಗಿಕ ವಿಚಾರಕ್ಕೆ ಸಂಬಂಧಿಸಿದಂತೆ, ತನ್ನದೇ ಆದ ದೇಹ ಪ್ರಕೃತಿಯನ್ನು ಹೊಂದಿರುತ್ತಾಳೆ.

ಈ ಹಿನ್ನೆಲೆಯಲ್ಲಿ ಮಮತಾ ಜಿ. ಸಾಗರರವರು "ಹೆಣ್ಣಿನ ದೇಹವನ್ನು ನೋಡುವ ದೃಷ್ಟಿಕೋನ ಆಧರಿಸುತ್ತದೆ ಅವಳ ಲೈಂಗಿಕತೆ. ಅವಳ ಲೈಂಗಿಕತೆಯನ್ನು ಅರ್ಥಮಾಡಿಕೊಳ್ಳುವ ಬಗೆ ಅವಳ ದೇಹವನ್ನು ನೋಡುವ ದೃಷ್ಟಿಕೋನವನ್ನು ಆಧರಿಸುತ್ತದೆ. ನೋಡುವ ಬಗೆ ಬದಲಾದ ಹಾಗೇ ಅರ್ಥವಂತಿಕೆಯೂ ಬದಲಾಗುತ್ತದೆ. ದೇಹ ಮತ್ತು ಲೈಂಗಿಕತೆಗಳನ್ನು ಅರ್ಥ ಮಾಡಿಕೊಳ್ಳುವುದನ್ನೇ ಆಧರಿಸುತ್ತದೆ. ಅವಳೆಂಬ ಅಸ್ಮಿತೆಯ ಸ್ವರೂಪ ಯಾವಾಗಲೂ ಈ ದೇಹಕ್ಕೆ ಕೊಡಲಾದ ಅರ್ಥಗಳನ್ನಾಧರಿಸಿಯೇ ನಮ್ಮ ಅನುಭವಗಳು ಸಾಕಾರವಾಗಬೇಕು ಎಂಬ ಒತ್ತಡಗಳೂ ಇರುತ್ತವೆ. ಇಂಥ ಒತ್ತಡಗಳು ಎದುರಾದ ಹಾಗೆಲ್ಲಾ ನಿಭಾಯಿಸಿಕೊಂಡು ಮುಂದುವರೆದವರ ಕಥೆಗಳೇ ಇಂದು ನಮಗೆ ಗಟ್ಟಿತನವನ್ನು ನೀಡಿದೆ ಎಂದರೆ ತಪ್ಪಾಗಲಾರದು. ಹೆಣ್ಣಿನ ದೇಹ ಮತ್ತು ಲೈಂಗಿಕತೆಗಳ ಬಗ್ಗೆ ಅರ್ಥಪೂರ್ಣವಾಗಿ ಮಾತನಾಡದೆ, ಮಾತಾಡಗೊಡದೇ ಇರುವುದೂ ಸಹ ಹೆಣ್ಣಿನ ಅಸ್ತಿತ್ವವನ್ನು ಕಡೆಗಾಣಿಸುವ ಮತ್ತು ಹತೋಟಿಯಲ್ಲಿಡುವ ಹಾಗು ಅಸ್ಮಿತೆಯನ್ನು ತಿದ್ದುವ ಒಳಸಂಚುಗಳಲ್ಲೊಂದು. ಹೆಣ್ಣಿನ ಅಸ್ತಿತ್ವವೇ ಅವಳ ದೇಹವಾದಾಗ, ಅವಳ ಪ್ರಗತಿ ಏಳಿಗೆ, ಸುಧಾರಣೆಗಳನ್ನೂ ಸಹಾ ಅವಳ ದೇಹ ಹಾಗೂ ಲೈಂಗಿಕತೆಯ ಹಿನ್ನೆಲೆಯಲ್ಲೇ ಹತ್ತಿಕ್ಕುವ, ಹತೋಟಿಯಲ್ಲಿಡುವ ಕಾರ್ಯ ಪ್ರಪಂಚದಾದ್ಯಂತ ನಿರಂತರವಾಗಿ ನಡೆದು ಬಂದಿದೆ.[೨೩] ಎನ್ನುತ್ತಾರೆ.

ಇದಕ್ಕೆ ಪೂರಕವಾಗಿ ಲಂಕೇಶ್‌ರವರು "ಲೈಂಗಿಕತೆ ಇರುವುದು ಮಕ್ಕಳು ಹೆರುವುದಕ್ಕಾಗಿ ಅಲ್ಲ, ಲೈಂಗಿಕತೆ ಇರುವುದು ಮನುಷ್ಯರ ಪ್ರೀತಿಗಾಗಿ, ಕ್ರೀಡೆಗಾಗಿ, ಸಂತೋಷಕ್ಕಾಗಿ ಮಾತ್ರ; ಜೊತೆಗಾರಿಕೆಗೆ, ಒಬ್ಬಂಟಿತನವನ್ನು ತೊಡೆದುಹಾಕಲು, ಮನುಷ್ಯರನ್ನು ಪೂರ್ವದ ಬೆಂಕಿಯ ಹತ್ತಿರ ಇಡಲು ಲೈಂಗಿಕತೆ ಅಗತ್ಯ."[೨೪] ಎಂದು ಅಭಿಪ್ರಾಯ ಪಡುತ್ತಾರೆ.

ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನೋಡುವುದಾದರೆ ಆಧುನಿಕ ಮಹಿಳೆಯು ಯೋಚಿಸುವ ರೀತಿಯನ್ನು, ದುಡಿಮೆಯ ಸ್ವರೂಪವನ್ನು, ದೈಹಿಕ ಕಾಮನೆಗಳ ಬಗ್ಗೆ ನಡೆಸುವ ಹೋರಾಟಗಳನ್ನು, ಸೋಲು-ಹತಾಶೆಯ ಮನಸ್ಥಿತಿಯನ್ನು, ಜಾತಿ-ಧರ್ಮಾಧಾರಿತ ಸಮಾಜದಲ್ಲಿ ಕಾಣಬಹುದಾಗಿದೆ.

ಸ್ವಾತಂತ್ರ್ಯೋತ್ತರ ಆಧುನಿಕ ಕನ್ನಡ ಸಾಹಿತ್ಯವು, ಸ್ತ್ರೀವಾದಿ ಚಿಂತನೆಯ ಪರಿಕಲ್ಪನೆಗಳನ್ನು ಪ್ರಧಾನವಾಗಿಟ್ಟುಕೊಂಡು ಹೆಚ್ಚು ಬದಲಾವಣೆಯನ್ನು ಪಡೆಯಿತು. ಸ್ತ್ರೀವಾದಿ ಸಮಾಜದ ವಿಚಾರಗಳನ್ನು ಕನ್ನಡ ಸಾಹಿತಿಗಳು ತಮ್ಮದೆ ಆದ ರೀತಿಯಲ್ಲಿ ಬರವಣಿಗೆಯಲ್ಲಿ ಅಳವಡಿಸಿಕೊಂಡರು. ಆ ಮೂಲಕ ವಿವಿಧ ಪ್ರಕಾರಗಳಲ್ಲಿ ಸಾಹಿತ್ಯವನ್ನು ರಚನೆ ಮಾಡಿದರು. ರಚನಾತ್ಮಕ ಪರಂಪರೆಯ ನವ್ಯ ಸಾಹಿತ್ಯವೂ ಈ ಕಾಲದಲ್ಲಿ ಹೆಚ್ಚು ಪ್ರಚಾರವಿದ್ದು ಪ್ರಯೋಗಶೀಲತೆಗೆ ಮನ್ನಣೆ ನೀಡಲಾಯಿತು.

ರಹಮತ್ ತರೀಕೆರೆಯವರು 'ಸ್ತ್ರೀ ಚೈತನ್ಯದ ನೆಲೆ' ಲೇಖನದಲ್ಲಿ "ಹೆಣ್ಣಿನ ಲೈಂಗಿಕ ಸ್ವಾತಂತ್ರ್ಯವನ್ನು ತಾಯ್ತನದ ಹಂಬಲವಾಗಿ, ಗೊಡ್ಡು ಸಂಪ್ರದಾಯಗಳನ್ನು ಮುರಿಯುವ

ಪ್ರೇಮದ ದಿಟ್ಟತನವಾಗಿ, ಸೃಜನಶೀಲಕ ಶಕ್ತಿಯಾಗಿ ಕಾಣಿಸುವುದು ಬೇರೆ. ಗಂಡಸರನ್ನು ಸೆಳೆದು ತನ್ನ ಹದ್ದುಬಸ್ತಿನಲ್ಲಿ ಇಡಬಹುದಾದ ದೈಹಿಕ ಕಾಮದ ಆಕರ್ಷಣೆಯಾಗಿ ಕಾಣಿಸುವುದು ಬೇರೆ."[೨೫] ಎಂದು ಅಭಿಪ್ರಾಯ ಪಡುತ್ತಾರೆ.

ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಬರಹಗಾರರಾದ ತೇಜಸ್ವಿ, ಲಂಕೇಶ್, ಅನಂತಮೂರ್ತಿ ಲೇಖಕರು ತಮ್ಮದೇ ಆದ ವಿಶಿಷ್ಟ ಶೈಲಿಯ ಬರವಣಿಗೆಯ ಮೂಲಕ ಕಥಾ ಸಾಹಿತ್ಯ ಪರಂಪರೆಯಲ್ಲಿ ಸ್ತ್ರೀ ಪ್ರಧಾನವಾದ ಲೈಂಗಿಕ ಪರಿಕಲ್ಪನೆಯ ಸಮಾಜವನ್ನು ಗುರುತಿಸಿದ್ದಾರೆ.

ಪೂರ್ಣಚಂದ್ರ ತೇಜಸ್ವಿಯವರು ಸಂಪೂರ್ಣವಾಗಿ ಸ್ತ್ರೀ ಪ್ರಧಾನವಾದ ದೈಹಿಕ ಸಂಬಂಧಗಳನ್ನು ತಮ್ಮ ಕಥೆಯಲ್ಲಿ ಕಟ್ಟಿಕೊಡದೆ, ಆ ವಿಚಾರವನ್ನು ಪ್ರಧಾನವಾಗಿಸದೆ ಆಕಸ್ಮಿಕ ಘಟನೆಯೊಂದು ಜರುಗುವ ರೀತಿಯಲ್ಲಿ ತಮ್ಮ ಕಥೆಯ ಮೂಲಕ ನಿರೂಪಿಸಿದ್ದಾರೆ.

'ಕಿರಗೂರಿನ ಗಯ್ಯಾಳಿಗಳು' ಕಥೆಯಲ್ಲಿ ಕಾಳೇಗೌಡನ ಹೆಂಡತಿ ನಾಗಮ್ಮ ನಾಟಿ ಚಿಕಿತ್ಸೆ ಮಾಡಲು ಬಂದಿದ್ದ ನಂಬೂದಿರಿ ಪಂಡಿತನ ಜೊತೆ ಓಡಿ ಹೋಗುವ ಪ್ರಸಂಗವನ್ನು ತರುತ್ತಾರೆ. ಆದರೆ ಇಲ್ಲಿ ದೈಹಿಕ ಕಾಮನೆಗಳು ಪ್ರಧಾನವಾಗಿರದೆ ಗಂಡನ ನಡವಳಿಕೆಗಳಿಂದ ರೋಸಿಹೋಗಿದ್ದ ಮಹಿಳೆ ಅನ್ಯ ದಾರಿಯನ್ನು ಕಂಡುಕೊಳ್ಳುವ ಸನ್ನಿವೇಶವನ್ನು ಓದುಗನಿಗೆ ನೀಡುತ್ತಾರೆ. ಮುಂದುವರೆದಂತೆ ಈ ಕಥೆಯಲ್ಲಿ ಒಂದು ಅಂಶವನ್ನು ಗಮನಿಸಬಹುದು. ನಾಗಮ್ಮಳ ಪ್ರತಿನಿಧಿಯಾಗಿ ಪಂಚಾಯಿತಿ ಕಟ್ಟೆಯಲ್ಲಿ ಕಾಣುವ ದಾನಮ್ಮಳು ಹೆಣ್ಣು ಪರಗಂಡಸಿನ ಜೊತೆ ಸಂಬಂಧ ಬೆಳೆಸಲು ಕಾರಣಗಳನ್ನು ನೀಡುತ್ತಾಳೆ. ಸೊಂಟ ಬಿದ್ದ ಗಂಡನಿಗೆ ದೈಹಿಕ ಶಕ್ತಿ ಇಲ್ಲದಿರುವಾಗ ಹೆಣ್ಣು ಅನ್ಯ ಗಂಡಸಿನ ಜೊತೆ ಹೋಗುತ್ತಾಳೆ. ಸದಾ ಸೇಂದಿ ಕುಡಿದು ಓತಿಕ್ಯಾತನಂತಿರುವ ಗಂಡನ ಜೊತೆ ದೈಹಿಕ ಸಂಬಂಧದಿಂದ ಮಕ್ಕಳಾಗುವುದಾದರೂ ಹೇಗೆ ಸಾಧ್ಯವಾಗುತ್ತದೆ? ಎಂಬ ಪ್ರಶ್ನೆ ಹಾಕುವ ಪ್ರಬುದ್ಧ ಹೆಣ್ಣಾಗಿ ಕಾಣುತ್ತಾಳೆ. ತೇಜಸ್ವಿಯವರ ಬಹುಪಾಲು ಕಥೆಗಳು ಚಿಂತನೆಗೆ ಒರೆಹಚ್ಚುವಂತವುಗಳಾಗಿವೆ. ಈ ಕಥೆಯೂ ಕೂಡ ಅಂತಹ ಒಂದು ಸನ್ನಿವೇಶವನ್ನು ತರುತ್ತದೆ. ಹೆಣ್ಣಿನ ದೈಹಿಕ ಸಂಬಂಧವು ಅನಿವಾರ್ಯತೆ ಮತ್ತು ಅಗತ್ಯತೆ ಎಂಬುದು ಪುರುಷನಷ್ಟೆ ಸರಿಸಮಾನವಾದುದು. ಇಲ್ಲಿ ಯಾರು ಮೇಲು-ಕೀಳು ಎಂಬ ಭಾವನೆ ಇರಕೂಡದು ಎಂಬುದನ್ನು ದಾನಮ್ಮಳ ಮಾತಿನ ಹೇಳಿಕೆಯಲ್ಲಿ ತರುತ್ತಾರೆ. ಜೊತೆಗೆ ಇಲ್ಲಿ ನಾಗಮ್ಮಳು ಅನಿವಾರ್ಯತೆಯಿಂದ ಪರಪುರುಷನ ಜೊತೆ ಹೋದ ಕಾರಣವನ್ನು ಈ ಕಥೆಯಲ್ಲಿ ಉಲ್ಲೇಖಿಸುತ್ತಾರೆ.

ಸಹಜವಾದ ಪುರುಷನ ಅಧೀನತೆಗೆ ಹೆಣ್ಣು ಬಲಿಯಾಗುತ್ತಾಳೆ ಎಂಬುದನ್ನು ಬಿ.ಎನ್. ಸುಮಿತ್ರಬಾಯಿಯವರು " ಪ್ರೇಮ ಎಂಬುದು ಮಾನಸಿಕ ಅಸ್ವಸ್ಥೆಯ ಸ್ಥಿತಿ. ಅದಕ್ಕೆ

ಬಲಿಯಾದ ಮಹಿಳೆ ತನ್ನ ಶೋಷಕನನ್ನೇ ತನ್ನ ಉದ್ಧಾರಕನೆಂದು ಭ್ರಮಿಸುತ್ತಾಳೆ. ಪ್ರೇಮ, ಕಾಮ, ಕುಟುಂಬಗಳು ಮಹಿಳೆಯರನ್ನು ಪುರುಷಾಧೀನವಾಗಿ ಉಳಿಸಿಟ್ಟಿರುವ ಪರಂಪರಾಗತ ಸಂಸ್ಥೆಗಳು. ಸ್ತ್ರೀಯರು ಪರಸ್ಪರ ಆತ್ಮೀಯತೆ, ಭಾವನಾತ್ಮಕ ಸಂಬಂಧಗಳಲ್ಲಿ ತೊಡಗಿ ಪುರುಷ ಸಂಬಂಧದಿಂದ ಹೆಚ್ಚು ಹೆಚ್ಚು ಸ್ವತಂತ್ರರಾದಲ್ಲಿ, ಅವರ ಪುರುಷಾಸಕ್ತಿ ಕುಗ್ಗುತ್ತದೆ."[೨೬] ಎಂದು ಅಭಿಪ್ರಾಯ ಪಡುತ್ತಾರೆ.

ತೇಜಸ್ವಿಯವರಂತೆ ಲಂಕೇಶರು ತಮ್ಮ ಕಥಾ ಚೌಕಟ್ಟಿನಲ್ಲಿ ಸ್ತ್ರೀ ಪ್ರಧಾನ ದೈಹಿಕ ಸಂಬಂಧಗಳನ್ನು ತರುತ್ತಾರೆ. ಅವರ 'ಸೆಪ್ಟೆಂಬರ್ ಪ್ರಥಮ ರಾತ್ರಿ' ಕಥೆಯು ಶಾಂತ ಎಂಬುವಳ ಸುತ್ತಾ ಹೆಣೆದಿರುವ ಕಥೆಯಾಗಿದೆ. ಕಥೆಯ ನಿರೂಪಕನ ಜೊತೆ ಬಸ್‌ಸ್ಟ್ಯಾಂಡಿನಲ್ಲಿ ಶಾಂತಾಳ ಭೇಟಿಯಾಗುತ್ತದೆ. ಮುಂದುವರೆಯುತ್ತಾ ಶಾಂತಳ ಮನೆಯವರೆಗೂ ಬರುತ್ತಾನೆ. ಅವನ ಜೊತೆ ಶಾಂತಳು ವಿಚಾರವಂತಳಾಗಿ ಮಾತನಾಡುತ್ತಾಳೆ. ಮುಂದುವರೆದಂತೆ ಆ ವ್ಯಕ್ತಿಯ ಬಳಿ ಸಲುಗೆಯಿಂದ ವರ್ತಿಸುತ್ತಾಳೆ. ಇಬ್ಬರ ನಡುವೆ ದೇಹ ಬೆಸೆಯುವಾಗ ಆಕೆಯೇ ಅವನಿಗೆ ತನ್ನ ದೇಹವನ್ನು ನೀಡುತ್ತಾಳೆ. ಸಮಾಜ ವೇಶ್ಯೆಯೆಂದು ಬಯಸಿದರೂ ಆತನಿಗೆ ದೇಹವನ್ನು ಅನುಕಂಪ–ಪ್ರೀತಿಯಿಂದಲೇ ನೀಡುವ ಚಿತ್ರಣವನ್ನು ಕಥೆಗಾರರು ತರುತ್ತಾರೆ. ಬದುಕಿಗೆ ಹಣ ಅನಿವಾರ್ಯ. ಅದಕ್ಕಾಗಿ ದೇಹವನ್ನು ನೀಡುವ ಶಾಂತ, ಕೊಂಚವಾದರೂ ತನ್ನ ಕಸುಬಿನಿಂದ ಹೊರ ಬಂದು ಪ್ರೀತಿಯಿಂದ ಆ ನಿರೂಪಕನನ್ನು ದೈಹಿಕವಾಗಿ ಅಪ್ಪಿಕೊಳ್ಳುವ ಕಥೆಯನ್ನು ಓದುಗರು ಕಾಣಬಹುದು.

ಲಂಕೇಶರ ಮತ್ತೊಂದು ಕಥೆ 'ಗುತ್ತಿ ಗೀತಾ ಆದದ್ದು'. ಇಲ್ಲಿಯೂ ಕೂಡ ವೇಶ್ಯೆಯ ಬದುಕನ್ನು ಅನಾವರಣಗೊಳಿಸುತ್ತಾರೆ. ಸಮಾಜದಲ್ಲಿ ವೇಶ್ಯಾವೃತ್ತಿ ತನ್ನದೆ ಆದ ನಿಲುವುಗಳನ್ನು ಹೊಂದಿದೆ. ಆಕಸ್ಮಿಕವಾಗಿ, ಬದುಕಿನ ಅನಿವಾರ್ಯತೆಯ ಕಾರಣದಿಂದ ವೇಶ್ಯಾವೃತ್ತಿಗೆ ಇಳಿಯುತ್ತಾರೆ. ಗುತ್ತಿಯ ಕಥೆಯೂ ಕೂಡ ಈ ಚೌಕಟ್ಟಿನಲ್ಲಿಯೇ ಕಾಣುತ್ತದೆ. ಸಣ್ಣ ಘಟನೆಯಿಂದ ಆರಂಭವಾಗುವ ಈ ಕಥೆಯು ಸಮಾಜ ವ್ಯವಸ್ಥೆಯ ದಾರುಣತೆಯನ್ನು ತೋರಿಸುತ್ತದೆ. ಗುತ್ತಿ ಹಳ್ಳಿಯ ಹುಡುಗಿ. ಈಕೆಯು ನಗರದಲ್ಲಿ ನಡೆಯುವ ಸಂತೆಗೆ ತನ್ನ ಅವ್ವನ ಜೊತೆ ಬರುತ್ತಾಳೆ. ಗುತ್ತಿಯನ್ನು ಬಿಟ್ಟು ಆಕೆಯ ಅವ್ವಳು ಎಲ್ಲೋ ಹೋಗಿದ್ದ ಸಂದರ್ಭದಲ್ಲಿ ತನ್ನ ಅವ್ವಳಿಗಾಗಿ ಕಾಯುತ್ತಾ ನಿಂತಿರುತ್ತಾಳೆ. ಈ ಹೆಣ್ಣು ಮುಂದೆ ಗೀತಳಾಗಿ ಬದಲಾಗುವ ಸನ್ನಿವೇಶವನ್ನು ಕಥೆಗಾರರು ತರುತ್ತಾರೆ. ತನಗೆ ಇಷ್ಟವಿರಲಿ, ಇಲ್ಲದಿರಲಿ ಅನಿವಾರ್ಯವಾಗಿ ದೇಹವನ್ನು ಮಾರಿಕೊಳ್ಳುವ ಸ್ಥಿತಿ ಈ ಕಥೆಯಲ್ಲಿದೆ. ಸಮಾಜದಲ್ಲಿನ ಪೊಲೀಸ್, ರಾಜಕಾರಣಿಗಳು, ಅಧಿಕಾರಿಗಳ ಕಾಮನೆಗಳಿಗೆ ಗುತ್ತಿ ಬಲಿಯಾಗುತ್ತಾಳೆ. ಅದೇ ಗುತ್ತಿ ಮುಂದೆ ಗೀತಾಳಾಗಿ ಬದಲಾವಣೆಗೊಂಡು ಸಮಾಜದ ಗಣ್ಯರಿಗೆ ತನ್ನ ದೇಹವನ್ನು ನೀಡುತ್ತಾಳೆ.

ಲಂಕೇಶರ ಮತ್ತೊಂದು ಕಥೆ 'ದಾಹ'. ಸಾವಿನ ಘಟನೆಯೊಂದರಲ್ಲಿ ಸಾಂತ್ವನ ಹೇಳಲು ಬಂದ ಪದ್ಮಾಳು, ಸತ್ತ ಸರೋಜಳ ಬಗ್ಗೆ ಅನುಕಂಪ ಸೂಚಿಸುತ್ತಾ, ಅವಳ ಗಂಡನ ಸಾಮಿಪ್ಯವನ್ನು ಬಯಸಲು ಮುಂದಾಗುತ್ತಾಳೆ. ಇಲ್ಲಿ ಪುರಷನ ದೈಹಿಕ ಕಾಮನೆಗಳಂತೇ ಹೆಣ್ಣಿಗೂ ಸಹ ಕಾಮನೆಗಳು ಇರುತ್ತವೆ. ಒಂದು ಹೆಣ್ಣಿನ ಸಾವಿನ ಘಟನೆಯು ಪುರುಷನಿಗೆ ಮತ್ತೊಂದು ಹೆಣ್ಣಿನ ಸಾಮಿಪ್ಯವನ್ನು ತಂದು ಕೊಡುತ್ತದೆ. "ಮನುಷ್ಯನ ದೈಹಿಕ ನೀಚತನಕ್ಕೆ ಗಂಡು-ಹೆಣ್ಣಿನ ನಡುವೆ ಬೇಧ-ಭಾವ ಇರುವುದಿಲ್ಲ" ಎಂಬುದನ್ನು ತೋರಿಸಿದ್ದಾರೆ. ಈ ಕಥೆಯಲ್ಲಿ ಮೂರು ಹೆಣ್ಣಿನ ಪಾತ್ರಗಳು ಬರುತ್ತವೆ. ಶಿಕ್ಷಣ ಇಲಾಖೆಯ ಅಧಿಕಾರಿಯ ಹೆಂಡತಿ ಸರೋಜಳ ಸಾವಿನ ಸಂತಾಪದ ಸಂದರ್ಭದಲ್ಲಿ ಪದ್ಮಾಳು ಬಂದಿರುತ್ತಾಳೆ. ಈಕೆ ಚನ್ನಪಟ್ಟಣದ ಹೈಸ್ಕೂಲ್ ಟೀಚರ್ ಆಗಿರುತ್ತಾಳೆ. ಅಧಿಕಾರಿಯ ದೈಹಿಕ ಸಾಮಿಪ್ಯವನ್ನು ಬಯಸುತ್ತಾಳೆ. ಈ ವೇಳೆಗಾಗಲೇ ತನ್ನ ಹಾಗೂ ಟೀಚರ್ ಸೆಲ್ವಿಯ ವಿಚಾರವನ್ನು ಪದ್ಮಾಳಿಗೆ ತಿಳಿಸುತ್ತಾನೆ. ಸೆಲ್ವಿಯಾಳ ವರ್ಗಾವಣೆಯ ವಿಚಾರದಲ್ಲಿ, ಆ ಅಧಿಕಾರಿಯು ನಡೆಸಿದ ಪ್ರಯತ್ನಗಳನ್ನು ಹೇಳುತ್ತಾನೆ. ಅಂತಿಮವಾಗಿ ಸೆಲ್ವಿಯಾಳು ಅವನಿಗೆ ದೈಹಿಕವಾಗಿ ಹತ್ತಿರವಾಗುತ್ತಾಳೆ. ಮುಂದೆ ಆಕೆಗೆ ವರ್ಗಾವಣೆಯಾಗುತ್ತದೆ. ಈ ವಿಚಾರಗಳನ್ನು ಪದ್ಮಾಳಿಗೆ ತಿಳಿಸಿದರೂ ಕೂಡ ಆ ಅಧಿಕಾರಿಯನ್ನು ಬಯಸುವ ಹೆಣ್ಣಿನ ಮನಸ್ಥಿತಿಯನ್ನು ಕಥೆಗಾರರು ನೀಡುತ್ತಾರೆ. ಆ ಮೂಲಕ ಅವನು ತಿಳಿಸುವ ಒಂದು ಅಂಶವೆಂದರೆ "ದೈಹಿಕ ಕಾಮನೆಗಳಿಗೆ ಹೆಣ್ಣು-ಗಂಡು ಎಂಬ ವ್ಯತ್ಯಾಸವಿರುವುದಿಲ್ಲ" ಎಂಬುದಾಗಿದೆ.

ದೈಹಿಕ ಆಕರ್ಷಣೆಗೆ ಹಳ್ಳಿ-ನಗರಗಳ ವ್ಯತ್ಯಾಸವಿಲ್ಲ. ಗಂಡು-ಹೆಣ್ಣು ಎಂಬ ಭೇದ ಭಾವವಿಲ್ಲ. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ತನ್ನ ದೈಹಿಕ ಕಾಮನೆಗಳನ್ನು ಬಿಗಿದಿಟ್ಟುಕೊಂಡಿರುತ್ತಾಳೆ. ಅದು ಮಿತಿಮೀರಿ ನಡೆದಾಗ ಯಾವ ನೈತಿಕ-ಅನೈತಿಕ ವಿಚಾರಗಳಿಗೆ ಅವಕಾಶವಿರುವುದಿಲ್ಲ ಎಂಬುದನ್ನು ಲಂಕೇಶರ ಕಥೆಗಳನ್ನು ಅಧ್ಯಯನ ಮಾಡಿದಾಗ ತಿಳಿಯುತ್ತದೆ. 'ಉರಿದ ಊರಿನವರು' ಕಥೆಯು ಬೈಲಳ್ಳಿಯನ್ನು ಕೇಂದ್ರವಾಗಿರಿಸಿಕೊಂಡು ನಡೆಯುವ ಕಥೆಯಾಗಿದೆ. ಈ ಕಥೆಯಲ್ಲಿ ಗಂಡಿನ ಆಶ್ರಯವಿಲ್ಲದ ಚೆಲುವಮ್ಮನ ಕುಟುಂಬದಲ್ಲಿ ಆಕೆಯ ತಂಗಿ ಗಿರಿಜಳು, ಕುಟುಂಬ ವಿಚಾರಗಳಿಗೆ ಊರಿನಲ್ಲಿ ಸಂಘರ್ಷಗಳು ನಡೆಯುತ್ತಿರುವ ಸನ್ನಿವೇಶದಲ್ಲಿ, ತನ್ನ ಕಾಮನೆಗಳನ್ನು ಈಡೇರಿಸಿಕೊಳ್ಳಲು ಊರಿನ ಪೋಲಿಯಾಗಿದ್ದ ಕೃಷ್ಣನ ಜೊತೆ ಅಪ್ಪಿಕೊಂಡು ಮಲಗುತ್ತಾಳೆ. ಯಾರ ವಿಚಾರಗಳ ವಿರುದ್ಧ ಅಕ್ಕ ಚೆಲುವಮ್ಮ ಹೋರಾಟಕ್ಕೆ ಇಳಿಯಬೇಕೆಂದು ತೀರ್ಮಾನಿಸಿರುತ್ತಾಳೋ ಅಂತಹ ವ್ಯಕ್ತಿಯೊಬ್ಬನ ಜೊತೆ ತನ್ನ ತಂಗಿ ಇರುವುದು ಕಂಡು ಬರುತ್ತದೆ. ವಿಚಿತ್ರ ಸನ್ನಿವೇಶವೆಂದರೆ ಆ ಚೆಲುವಮ್ಮಳು ಸ್ಕೂಲ್ ಮಾಸ್ಟರ್ ಭೈರಪ್ಪನ ಜೊತೆ ಸಂಬಂಧ

ಹೊಂದಿರುತ್ತಾಳೆ. ಊರಿನ ಸಂಘರ್ಷದ ಸನ್ನಿವೇಶದಲ್ಲಿ ಆ ಸ್ಕೂಲ್ ಮಾಸ್ಟರ್ ಮಾತನ್ನು ಕೇಳುವುದಿಲ್ಲ. "ಸಂಘರ್ಷವೇ ಬೇರೆ ದೈಹಿಕ ಕಾಮನೆಗಳೇ ಬೇರೆ" ಎಂಬ ನಿಲುವನ್ನು ಚೆಲುವಮ್ಮ ಹೊಂದಿರುತ್ತಾಳೆ. ಅಂತಿಮವಾಗಿ ಅಕ್ಕ ಚೆಲುವಮ್ಮ ದುರಂತಕ್ಕೆ ಒಳಗಾದರೆ ತಂಗಿ ಗಿರಿಜಳು ಆ ಪೋಲಿಕೃಷ್ಣನನ್ನು ಮದುವೆಯಾಗುತ್ತಾಳೆ. "ಕಾಮನೆಗಳಿಗೆ ಸಂಘರ್ಷಗಳು" ಕಾಣುವುದಿಲ್ಲವೆಂಬ ನಿಲುವು ಈ ಕಥೆಯಲ್ಲಿ ಕಂಡುಬರುತ್ತದೆ.

ಹೆಣ್ಣಿನ ಮನಸ್ಥಿತಿಯನ್ನು ಆಧರಿಸಿ ರಚನೆಯಾಗಿರುವ 'ಸುಭದ್ರ' ಕಥೆಯಲ್ಲಿ ವ್ಯಕ್ತಿಯು ಅತೃಪ್ತ ಕಾಮನೆಗಳನ್ನು ಹೊಂದಿದವನಾದರೆ, ಅವನು ಎಷ್ಟು ವರ್ಷಕಳೆದರೂ ಅದರಿಂದ ಹೊರಬರಲಾರನು ಎಂಬುದನ್ನು ನಿರೂಪಿಸುತ್ತದೆ. ಕಥೆಯ ಪ್ರಧಾನ ವ್ಯಕ್ತಿ ಸುಭದ್ರಳು ಮೆಡಿಕಲ್ ವಿದ್ಯಾರ್ಥಿಯಾಗಿರುತ್ತಾಳೆ. ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿ ಅಮೇರಿಕಾದ ವಿವೇಕ್‌ನ ಜೊತೆ ಮದುವೆಯಾಗಿರುತ್ತಾಳೆ. ಇಬ್ಬರು ಮಕ್ಕಳು ಕೂಡ ಇರುತ್ತಾರೆ. ನಿಗೂಢ ಕಾಯಿಲೆಯಿಂದ ಗಂಡನು ಸಾವನ್ನು ಅಪ್ಪುತ್ತಾನೆ. ಇಬ್ಬರು ಮಕ್ಕಳೊಂದಿಗೆ ಭಾರತಕ್ಕೆ ಹಿಂದಿರುಗುತ್ತಾಳೆ. ದೈಹಿಕ ಕಾಮನೆಗಳ ಈಡೇರಿಕೆಗಾಗಿ ಹಲವು ತಂತ್ರಗಳನ್ನು ಹೆಣೆಯುತ್ತಾಳೆ. ತನ್ನ ದೈಹಿಕ ಕಾಮನೆಗಳ ಮನಸ್ಥಿತಿಯಿಂದ ಹೊರಬರಲಾರದೆ ಅದರ ತೃಪ್ತಿಯನ್ನು ಪಡೆಯಲು ಹವಣಿಸುತ್ತಾಳೆ. ತನ್ನ ಮೇಲೆ ಅನುಮಾನ ಬರದಂತೆ ಎಚ್ಚರ ವಹಿಸುತ್ತಾಳೆ. ಈ ಸನ್ನಿವೇಶವನ್ನು ಬಳಸಿಕೊಂಡ ಆಕೆಯ ಸ್ನೇಹಿತ ಮತ್ತು ಪತ್ರಕರ್ತನಾಗಿದ್ದ ಸುರೇಶ್ ಹೆಗ್ಗಡೆ ಶೋಧನೆಯನ್ನು ಮಾಡಲು ಮುಂದುವರೆಯುತ್ತಾನೆ. ಅದರ ಭಾಗವಾಗಿ ಪಕ್ಕದ ಮನೆಯವರು ಆಕೆಯು ತುಂಬಾ ಪ್ರಭಾವ ಶಾಲಿಗಳೆಂದು, ಅಲ್ಲಿಗೆ ಬರುವವರು ಪೊಲೀಸರು, ರಾಜಕಾರಣಿಗಳೆಂದು ಆತಂಕದಿಂದ ಹೇಳುತ್ತಾ "ನಿನ್ನೆ ತಾನೆ ಇದಾಯಿತು. ರಾತ್ರಿಯೆಲ್ಲ ಗಲಾಟೆ; ಬೆಳಗ್ಗೆ ನೋಡಿದರೆ ನಮ್ಮ ಕಾಂಪೌಡಿನಲ್ಲಿ ಕಾಂಡಮ್‌ಗಳು, ಒಡೆದ ಬಾಟ್ಲಿಗಳು, ಹರಿದುಬಿದ್ದ ಬ್ರಾಗಳು. ಅವುಗಳನ್ನು ಒಂದು ಕಡೆ ತೆಗೆದಿಟ್ಟಿದ್ದೇನೆ, ತೋರಿಸ್ತೇನೆ ಬನ್ನಿ ..."[೨೭] ಎನ್ನುತ್ತಾಳೆ.

ಈ ವಿಚಾರಗಳ ಬಗ್ಗೆ ಹೆಗ್ಗಡೆಯು ಆ ಕ್ಷಣದಲ್ಲಿ ವಿಶೇಷ ಆಸಕ್ತಿ ತೋರಿಸುವುದಿಲ್ಲ. ಅಂತಿಮವಾಗಿ ಆಕೆಯೆ ಅತೃಪ್ತಿಯ ಕಾಮನೆಗಳ ಬಗ್ಗೆ ಟಿಪ್ಪಣೆ ಮಾಡಿಕೊಳ್ಳುತ್ತಾನೆ. ಇದರ ಮುಂದುವರೆದ ಭಾಗವಾಗಿ ಆಕೆಯನ್ನು ಪ್ರಶ್ನಿಸುತ್ತಾ ಅವುಗಳು ಸುಭದ್ರಳ ವಸ್ತುಗಳೆಂದು ತೀರ್ಮಾನಿಸಿ ಕೇಳುತ್ತಾನೆ.

ಆಕೆ "ಬೆಚ್ಚಿದರೂ ಯಾವ ಭಾವನೆಯನ್ನೂ ತೋರದೆ ಕೂತಳು. ಸುಭದ್ರ ಯಾವುದನ್ನೂ ಪ್ರತಿಭಟಿಸಲಿಲ್ಲ. ನಿರಾಕರಿಸಲಿಲ್ಲ. ಒಂದು ಪ್ರಶ್ನೆಯನ್ನು ಮಾತ್ರ ಕೇಳಿದಳು: ಕಠೋರ ವ್ರತ.... ಅಹಂಕಾರದ ಪರಿಶುದ್ಧತೆ.... ಎನು ಮಾಡುತ್ತೆ ಗೊತ್ತ ಸುರೇಶ್?"

ಹೆಗ್ಗಡೆ ಎದ್ದ. ಸುಭದ್ರಾ ಎದ್ದಳು. ಅವಳಿಂದ ನವಿರಾಗಿ ವ್ಹಿಸ್ಕಿ ವಾಸನೆ ಬರುತ್ತಿದ್ದಂತೆ ಭಾಸವಾಯಿತು. ತಲೆತಗ್ಗಿಸಿ ನಿಂತಿದ್ದ ಸುರೇಶ್‌ನ ಹತ್ತಿರಕ್ಕೆ ಬಂದು ಅವನ ಹೆಗಲ

ಹೊಂದಿರುತ್ತಾಳೆ. ಊರಿನ ಸಂಘರ್ಷದ ಸನ್ನಿವೇಶದಲ್ಲಿ ಆ ಸ್ಕೂಲ್ ಮಾಸ್ಟರ್ ಮಾತನ್ನು ಕೇಳುವುದಿಲ್ಲ. "ಸಂಘರ್ಷವೇ ಬೇರೆ ದೈಹಿಕ ಕಾಮನೆಗಳೇ ಬೇರೆ" ಎಂಬ ನಿಲುವನ್ನು ಚೆಲುವಮ್ಮ ಹೊಂದಿರುತ್ತಾಳೆ. ಅಂತಿಮವಾಗಿ ಅಕ್ಕ ಚೆಲುವಮ್ಮ ದುರಂತಕ್ಕೆ ಒಳಗಾದರೆ ತಂಗಿ ಗಿರಿಜಳು ಆ ಪೋಲಿಕೃಷ್ಣನನ್ನು ಮದುವೆಯಾಗುತ್ತಾಳೆ. "ಕಾಮನೆಗಳಿಗೆ ಸಂಘರ್ಷಗಳು" ಕಾಣುವುದಿಲ್ಲವೆಂಬ ನಿಲುವು ಈ ಕಥೆಯಲ್ಲಿ ಕಂಡುಬರುತ್ತದೆ.

ಹೆಣ್ಣಿನ ಮನಸ್ಥಿತಿಯನ್ನು ಆಧರಿಸಿ ರಚನೆಯಾಗಿರುವ 'ಸುಭದ್ರ' ಕಥೆಯಲ್ಲಿ ವ್ಯಕ್ತಿಯು ಅತೃಪ್ತ ಕಾಮನೆಗಳನ್ನು ಹೊಂದಿದವನಾದರೆ, ಅವನು ಎಷ್ಟು ವರ್ಷಕಳೆದರೂ ಅದರಿಂದ ಹೊರಬರಲಾರನು ಎಂಬುದನ್ನು ನಿರೂಪಿಸುತ್ತದೆ. ಕಥೆಯ ಪ್ರಧಾನ ವ್ಯಕ್ತಿ ಸುಭದ್ರಳು ಮೆಡಿಕಲ್ ವಿದ್ಯಾರ್ಥಿಯಾಗಿರುತ್ತಾಳೆ. ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿ ಅಮೇರಿಕಾದ ವಿವೇಕ್‌ನ ಜೊತೆ ಮದುವೆಯಾಗಿರುತ್ತಾಳೆ. ಇಬ್ಬರು ಮಕ್ಕಳು ಕೂಡ ಇರುತ್ತಾರೆ. ನಿಗೂಢ ಕಾಯಿಲೆಯಿಂದ ಗಂಡನು ಸಾವನ್ನು ಅಪ್ಪುತ್ತಾನೆ. ಇಬ್ಬರು ಮಕ್ಕಳೊಂದಿಗೆ ಭಾರತಕ್ಕೆ ಹಿಂದಿರುಗುತ್ತಾಳೆ. ದೈಹಿಕ ಕಾಮನೆಗಳ ಈಡೇರಿಕೆಗಾಗಿ ಹಲವು ತಂತ್ರಗಳನ್ನು ಹೆಣೆಯುತ್ತಾಳೆ. ತನ್ನ ದೈಹಿಕ ಕಾಮನೆಗಳ ಮನಸ್ಥಿತಿಯಿಂದ ಹೊರಬರಲಾರದೆ ಅದರ ತೃಪ್ತಿಯನ್ನು ಪಡೆಯಲು ಹವಣಿಸುತ್ತಾಳೆ. ತನ್ನ ಮೇಲೆ ಅನುಮಾನ ಬರದಂತೆ ಎಚ್ಚರ ವಹಿಸುತ್ತಾಳೆ. ಈ ಸನ್ನಿವೇಶವನ್ನು ಬಳಸಿಕೊಂಡ ಆಕೆಯ ಸ್ನೇಹಿತ ಮತ್ತು ಪತ್ರಕರ್ತನಾಗಿದ್ದ ಸುರೇಶ್ ಹೆಗ್ಗಡೆ ಶೋಧನೆಯನ್ನು ಮಾಡಲು ಮುಂದುವರೆಯುತ್ತಾನೆ. ಅದರ ಭಾಗವಾಗಿ ಪಕ್ಕದ ಮನೆಯವರು ಆಕೆಯು ತುಂಬಾ ಪ್ರಭಾವ ಶಾಲಿಗಳೆಂದು, ಅಲ್ಲಿಗೆ ಬರುವವರು ಪೊಲೀಸರು, ರಾಜಕಾರಣಿಗಳೆಂದು ಆತಂಕದಿಂದ ಹೇಳುತ್ತಾ "ನಿನ್ನೆ ತಾನೆ ಇದಾಯಿತು. ರಾತ್ರಿಯೆಲ್ಲ ಗಲಾಟೆ; ಬೆಳಗ್ಗೆ ನೋಡಿದರೆ ನಮ್ಮ ಕಾಂಪೌಡಿನಲ್ಲಿ ಕಾಂಡಮ್‌ಗಳು, ಒಡೆದ ಬಾಟ್ಲಿಗಳು, ಹರಿದುಬಿದ್ದ ಬ್ರಾಗಳು. ಅವುಗಳನ್ನು ಒಂದು ಕಡೆ ತೆಗೆದಿಟ್ಟಿದ್ದೇನೆ, ತೋರಿಸ್ತೇನೆ ಬನ್ನಿ ..."[೨೭] ಎನ್ನುತ್ತಾಳೆ.

ಈ ವಿಚಾರಗಳ ಬಗ್ಗೆ ಹೆಗ್ಗಡೆಯು ಆ ಕ್ಷಣದಲ್ಲಿ ವಿಶೇಷ ಆಸಕ್ತಿ ತೋರಿಸುವುದಿಲ್ಲ. ಅಂತಿಮವಾಗಿ ಆಕೆಯೆ ಅತೃಪ್ತಿಯ ಕಾಮನೆಗಳ ಬಗ್ಗೆ ಟಿಪ್ಪಣೆ ಮಾಡಿಕೊಳ್ಳುತ್ತಾನೆ. ಇದರ ಮುಂದುವರೆದ ಭಾಗವಾಗಿ ಆಕೆಯನ್ನು ಪ್ರಶ್ನಿಸುತ್ತಾ ಅವುಗಳು ಸುಭದ್ರಳ ವಸ್ತುಗಳೆಂದು ತೀರ್ಮಾನಿಸಿ ಕೇಳುತ್ತಾನೆ.

ಆಕೆ "ಬೆಚ್ಚಿದರೂ ಯಾವ ಭಾವನೆಯನ್ನೂ ತೋರದೆ ಕೂತಳು. ಸುಭದ್ರ ಯಾವುದನ್ನೂ ಪ್ರತಿಭಟಿಸಲಿಲ್ಲ. ನಿರಾಕರಿಸಲಿಲ್ಲ. ಒಂದು ಪ್ರಶ್ನೆಯನ್ನು ಮಾತ್ರ ಕೇಳಿದಳು: ಕಠೋರ ವ್ರತ.... ಅಹಂಕಾರದ ಪರಿಶುದ್ಧತೆ.... ಏನು ಮಾಡುತ್ತೆ ಗೊತ್ತ ಸುರೇಶ್?"

ಹೆಗ್ಗಡೆ ಎದ್ದ. ಸುಭದ್ರಾ ಎದ್ದಳು. ಅವಳಿಂದ ನವಿರಾಗಿ ವ್ಹಿಸ್ಕಿ ವಾಸನೆ ಬರುತ್ತಿದ್ದಂತೆ ಭಾಸವಾಯಿತು. ತಲೆತಗ್ಗಿಸಿ ನಿಂತಿದ್ದ ಸುರೇಶ್‌ನ ಹತ್ತಿರಕ್ಕೆ ಬಂದು ಅವನ ಹೆಗಲ

ಮೇಲೆ ಕೈ ಇಟ್ಟು ಬಿಕ್ಕಿದಳು; ..... ಇದೆಲ್ಲ ಹಟದಿಂದ ಏನಾದರೂ ಸುಖ ಇದೆಯೇ?"[೨೮] ಎನ್ನುತ್ತಾಳೆ. ಅವನ ಹತ್ತಿರವಾಗುತ್ತಾಳೆ. ಸುಭದ್ರಳು ಒಂದು ಪಾತ್ರವಷ್ಟೆ. ಆಕೆಯ ಮನಸ್ಥಿತಿಗಳು ಸಹಜವಾದ ಅತೃಪ್ತಿಯ ಕಾಮನೆಯ ಹೆಣ್ಣಿನ ಮನಸ್ಥಿತಿಗಳಾಗಿವೆ. "ಆಕೆ ಶ್ರೀಮಂತೆಯಾದರು ದೈಹಿಕ ಕಾಮನೆಗಳನ್ನು ಪೂರೈಸಿಕೊಳ್ಳಲು ಅತೃಪ್ತಿ ಬೇಗೆಯ ಹೆಣ್ಣಾಗಿದ್ದಾಳೆ." ಎಂಬ ಸ್ಪಷ್ಟ ಸಂದೇಶ ಈ ಕಥೆಯಲ್ಲಿ ಅಡಕವಾಗಿದೆ.

ಲಂಕೇಶರ ಮತ್ತೊಂದು ಕಥೆ 'ದಾಳಿ'. ಮಲ್ಲಿಯಂತಹ ಹೆಣ್ಣಿನ ಮನಸ್ಸಿನ ಮೇಲೆ ನಡೆಯುವ ಇಷ್ಟ ಪಟ್ಟ ದಾಳಿ. ಆಕೆಯೇ ಬಯಸಿ ಹತ್ತಿರ ಎಳೆದುಕೊಂಡ ದಾಳಿ. ಕಥೆಯ ಶೀರ್ಷಿಕೆಯು ವ್ಯಕ್ತಿ ಸಂಪತ್ತಿನ ಮೇಲೆ ನಡೆಸುವ ದಾಳಿಗಿಂತ, ವ್ಯಕ್ತಿಯೇ ತನ್ನ ಮೇಲೆ ದಾಳಿ ನಡೆಯಲಿ ಎಂದು ಆಶಿಸುವ ಸನ್ನಿವೇಶವನ್ನು ಈ ಕಥೆಯಲ್ಲಿ ಕಾಣಬಹುದು. ಮಲ್ಲಿಯು ಗಿಣಿಕೆರೆಯ ಹಳ್ಳಿಯವಳು. ಆ ಹಳ್ಳಿಯ ಮೇಲೆ ರಜಾಕರು ದಾಳಿ ನಡೆಸಿ ಸಂಪತ್ತನ್ನು ದೋಚುತ್ತಿದ್ದರು. ಹೆಣ್ಣಿನ ಮೇಲೆ ಅತ್ಯಾಚಾರ ನಡೆಸುತ್ತಿದ್ದರು. ಕೆಲವೊಂದು ಇಷ್ಟ ಪಟ್ಟು ನಡೆಯುತ್ತಿದ್ದವು. ಇನ್ನು ಕೆಲವು ಬಲವಂತವಾಗಿ ನಡೆಯುತ್ತಿದ್ದವು ಎಂಬ ವಿಚಾರವನ್ನು ದಾಳಿ ಕಥೆಯಲ್ಲಿ ನೋಡಬಹುದು.

ಮಲ್ಲಿ ತನ್ನ ಮೇಲಿನ ದಾಳಿ ಅನಿವಾರ್ಯತೆಯನ್ನು ಬಯಸುತ್ತಿದ್ದವಳು. "ಮಲ್ಲಿಗೆ ಜನರ ಮುಖಗಳೆಲ್ಲ ಸುಟ್ಟುಹೋಗುತ್ತಿರುವಂತೆ ಕಾಣುತ್ತಿದೆ. ಒಂದು ದಿನ ಸಂಗಣ್ಣಗೌಡರ ಮಗ ಬಸವ ದಾರಿಯಲ್ಲಿ ಸಿಕ್ಕ. ಸಿಹಿನೀರಿಗೆಂದು ಮಲ್ಲಿ ಊರ ಹೊರಗಿನ ಬಾವಿಗೆ ಹೋಗುತ್ತಿದ್ದಳು. ಎಂದಿನಂತೆ ಆತ ಮುಗುಳ್ನಗಲಿಲ್ಲ. ಮಾತಾಡಿಸಲಿಲ್ಲ. ಮಲ್ಲಿಯ ಹಿಂದೆಯೇ ಬರತೊಡಗಿದ. ಅವನನ್ನು ನೋಡಿ ಎಂದೂ ಹೆದರದ ಮಲ್ಲಿ ದಿಗಿಲುಗೊಂಡು ಹೆಜ್ಜೆ ಚುರುಕುಗೊಳಿಸಿದಳು. ಅವನೂ ಚುರುಕುಗೊಳಿಸಿದ. ಅವನ ಕಣ್ಣುಗಳು ತನ್ನ ಸುಂದರ ಹಿಂಭಾಗ, ನಡು, ತೋಳು, ಕೆನ್ನೆಯನ್ನೆಲ್ಲ ರಾಚುತ್ತಿರುವಂತೆ ಆಕೆಗೆ ಅನ್ನಿಸಿತು. ಅವನನ್ನು ಎದುರಿಸುವುದೇ ವಾಸಿ ಎಂದು ನಿಂತು ತಿರುಗಿದಳು. ಬಸವ ನಿಂತ. "ಏನೋ ಬಸವಣ್ಣ? ಹ್ಯಂಗಿದ್ದಿ?" ಅಂದಳು "ನಾನು ಸತ್ತೋಗ್ತೀನಿ ಮಲ್ಲಿ, ನಾನು ಸತ್ತೋಗ್ತೀನಿ!" ಅಂದ. "ಎಲ್ಲರೂ ಸಾಯದಹಂಗೆ ನೋಡಿಕೋಬೇಕಾದ ಸರದಾರ ಹಿಂಗನ್ನಬಹುದಾ? ಅಂದಳು. ಬಸವ ಆ ಮಾತಿಗೆ ಗೊಂದಲಗೊಂಡ. ಅವನನ್ನು ಮಲ್ಲಿ ಸೂಕ್ಷ್ಮವಾಗಿ ಗಮನಿಸಿದಳು. ಕಣ್ಣು ಕದಡಿದ್ದವು: ಕಾಲು ತೂಗಾಡುತ್ತಿದ್ದವು, ಅವನು ಕುಡಿದಿದ್ದ. ತನ್ನ ಮೂತಿಯನ್ನು ಅವಳ ಹತ್ತಿರ ತಂದ; "ನನ್ನಿಂದ ಕಾಯಾಕಾಗಲ್ಲ– ಆ ಕಳ್ಳರಿಗಾಗಿ ಇನ್ನು ಕಾಯಾಕಾಗಲ್ಲ!" ಅಂದು ಅವಳ ಕುತ್ತಿಗೆಗೆ ಕೈ ಹಾಕಲು ಹೋದ. ಮಲ್ಲಿ ಗಂಭೀರವಾಗಿ ದೂರ ಸರಿದಳು. ಅವನು ಏನು ನೆನೆದನೋ–ಕಾಲಮೇಲೆ ತಿರುಗಿ ಊರಿನ ಕಡೆ ನಡೆಯತೊಡಗಿದ.

ಅವನು ಹೋದಮೇಲೆ ಮಲ್ಲಿಗೆ ಅಸಹ್ಯದ ಜೊತೆಗೆ ಭಯವಾಯಿತು. ಈ ಭಯದಲ್ಲಿ ಈಗ ಇನ್ನೊಂದು ಅಂಶ ಬೆರೆತಿತ್ತು. ಬಸವನ ಬಗ್ಗೆ ಅನುಕಂಪ ಮತ್ತು ಪ್ರೀತಿ ಅಂಕುರಿಸಿದವು.

ಅವನು ಇನ್ನೊಂದು ಕ್ಷಣ ಇದ್ದಿದ್ದರೆ ತಾನೇ ಅಪ್ಪಿಕೊಂಡು ಜೋಳದ ಹೊಲಕ್ಕೆ ಎಳೆದೊಯ್ಯುತ್ತಿದ್ದೆ ಅನ್ನಿಸಿತು."[೨೫]

ಮಲ್ಲಿಯು ದೈಹಿಕ ಕಾಮನೆಯ ಈಡೇರಿಕೆ ಆಗದೆ ಅತೃಪ್ತಿಯನ್ನು ಅನುಭವಿಸುವ ಹೆಣ್ಣಾಗಿ ಕಾಣುತ್ತಾಳೆ. ಅಂತಿಮವಾಗಿ ಅದೇ ಮಲ್ಲಿ ರಜಾಕರು ದಾಳಿ ಇಟ್ಟಾಗ ಸಲೀಂ ಎಂಬ ಹುಡುಗ ಮಲ್ಲಿಯ ಮನೆ ಮೇಲೆ ದಾಳಿ ಮಾಡುತ್ತಾನೆ. ಅವನ ದೇಹದಲ್ಲಿ ರಕ್ತ ಸುರಿಯುತ್ತಿರುತ್ತದೆ. ಆಕೆಯ ಪಾದವನ್ನು ಹಿಡಿಯುತ್ತಾನೆ. ಅವಳಲ್ಲಿರುವ ಭಯ ಹೋಗುತ್ತದೆ. ಅವನ ಜೊತೆ ಕುಳಿತುಕೊಳ್ಳುತ್ತಾಳೆ. ಅವನ ಮುಖವನ್ನು ತನ್ನ ಎದೆಗವಚಿಕೊಳ್ಳುತ್ತಾಳೆ. ಕಾಮ ಉಕ್ಕಿ ಹರಿಯುತ್ತದೆ. ಆತಂಕ ಭಯದಿಂದ ದೂರವಾಗುತ್ತಾಳೆ. ಆತನ ದೈಹಿಕ ಸುಖದಿಂದ ಸಂತೋಷಗೊಳ್ಳುತ್ತಾಳೆ. ಕಾಮದ ಉತ್ಕಟತೆಯ ತೃಪ್ತಿಯನ್ನು ಸಲೀಂನಿಂದ ಪಡೆಯುತ್ತಾಳೆ. "ತನ್ನ ಮನೆಯ ಮೇಲೆ ದಾಳಿ ಮಾಡಲು ಬಂದ ರಜಾಕನಾದ ಸಲೀಂಗೆ ತನ್ನ ದೇಹದ ಬಾಗಿಲನ್ನು ತೆಗೆದು ಕಾಮದ ಸಂಪತ್ತನ್ನು ನೀಡುತ್ತಾಳೆ. ಆ ದಾಳಿಯಿಂದ ಮಲ್ಲಿ ಸಂತೃಪ್ತಗೊಳ್ಳುತ್ತಾಳೆ." ಮಲ್ಲಿಯು ಊರಿನ ಬಸವನಿಗಿಂತ ದಾಳಿಕೋರ ಸಲೀಂನಲ್ಲೆ ದೈಹಿಕ ತೃಪ್ತಿಯನ್ನು ಪಡೆಯುತ್ತಾಳೆ.

'ರುದ್ರಾಣಿ ಸುಪ್ತ ಕತೆ'ಯಲ್ಲಿ ಬರುವ ಹೆಣ್ಣಿನ ಪ್ರಮುಖ ಪಾತ್ರ. ರುದ್ರಾಣಿಯು ಉಪನ್ಯಾಸಕಿಯಾಗಿರುತ್ತಾಳೆ. ಇವಳ ಕುಟುಂಬ ದುರಂತವಾಗಿ ಕಾಣುತ್ತದೆ. ಕತೆ ಮುಂದುವರೆದಂತೆ ಸಮಾಜ ಹೊರಗಡೆ ಬಲಿಷ್ಠವಾಗಿ ಹೋರಾಡಿದರೂ ಆಂತರಿಕವಾಗಿ ಕಾಮದ ಬಯಕೆಯ ಸುಳಿಯಿಂದ ಹೊರಬರದ ಹೆಣ್ಣಾಗಿರುವುದನ್ನು ಈ ಕಥೆಯಲ್ಲಿ ನೋಡಬಹುದು. ಕಾಲೇಜಿನ ಹೆಣ್ಣುಮಕ್ಕಳಿಗೆ ನ್ಯಾಯ ಕೊಡಿಸುವ ವಿಚಾರದಲ್ಲಿ ಹೋರಾಟಗಾರ್ತಿಯಂತೆ ಕಾಣುತ್ತಾಳೆ. ಆದರೆ ಮನೆಗೆ ಬಂದ ಪುರುಷನ ಜೊತೆ ತನ್ನ ಕಾಮನೆಗಳನ್ನು ಈಡೇರಿಸಿಕೊಳ್ಳುತ್ತಾಳೆ. ಲಂಕೇಶರು ಹೆಣ್ಣಿನ ಒಳತೋಟಿ ಮನಸ್ಸಿನ ವಿಚಾರವನ್ನು ರುದ್ರಾಣಿಯ ಪಾತ್ರದ ಮೂಲಕ ಅನಾವರಣಗೊಳಿಸಿದ್ದಾರೆ.

ಹೆಣ್ಣು ತನ್ನ ಬದುಕಿನಲ್ಲಿ ಬಂದ ವ್ಯಕ್ತಿಯನ್ನು ಸುಲಭವಾಗಿ ಬಿಟ್ಟುಕೊಡುವುದಿಲ್ಲ. ಅದಕ್ಕಾಗಿ ಎಂಥ ಸನ್ನಿವೇಶಗಳನ್ನು ಎದುರಿಸಲು ಸಿದ್ಧಳಾಗಿರುತ್ತಾಳೆ ಎಂಬ ವಿಚಾರವನ್ನು ಲಂಕೇಶರ A sucide Note ('ಎ ಸೂಸೈಡ್ ನೋಟ್')ನಲ್ಲಿ ಕಾಣಬಹುದು. ಸಾಧಾರಣ ಕುಟುಂಬದಿಂದ ಬಂದ ಮೀನಾಕ್ಷಿಯ ಸುತ್ತ ನಿರೂಪಿಸಲ್ಪಟ್ಟ ಕಥೆಯಾಗಿದೆ. ಕಾಲೇಜಿನ ದಿನಗಳಲ್ಲಿ ಹದಿನೆಂಟರ ಪ್ರಾಯದ ಹುಡುಗಿಯಾದ ಮೀನಾಕ್ಷಿಯ ಹರೆಯ ಪಶುವಿನಿಂದ ಕೂಡಿತ್ತು ಎಂದು ಭಾವಿಸುತ್ತಾಳೆ. ಈ ಸಂದರ್ಭದಲ್ಲಿ ಚೀನಿ ಹುಡುಗನಲ್ಲಿ ಆಕರ್ಷಿತಳಾದರೂ ಅವನಿಂದ ದೈಹಿಕ ಸುಖವನ್ನು ಬಯಸುವುದಿಲ್ಲ. ಆದರೆ ಆಕೆಯ ಸ್ನೇಹಿತೆ ರೋಹಿಣಿಯ ಅಣ್ಣನಾದ ಜಗ್ಗುವಿನ ಪ್ರೀತಿಯನ್ನು ಪಡೆಯುವ ವೇಳೆಗಾಗಲೆ ಕಾಲೇಜಿನಲ್ಲಿ ಪ್ರೊಫೆಸರ್ ಆಗಿರುವ ವಿಶ್ವನಾಥನ ಜೊತೆ ಮದುವೆಯಾಗಿರುತ್ತದೆ. ಗಂಡನ ಜೊತೆ ಚೆನ್ನಾಗಿ ಸಂಸಾರ

ನಡೆಸಿದರೂ ಜಗ್ಗುವಿನ ಆಕಸ್ಮಿಕ ಭೇಟಿಯಿಂದ ದೈಹಿಕ ಸಮಾಗಮವಾಗುತ್ತದೆ. ಅದು ನಿರಂತರವಾಗುತ್ತದೆ. ಮೀನಾಕ್ಷಿ ಅದರಿಂದ ಹೊರಬರಲಾಗು ವುದಿಲ್ಲ. ಜೊತೆಗೆ ಪಾಪ ಪ್ರಜ್ಞೆ ಕಾಡತೊಡಗಿ ಒಂದು ದಿನ ಸಾಯುತ್ತಾಳೆ. ಈ ಕಥೆಯ ಹಂದರಲ್ಲಿ ಸಮಾಜವು ಒಪ್ಪಿತವಾದ "ವಿವಾಹ ಬಂಧನ" ದ ನಂತರ ಮತ್ತೋರ್ವ ಪರಪುರುಷನ್ನು ಬಯಸುವುದು ಸೂಕ್ತವಾಗಿರಲಾರದು. ಮೀನಾಕ್ಷಿ ಅದನ್ನು ಮೀರಿ ದೈಹಿಕ ಸುಖವನ್ನು ಅನುಭವಿಸಿದರೂ ಕೊನೆಗೆ ಆ ಪಾಪಪ್ರಜ್ಞೆಯಲ್ಲಿಯೆ ಮುಳುಗಿ ಸಾಯುವುದನ್ನು ಕಾಣಬಹುದು.

ಲಂಕೇಶರ 'ಕೃತಜ್ಞತೆ' ಕಥೆಯಲ್ಲಿ ಬರುವ ನಿರ್ಮಲಳನ್ನು ಗಂಡ ಬಿಟ್ಟಿರುತ್ತಾನೆ. ಗಂಡನಿಂದ ದೂರವಾದ ನಂತರ ಅಂಗಡಿಯಲ್ಲಿ ಪುಸ್ತಕವನ್ನು ಮಾರಾಟ ಮಾಡಿಕೊಂಡು ಜೀವನ ನಡೆಸುತ್ತಾಳೆ. ಬದುಕಿಗಾಗಿ ಹೋರಾಟ ನಡೆಸುತ್ತಾಳೆ. ಆಕೆಯೇ ಯೋಚಿಸುವಂತೆ "ತನ್ನ ಬದುಕು ಏನನ್ನೋ ಕಳೆದುಕೊಂಡಂತೆ ಅನ್ನಿಸುತ್ತಿತ್ತು. ಅದು ವೇಗ ಕಳೆದುಕೊಂಡಿತ್ತೆ, ಸ್ಪರ್ಧೆಯ ಹುಮ್ಮಸ್ಸು ಕಳೆದುಕೊಂಡಿತ್ತೆ ಅಥವಾ ಲೈಂಗಿಕ ಜಗತ್ತಿನ ವಿಸ್ತಾರ ಗೊತ್ತಿಲ್ಲದೆ ಈ ಬದುಕು ಎಡವಿತ್ತೆ; ಅಲ್ಲ, ದಿನದ ಇಪ್ಪತ್ತನಾಲ್ಕು ಗಂಟೆಗಳಲ್ಲಿ ಹಲವು ಗಂಟೆಗಳೇ ಈ ಪ್ರೇಮ, ಸ್ಪರ್ಶ, ನೈತಿಕತೆ ಪುರಾಣ, ಆಸೆಗಳ ದಮನ, ಸಭ್ಯ ಬದುಕು, ಸಂಭೋಗದ ಸಮ್ಮಿಶ್ರ ಚಿಂತೆಯಲ್ಲಿ ಕಳೆಯುವಾಗ ಅದು ಹೇಗೆ ಮನುಷ್ಯ ಈ ಲೈಂಗಿಕತೆಯನ್ನು ಪೂರ್ತಿ ಅರಿಯದೆ ಎಡುವುತ್ತಾನೆ, ಗೋಪ್ಯದಲ್ಲಿ ಕಂಪಿಸುತ್ತಾನೆ?"[೩೦] ಎಂದು ಯೋಚಿಸುವ ನಿರ್ಮಲ "ಜೀವನ ಕೈಗೆ ಸಿಕ್ಕದೆ ಜಾರಿಹೋಗುತ್ತಿರುವಾಗ" ದುಃಖಿತಳಾಗುತ್ತಾಳೆ. ಸಮಾಜದ ಬಂಧಿಯ ಗೆರೆಯಲ್ಲಿ ಹೆಣ್ಣೊಬ್ಬಳು ನಲುಗುವ ಸ್ಥಿತಿಯನ್ನು ಲಂಕೇಶರು ಕಥೆಯಲ್ಲಿ ಕಟ್ಟಿದ್ದಾರೆ.

ಸೆಪ್ಟೆಂಬರ್ ಪ್ರಥಮ ರಾತ್ರಿಯ 'ಶಾಂತಳು', ರುದ್ರಾಣಿ ಸುತ್ತಾ ಕತೆಯ 'ರುದ್ರಾಣಿ', ದಾಹ ಕಥೆಯ 'ಪದ್ಮಾ' ಉರಿದ ಊರಿನವರು ಕಥೆಯ 'ಚೆಲುವಮ್ಮ' ಮತ್ತು 'ಗಿರಿಜ', ಸುಭದ್ರ ಕಥೆಯ 'ಸುಭದ್ರ', ದಾಳಿ ಕಥೆಯ 'ಮಲ್ಲಿ', ಗುತ್ತಿ ಗೀತಾ ಆದದ್ದು ಕತೆಯ 'ಗೀತಾ', ಎ ಸೂಸೈಡ್ ನೋಟ್ ಕಥೆಯ 'ಮೀನಾಕ್ಷಿ' ಇವೆಲ್ಲಾ ಪಾತ್ರಧಾರಿಗಳು ತಮ್ಮ ದೈಹಿಕ ಅವಶ್ಯಕತೆಯನ್ನು ಅನಿವಾರ್ಯವೆಂಬಂತೆ ಭಾವಿಸುತ್ತಾರೆ. ಬಳಸಿಕೊಳ್ಳುತ್ತಾರೆ. ಆ ಕ್ಷಣ ತೃಪ್ತಿಯನ್ನು ಹೊಂದುತ್ತಾರೆ. ಆದರೆ ಇವೆಲ್ಲಾ ಕಥೆಗಿಂತ 'ಕೃತಜ್ಞತೆ' ವಿಭಿನ್ನವಾಗಿ ನಿಲ್ಲುತ್ತದೆ.

ಅನಂತಮೂರ್ತಿಯವರ ಕಥೆಗಳಲ್ಲೂ ಸಹ ಸಹಜವಾಗಿಯೇ ಮನುಷ್ಯನಲ್ಲಿ ಸುಪ್ತವಾಗಿ ಅಡಕವಾಗಿರುವ ಪ್ರೇಮ-ಕಾಮಗಳ ಮನಸ್ಸಿನ ಸ್ಥಿತಿಗಳಿಗೆ ಯಾವುದೇ ಧರ್ಮ, ಜಾತಿಗಳು ಅಡ್ಡಬರುವುದಿಲ್ಲ. ಹೆಣ್ಣು-ಗಂಡು, ಹಳ್ಳಿ-ನಗರ ಎಂಬ ಬೇಧಭಾವವಿಲ್ಲ. ಎಂಬ ವಿಚಾರಗಳನ್ನು ತಮ್ಮದೇ ಆದ ಶೈಲಿಯಲ್ಲಿ ಕಥೆಯಲ್ಲಿ ನಿರೂಪಿಸಿದ್ದಾರೆ.

ವ್ಯಕ್ತಿಯು ಜಾತಿ-ಧರ್ಮದ ಚೌಕಟ್ಟಿನಲ್ಲಿ ತನ್ನದೇ ಆದ ಕಟ್ಟುಪಾಡನ್ನು, ನಿರ್ಬಂಧಗಳನ್ನು ಹೇರಿಕೊಂಡಿರುತ್ತಾನೆ. ಪ್ರಕೃತಿ ಸಹಜವಾದ ದೈಹಿಕ ಹಸಿವಿಗೆ ಸಂಬಂಧಿಸಿದ ಸಂದರ್ಭದಲ್ಲಿ ನಿರ್ಬಂಧಗಳೆಲ್ಲವನ್ನು ಮೀರಿ ನಿಲ್ಲುತ್ತಾನೆ ಎಂಬುದಕ್ಕೆ ಉದಾಹರಣೆಯಾಗಿ 'ಪ್ರಕೃತಿ' ಕಥೆಯ ಲಕ್ಷ್ಮಿ ಕಾಣುತ್ತಾಳೆ.

ಲಕ್ಷ್ಮಿಯು ಚಿಕ್ಕವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡು ತವರು ಮನೆ ಸೇರಿರುತ್ತಾಳೆ. ಕೌಟುಂಬಿಕ ಚೌಕಟ್ಟಿನಲ್ಲಿ ಯೋಚಿಸುವ ಲಕ್ಷ್ಮಿಯ ತಂದೆ ಸಂಕಪ್ಪಯ್ಯ "ಗಂಡ ಸತ್ತರೇನು ನಿನಗೆ ಯಾವುದಕ್ಕೂ ಕೊರತೆಯಿಲ್ಲ ಎನ್ನುವಂತೆ ನೋಡಿಕೊಳ್ಳುವ ನನ್ನಂತಹ ತಂದೆಯಿಲ್ಲವೆ?"[೨೧] ಎಂದು ಹೇಳುತ್ತಾನೆ. ಆದರೂ ಅವಳ ಹಾಳಾದ ಬದುಕಿನಲ್ಲಿ ಏನೋ ಕೊರತೆಯಿದೆಯೆಂದು ತಿಳಿಯುತ್ತಾನೆ. ವಿಧವೆಯಾಗಿರುವ ಲಕ್ಷ್ಮಿಗೆ ಸಹಜವಾಗಿ ತಂದೆ ಆಸರೆಯಾಗಿ ನಿಲ್ಲುತ್ತಾನೆ. ಆದರೆ ಕಥೆಗಾರನು ಪ್ರಕೃತಿದತ್ತವಾದ ವಿಚಾರಗಳಲ್ಲಿ ತಂದೆಯಾದ ಸಂಕಪ್ಪಯ್ಯನು ಮಗಳ ಅವಶ್ಯಕತೆಯನ್ನು ಪೂರೈಸಲು ಸಾಧ್ಯವಾಗುವುದಿಲ್ಲ ಎಂಬುದನ್ನು ಲಕ್ಷ್ಮಿ ಪಾತ್ರದ ಮೂಲಕ ತಿಳಿಸುತ್ತಾನೆ.

ತವರೂರಿನ ಕೌಟುಂಬಿಕ ಸಮಸ್ಯೆಗಳನ್ನು ಮೀರಿ ಪ್ರಕೃತಿದತ್ತವಾದ ತನ್ನ ಕಾಮನೆಗಳನ್ನು ತೀರಿಸಿಕೊಳ್ಳಲು " ಲಕ್ಷ್ಮಿ ಶಾನುಭೋಗನ ಮಗ ಕಿಟ್ಟನನ್ನು ತಬ್ಬಿಕೊಂಡು ಹಾಯಾಗಿ ನೆರಳಲ್ಲಿ ಮಲಗುವ"[೨೨] ಮೂಲಕ ಪೂರೈಸಿಕೊಳ್ಳುತ್ತಾಳೆ. ಇಲ್ಲಿ ಕಥೆಗಾರನು ಪ್ರಕೃತಿದತ್ತವಾದ ಅನಿವಾರ್ಯತೆಯನ್ನು ಕಥೆಯ ಚೌಕಟ್ಟಿನಲ್ಲಿ ತರುತ್ತಾನೆ. ಹಾಗೆಯೇ ತಂದೆಯಾದ ಸಂಕಪ್ಪಯ್ಯನು "ದಾರಿ ತಪ್ಪಿದೆನೆ?" ಎಂದು ಯೋಚಿಸುವ ಅನಿವಾರ್ಯತೆಯನ್ನು ಹೇಳುತ್ತಾನೆ.

ಲಕ್ಷ್ಮಿಯ ರೀತಿಯಲ್ಲಿ ಘಟಶ್ರಾದ್ಧ ಕಥೆಯಲ್ಲಿ ಬರುವ ಯಮುನಾಳು ಅದರ ಮುಂದುವರೆದ ಭಾಗದಂತೆ ಕಾಣುತ್ತಾಳೆ. ಲಕ್ಷ್ಮಿ ಕಿಟ್ಟುವಿನ ಜೊತೆ ಮಲಗಿರುತ್ತಾಳೆ. ಆದರೆ ಯಮುನಾಳು ಶಾಲೆಯ ಮೇಸ್ಟ್ರು ಸಂಬಂಧದಿಂದ ಬೇಡವಾದ ಗರ್ಭವನ್ನು ಧರಿಸಿ ಸಮಾಜಕ್ಕೆ ಹೆದರುತ್ತಾಳೆ.

'ಘಟಶ್ರಾದ್ಧ' ಕಥೆ ರಚನೆಯಾಗಿರುವುದು ಅರವತ್ತೆರಡರ ದಶಕದಲ್ಲಿ. ಅಂದು ಆಧುನಿಕತೆಯ ಮುಕ್ತ ಲೈಂಗಿಕತೆಗೆ ರಕ್ಷಣಾತ್ಮಕವಾದ ಕ್ರಿಯೆಗಳ ಬಗ್ಗೆ ಹೊರಜಗತ್ತಿನ ಪರಿಕಲ್ಪನೆಯಿಲ್ಲದಂತೆ ಬೆಳೆದ ಯಮುನಾಳಿಗೆ ತಿಳಿದಿರಲಿಲ್ಲ. ಪ್ರಕೃತಿ ಸಹಜವಾದ ದೇಹದ ಹಸಿವನ್ನು ಈಡೇರಿಸಿಕೊಂಡ ಯಮುನಾ ಸಂಪ್ರದಾಯವೆನ್ನುವ ಬ್ರಾಹ್ಮಣ ಸಮಾಜದಲ್ಲಿ ಪ್ರತಿನಾಯಕಿಯಾಗಿ ಕಾಣುತ್ತಾಳೆ.

ಚಿಕ್ಕವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡು ವೈಧವ್ಯ ಪ್ರಾಪ್ತಿಯಾಗಿರುವ ಯಮುನಾಳ ಪರವಾಗಿ ನಿಲ್ಲುವುದಿಲ್ಲ. ಹಾಗೆಯೇ ಶಾಲೆಯ ಮೇಷ್ಟ್ರು ಕೂಡ ಯಮುನಾ ವಿಷಯದಲ್ಲಿ ಪಾಲುದಾರನಾಗಿರುವ ವ್ಯಕ್ತಿಯಾಗಿದ್ದರೂ ಅವನು ಪುರುಷ ಸಮಾಜದಲ್ಲಿ

ತಿರಸ್ಕಾರಕ್ಕೆ ಒಳಗಾಗುವುದಿಲ್ಲ. ಆದರೂ ಹೆಣ್ಣು ಯಾವಾಗಲೂ ಕೂಡ ದ್ವಿತೀಯ ದರ್ಜೆ ಪ್ರಜೆಯಾಗಿ ನಿಲ್ಲುತ್ತಾಳೆಂಬುದು ಕಥೆಯುದ್ದಕ್ಕೂ ಕಾಣುತ್ತದೆ. ಅವಳನ್ನು ಆಕೆಯ ಊರಿನ ಜನ ತಿರಸ್ಕಾರವಾಗಿ ನೋಡುತ್ತಾರೆ. ಹೆಣ್ಣು ಪ್ರಕೃತಿ ನಿಯಮಕ್ಕೆ ಬದ್ಧಳಾದಾಗ ಸಮಾಜದ ಕಟ್ಟುಪಾಡುಗಳಿಗೆ ಬಲಿಯಾಗುವುದನ್ನು ಯಮುನಾ ವಿಷಯದಲ್ಲಿ ಕಾಣುತ್ತೇವೆ. ಗರ್ಭದಿಂದ ಆಗುವ ಅನಾಹುತದಿಂದ ತತ್ತರಿಸಿದ ಯಮುನಾ ಹುತ್ತಕ್ಕೆ ಕೈ ಹಾಕಿ ಹಾವಿನಿಂದ ಸಾಯಲು ಮುಂದಾಗುತ್ತಾಳೆ.[೩೩] ಚಿಕ್ಕವಯಸ್ಸಿನವನಾದರೂ ನಾಣಿ ಯಮುನಾಳ ಪರವಾಗಿ ನಿಲ್ಲುತ್ತಾನೆ. ಆದರೆ ಆತನ ತಾಯಿ ಯಮುನಾಳ ಬಗ್ಗೆ "ಹಾಳು ಮುಂಡೆ ಯಾಕೆ ಬಸುರಿಯಾಗ ಬೇಕಿತ್ತು"[೩೪] ಎಂದು ಹೇಳುತ್ತಾಳೆ. ಹಾಗೆಯೇ 'ನೀತಿಗೆಟ್ಟವಳೆಂದು' ನಾಣಿಯ ಅಪ್ಪ ಅಮ್ಮರಿಬ್ಬರು ಬೈಯುತ್ತಾರೆ. ಘಟಶ್ರಾದ್ಧದ ಯಮುನಾಳು ಪ್ರತಿಹಂತದಲ್ಲೂ ಸುತ್ತಮುತ್ತಲಿನ ಸಮಾಜದ ವ್ಯತಿರಿಕ್ತ ಪರಿಣಾಮವನ್ನು ಎದುರಿಸುವ ಸನ್ನಿವೇಶದಲ್ಲಿ ಸೋಲುತ್ತಾಳೆ.

" 'ಘಟಶ್ರಾದ್ಧ'ದ ನಿಜವಾದ ವಸ್ತು ನೈಸರ್ಗಿಕವಾದ ಆದರೆ ಸಮಾಜದ ದೃಷ್ಟಿಯಲ್ಲಿ ಪಾಪವೆನಿಸಿಕೊಂಡ ಕ್ರಿಯೆಯ ಪರಿಣಾಮವಾಗಿ ಯಮುನಾ ಅನುಭವಿಸುವ ಭಯ' ನೋವು ಹಾಗೂ ಏಕಾಂಗಿತನಗಳಲ್ಲಿ ಹುಟ್ಟಿಕೊಳ್ಳುತ್ತದೆ. ಈ ವಸ್ತುವಿಗೆ ವೈಯಕ್ತಿಕ ಮುಖವಿದ್ದಂತೆ ಸಾಮಾಜಿಕ ಮುಖವೂ ಇದೆ. ಪಾಪದ ಭಾವನೆಗಿಂತ ಈ ಭಾವನೆಗಳೇ ಅವಳ ಅನುಭವದಲ್ಲಿ ಪ್ರಮುಖ ಸ್ಥಾನ ಪಡೆಯುತ್ತವೆ. ಅವಳ ಆತ್ಮಹತ್ಯೆಯ ಪ್ರಯತ್ನಗಳ ಹಿಂದಿನ ಪ್ರಚೋದನೆಗಳು ಕೂಡ ಇವೇ."[೩೫]

ಯಮುನಾಳ ತಂದೆ ಉಡುಪ ಮುದುಕನಾದರೂ ಯಮನಾಳ ವಿಷಯದಲ್ಲಿ ಆಕೆ ಬದುಕಿದ್ದರೂ ಶ್ರಾದ್ಧ ಮಾಡಿ ಜಾತಿಯಿಂದ ಹೊರಹಾಕುತ್ತಾನೆ. ಆದರೆ ತನಗೆ ಬೇಯಿಸಿ ಹಾಕಲು ಒಂದು ಹೆಣ್ಣು ಬೇಕೆಂಬ ಕಾರಣಕ್ಕೆ ಒಂದು ಪುಟ್ಟ ಹುಡುಗಿಯನ್ನು ಮದುವೆ ಯಾಗುತ್ತಾನೆ. ಚಿಕ್ಕ ಹುಡುಗನಾದ ನಾಣಿ ಗುರುವಿನ ಬಗ್ಗೆ 'ಥತ್' ಎಂದು ಹೇಳುವ ಮೂಲಕ ಉಡುಪರ ವಿವಾಹದ ಬಗ್ಗೆ ತಿರಸ್ಕಾರದ ಮಾತನ್ನು ಹೇಳುತ್ತಾನೆ. ನಾಣಿಯ ತಾಯಿ ಉಡುಪರ ವಿಷಯವನ್ನು ಸಮರ್ಥಿಸಿಕೊಳ್ಳುತ್ತಾಳೆ.

ಪ್ರಕೃತಿ ಸಹಜವಾದ ದೇಹ ಸಂಬಂಧದಲ್ಲಿ ಪ್ರಕೃತಿ ಕಥೆಯ ಲಕ್ಷ್ಮಿ ಸಮಾಜದ ದೃಷ್ಟಿಯಲ್ಲಿ ಯಮುನಾಳಷ್ಟು ವ್ಯತಿರಿಕ್ತ ಪರಿಣಾಮ ಎದುರಿಸುವುದಿಲ್ಲ. ಮಗಳ ಮತ್ತು ಕಿಟ್ಟುವಿನ ಸಂಬಂಧ ಸಂಕಪ್ಪಯ್ಯನಿಗೆ ಮಾತ್ರ ತಿಳಿಯುತ್ತದೆ. 'ಪ್ರಕೃತಿ' ಕಥೆಯು ರಾದ್ಧಾಂತಕ್ಕೆ ಎಡೆಮಾಡಿಕೊಡುವುದಿಲ್ಲ.

ಮತ್ತೊಂದು ಪಾತ್ರ 'ತಾಯಿ' ಕಥೆಯ ಅಬ್ಬಕ್ಕಳದ್ದು. ಈಕೆ ಗ್ರಾಮೀಣ ನೆಲೆಯಲ್ಲಿದ್ದು ಆಧುನಿಕತೆಯನ್ನು ಮೈಗೂಡಿಸಿಕೊಂಡ ಹೆಣ್ಣಾಗಿದ್ದಾಳೆ. ಲಕ್ಷ್ಮಿ ಮತ್ತು ಯಮುನಾಗಿಂತ ಅಬ್ಬಕ್ಕಳು ಸಮಾಜದಲ್ಲಿನ ಯಾವುದೇ ಮಾತುಗಳನ್ನು ಎದುರಿಸುವ ಶಕ್ತಿಯನ್ನು ಹೊಂದಿದ್ದಾಳೆ.

ಮೊದಲ ಗಂಡ ಸತ್ತ ನಂತರ ಮತ್ತೊಬ್ಬನನ್ನು ಕೂಡಿಕೆಯಾಗುತ್ತಾಳೆ. ಮೊದಲ ಗಂಡನ ಮಗ ಹದಿಮೂರು ವರ್ಷದ ಚೆಲುವನನ್ನು ಸಾಕಿದ ಮೇಲೆ ವಿಧವೆ ಒಂಟಿಯಾಗಿ ಬಾಳಲಾರದೆ ಹೊಸ ಮೋಹಕ್ಕೆ ಸಿಲುಕಿ ಸೇರೆಗಾರಿಕೆಯವನನ್ನು ಕೂಡಿಕೆ ಮಾಡಿಕೊಳ್ಳುತ್ತಾಳೆ. ಹಾಗೆಯೇ ತನ್ನ ಕೂಡಿಕೆಯ ವಿಷಯವನ್ನು ಸಮರ್ಥಿಸಿಕೊಳ್ಳುತ್ತಾಳೆ. "ಸೀತು ಮಾಡಿಕೊಂಡಿಲ್ಲವೆ? ಅಕ್ಕುವಿಗೆ ಮೂರು ಕೂಡಿಕೆಯಾಗಿಲ್ಲವೆ? ಐದು ಮಕ್ಕಳ ತಾಯಿ ಮೀಟಿ ಮೊನ್ನೆ ತಾನೆ ಆಗಲಿಲ್ಲವೆ? ಹೀಗಿದ್ದಾಗ ತನ್ನದು ತಪ್ಪೆ?"[೩೬]

ಅಬ್ಬಕ್ಕಳು, ಕೂಡಿಕೆಯಾಗಿರುವ ವ್ಯಕ್ತಿಯ ಬಗ್ಗೆ "ಅವನ ಆ ತೀಡಿದ ಮೀಸೆ. ಕವಳ ಜಗಿದು ಕೆಂಪಾದ ಸದಾ ಮುಗುಳು ನಗುವ ಆ ತುಟಿಗಳು, ಎಲೆವಸ್ತ್ರದ ಮುಂಡಾಸಿನಿಂದ ಇಣುಕಿ ನೋಡುವ ಆ ನೀಳವಾದ ಕೂದಲು. ಆ ಹೊಳೆಯುವ ದೊಡ್ಡ ದೊಡ್ಡ ಒಂಟಿಗಳು. ಕೂಲಿ ಆಳುಗಳ ಜೊತೆ ಅವನು ಸೇರೆಗಾರಿಕೆ ನಡೆಸುವ ಆ ಠೀವಿ. ....... ತೌರೂರನ್ನೇ ಏಕೆ? ಪ್ರಪಂಚವನ್ನೇ ಮರೆ ಎಂದ ರಸಿಕ ಅವನು"[೩೭] ಎಂದು ಅಬ್ಬಕ್ಕ ಹೆಮ್ಮೆ ಪಡುತ್ತಾಳೆ.

ತಾಯಿಯಾಗಿರುವ ಅಬ್ಬಕ್ಕಳು, ಹೆಣ್ಣಿನ ಸಹಜವಾದ ತಾಯಿ ವಾತ್ಸಲ್ಯದ ತುಡಿತಕ್ಕೆ ಭಾವನಾತ್ಮಕವಾಗಿ ಚಿಂತಿಸುತ್ತಾಳೆ. ಮೊದಲ ಮಗನಾದ ಚೆಲುವನ ಬಗ್ಗೆ ಯೋಚಿಸುತ್ತಾ "ಅಯ್ಯೋ! ತಾನು ಪಾಪಿಯಲ್ಲವೆ? ಅದು ಎಂತಹ ಮೋಹ? ಯಾವ ತಾಯಿಯ ಕರುಳೂ ಹಾಗೆ ಮಾಡಿರಲಿಕ್ಕಿಲ್ಲ. ಈಗ ನಾಲ್ಕು ಜನ ಆಡಿಕೊಂಡಂತೆ ತಾನು ಸೂಳೆಗಿಂತಲೂ ಅತ್ತತ್ತವಾಗಿ ನಡೆಯಲಿಲ್ಲವೇ?[೩೮] ಎನ್ನುತ್ತಾಳೆ. ಹಾಗೆಯೇ ಎರಡನೇ ಗಂಡನ ವಿಷಯದಲ್ಲೂ "ತನ್ನನ್ನೊಲಿದವನು ಸಭ್ಯಸ್ಥ. ಆದರೆ ಆ ಹಾಳು ಮೋಹದ ದೆಸೆಯಿಂದಲೇ ಈಗ ಕೈತಪ್ಪಿ ಹೋದನಲ್ಲವೇ ಮಗ?" ಎಂಬ ಜಿಜ್ಞಾಸೆಗೆ ಒಳಗಾಗುವ ಸನ್ನಿವೇಶವನ್ನು ಅನಂತಮೂರ್ತಿಯವರು ತಾಯಿಯಾಗಿ, ಹೆಣ್ಣಾಗಿ ಯೋಚಿಸುವ ಅಬ್ಬಕ್ಕಳ ಮನಸ್ಸಿನ ತಳಮಳದ ಮನಸ್ಸನ್ನು ಸೃಷ್ಟಿಸಿದ್ದಾರೆ.

ಲಕ್ಷ್ಮಿ, ಯಮುನಾ, ಅಬ್ಬಕ್ಕಳ ಪಾತ್ರಕ್ಕಿಂತ ಲಚ್ಚಿ ಪಾತ್ರವನ್ನು ಭಿನ್ನವಾದ 'ಪ್ರಶ್ನೆ' ಕಥೆಯಲ್ಲಿ ಚಿತ್ರಿಸಿದ್ದಾರೆ. ಈ ಪಾತ್ರಕ್ಕೆ ಅನುಗುಣವಾಗಿ ಗ್ರಾಮೀಣ ಭಾಗದ ಶ್ರೀಮಂತ ಕುಟುಂಬದ ಜಮೀನ್ದಾರಿಕೆ ಪದ್ಧತಿಯನ್ನು ಆಧುನಿಕ ಪ್ರಪಂಚದ ಇಂದಿನ ಸಮಾಜದ ಬಂಡವಾಳ ಶಾಹಿ ಪದ್ಧತಿಗಳೆರಡನ್ನು ಪ್ರತಿನಿಧಿಸುವ ವ್ಯಕ್ತಿಯಾಗಿದ್ದಾನೆ. ಗ್ರಾಮೀಣ ಭಾಗದಲ್ಲಿ ವಿವಾಹೇತರ ಸಂಬಂಧಗಳು ಸಹಜವಾಗಿ ಆರ್ಥಿಕ ಅನಿವಾರ್ಯ ಕಾರಣದಿಂದ ಅಥವಾ ಸಹಜವಾದ ಕಾಮದ ಆಕರ್ಷಣೆಯಿಂದ ರೂಪುಗೊಳ್ಳುತ್ತವೆ. ಇಂತಹ ಸೂಕ್ಷ್ಮತೆಯನ್ನು ಒಳಗೊಂಡಿರುವುದನ್ನು ಲಚ್ಚಿ ಪಾತ್ರದ ಮೂಲಕ ನಿರೂಪಿಸಿದ್ದಾರೆ.

'ಪ್ರಶ್ನೆ' ಕಥೆಯು ಕೊಪ್ಪ ಎಂಬ ಒಂದು ಚಿಕ್ಕ ಹಳ್ಳಿಯಲ್ಲಿ ನಡೆಯುತ್ತದೆ. ಲಚ್ಚಿಗೆ ವಿವಾಹವಾಗಿರುತ್ತದೆ. ಲಕ್ಷ್ಮಿ, ಯಮುನಾ, ಅಬ್ಬಕ್ಕರ ರೀತಿಯಲ್ಲಿ ಸಮಸ್ಯೆಯನ್ನು ಎದುರಿಸದಿದ್ದರೂ. ಸಹಜವಾದ ಆರ್ಥಿಕ ಕಾರಣದಿಂದ ಧಣಿಯ ಸ್ಥಾನದಲ್ಲಿರುವ ರಂಗನಿಗೆ ತನ್ನ ದೇಹದ ಸುಖ ನೀಡಲು ಆಹ್ವಾನಿಸುತ್ತಾಳೆ. "ನನ್ನ ಗುಡಿಸಲಿಗೂ ಬಂದು ಹೋಗಬಾರದ? ಬೆಳಿಗ್ಗೆ ಅವರು ತೋಟದ ಕೆಲಸಕ್ಕೆ ಹೋಗುತ್ತಾರೆ. ಒಬ್ಬಳೇ ಇರುತ್ತೇನೆ ಎಂದು ನಾಚಿದಳು. ಕತ್ತು ಓರೆಮಾಡಿ ಮಾಟವಾದ ಬಾಯಿಯನ್ನು ಸ್ವಲ್ಪ ತೆರೆದು ನಿಂತಳು."೩೯

"ಲಚ್ಚಿಗೆ ರಂಗನನ್ನು ಕೂಡುವ ಬಯಕೆಯಾಗಲು ಪ್ರಮುಖ ಕಾರಣ ಇರುತ್ತದೆ. ರಂಗನ ಮೂಲಕ ತನ್ನ ಅಮ್ಮನ ನೆನಪಿಗೆ ತೋಟವೊಂದನ್ನು ಆಕೆಯ ಹೆಸರಿಗೆ ಮಾಡಿಕೊಡಲು ಶಂಕರಯ್ಯನಿಗೆ ಹೇಳುವಂತೆ ಕೇಳಿಕೊಳ್ಳುತ್ತಾಳೆ"೪೦ ಆರ್ಥಿಕ ಅನಿವಾರ್ಯ ಕಾರಣದಿಂದ ಅಥವಾ ಸಹಜವಾದ ಆಕರ್ಷಣೆಗೆ ಒಳಗಾಗಿ ಲಚ್ಚಿಯಂಥ ಹೆಣ್ಣು ತನ್ನನ್ನು ತಾನು ಅರ್ಪಿಸಿಕೊಳ್ಳುವ ಅನಿವಾರ್ಯತೆಯನ್ನು ಕಾಣಬಹುದು. ಈ ಕಥೆಯಲ್ಲಿ "ವಾಸ್ತವ ಹಾಗೂ ಸಾಂಕೇತಿಕ ಪಾತಳಿಗಳ ಮೇಲೆ ಏಕಕಾಲಕ್ಕೆ ಕ್ರಿಯಾಶೀಲವಾಗುವ ಮೂಲಕ 'ಪ್ರಶ್ನೆ' ತನ್ನ ಶಕ್ತಿ, ವೈಶಿಷ್ಟ್ಯಗಳನ್ನು ಗಳಿಸಿಕೊಳ್ಳುತ್ತದೆ. ವಾಸ್ತವದ ನೆಲೆಯಲ್ಲಿ ಕತೆ ಒಂದು ಖಚಿತವಾದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂದರ್ಭದಲ್ಲಿ ನಂಬಲರ್ಹವಾದ ಮನುಷ್ಯ ಸಂಬಂಧಗಳ ಸನ್ನಿವೇಶವನ್ನು ಸೃಷ್ಟಿಸುತ್ತದೆ."೪೧

'ನವಿಲುಗಳು' ಕಥೆಯ ನಿರೂಪಕನೇ ತನ್ನ ತಂದೆ ಮತ್ತು ಗೋವಿಂದರಾಯನ ಹೆಂಡತಿ ಜಾನಕಮ್ಮಳ ದೈಹಿಕ ಸಂಬಂಧವನ್ನು ಹೇಳುತ್ತಾನೆ. ಆತನು ಚಿಕ್ಕವನಾಗಿದ್ದಾಗ ತಾಯಿಯ ಮಾತಿನಂತೆ ತಂದೆಯನ್ನು ಕರೆಯಲು ಹಲಸಿನ ಊರಿಗೆ ಹೋಗುತ್ತಾನೆ. ಗೋವಿಂದರಾಯನ ಮನೆಗೆ ಹೋದಾಗ ಅಪ್ಪನು ಬೆತ್ತಲೆ ಸ್ನಾನ ಮಾಡುತ್ತಾ ಜಾನಕಮ್ಮಳ ಜೊತೆ ನಗುತ್ತಿರುತ್ತಾನೆ. ಜಾನಕಮ್ಮಳು ಅವಳ ಬೆನ್ನಿಗೆ ಸೀಗೆ ಉಜ್ಜಿ ತೊಳೆಯುತ್ತಾ ಇರುತ್ತಾಳೆ. ಈ ಘಟನೆ ನನಗೆ ಚಿಕ್ಕ ವಯಸ್ಸಿನವನಾಗಿದ್ದರಿಂದ ತಿಳಿದಿರಲಿಲ್ಲ. " ಗಂಡ ಮನೇಲಿ ಇಲ್ಲದಿದ್ದಾಗ ಅಪ್ಪಯ್ಯನ ಜೊತೆ ಜಾನಕಮ್ಮ ಏನು ಮಾಡುತ್ತಿದ್ದರು ಎಂದು ನನಗೆ ಮೊದಲು ಹೊಳೆದದ್ದು ಗುಡ್ಡದ ಮೇಲೆ ಒಂದು ದಿನ ಕನ್ಯಾಮಾಸದ ನಾಯಿ ಜೋಡಿ ನೋಡಿದಾಗಲೊ? ಅವು ಜೋಡಿಯಾಗಲಿ ದೇವರೇ ಎಂದು ಪ್ರಾರ್ಥಿಸುತ್ತ ಆಸೆಯಿಂದ ನೋಡುತ್ತ ನಿಂತದ್ದು ನೆನಪಾಗುತ್ತದೆ."೪೨ ನಿರೂಪಕನ ತಂದೆಯ ಮತ್ತು ಜಾನಕಮ್ಮಳ ಸಂಪರ್ಕ ಗೋವಿಂದರಾಯರು ಸತ್ತ ಮೇಲೆ ಕಾಲಕ್ರಮೇಣ ದೂರವಾಗುತ್ತದೆ. ನಿರೂಪಕನ ತಾಯಿ ಮಾತ್ರ ಗಂಡನ ವಿಷಯದಲ್ಲಿ ರಂಪಾಟ ಮಾಡುತ್ತಾಳೆ. ಆದರೆ ಗೋವಿಂದರಾಯನ ಹೆಸರು ಕಥೆಯಲ್ಲಿ ನಮೂದಾಗುತ್ತದೆಯೇ ಹೊರತು ಅವನು ಜೀವಂತ ಪಾತ್ರವಾಗಿ ಕಾಣಿಸಿಕೊಳ್ಳುವುದಿಲ್ಲ.

ಅನಂತಮೂರ್ತಿಯವರ 'ಆಕಾಶ ಮತ್ತು ಬೆಕ್ಕು' ಕಥೆಯಲ್ಲಿನ 'ಗಂಗೂ ಬಾಯಿ' ಮತ್ತು 'ಅಲಕಾವತಿ' ಎರಡು ಪಾತ್ರಗಳು ಸ್ತ್ರೀ ಪ್ರಧಾನವಾದ ದೈಹಿಕ ಸಂಬಂಧಗಳನ್ನು ಗಟ್ಟಿಗೊಳಿಸುವ ಪಾತ್ರಗಳಾಗಿವೆ. ಕಥೆಯಲ್ಲಿನ ಜಯತೀರ್ಥ ಆಚಾರ್ಯನು ಈ ಹೆಣ್ಣುಗಳ ಜೊತೆ ದೈಹಿಕ ಸಂಬಂಧವನ್ನು ಬೆಳೆಸಿದವನು. ಇಬ್ಬರು ಇಷ್ಟಪಟ್ಟು ಆಚಾರ್ಯನನ್ನು ಒಲಿಸಿಕೊಂಡವರು. ಶಿವಮೊಗ್ಗದಲ್ಲಿ ಗಂಡನ ಕ್ರೂರತನದಿಂದ ದೂರವಾಗಿ ಆಚಾರ್ಯರರಿಂದ ಡೈವೋರ್ಸ್ ಬಗ್ಗೆ ತಿಳಿದುಕೊಂಡು ಗಂಡನಿಂದ ದೂರವಾದಳು. ಆಚಾರ್ಯರ ಸಹಾಯ ಮತ್ತು ತನ್ನಲ್ಲಿರುವ ದುಡ್ಡನ್ನು ಒಟ್ಟುಗೂಡಿಸಿ ಹಸುಗಳನ್ನು ಸಾಕಿದಳು. ಗಂಡನಿಗಿಂತ ಹೆಚ್ಚಾಗಿ ಅಚಾರ್ಯರು ಹತ್ತಿರವಾಗುತ್ತಾರೆ. ಅವರಿಗೆ ಅವಮಾನವಾಗ ಬಾರದೆಂದು 'ಎರಡು ಸಾರಿ ಬಸಿರನ್ನು' ಇಳಿಸಿಕೊಳ್ಳುತ್ತಾಳೆ. ಅವರನ್ನು ಕಂಡರೆ ಅಭಿಮಾನ, ಧನ್ಯತೆಯ ಭಾವವನ್ನು ಹೊಂದಿದ್ದ ಹೆಂಗಸಾಗುತ್ತಾಳೆ. ದೈಹಿಕ ಕಾಮನೆಯ ತೃಪ್ತಿ ಮತ್ತು ಬದುಕಿನ ಮಾರ್ಗದರ್ಶನ ಗಂಗುಬಾಯಿ ತನಗೆ ಸಿಕ್ಕಿತೆಂದು ಭಾವಿಸುತ್ತಾಳೆ.

ಅಲಕಾವತಿಯು ಶ್ರೀಮಂತ ಬ್ರಾಹ್ಮಣ ಕುಟುಂಬದವಳು. ರಾಮದೇವಸ್ಥಾನದ ಯಜಮಾನನಾಗಿ ಅವರ ತಂದೆಯಿದ್ದರು. ಮೊದಲ ಪೂಜೆಯ ತೀರ್ಥ ಅವರಿಗೆ ಸಲ್ಲಬೇಕಾಗಿತ್ತು. ಅಂಥವರ ಹೆಂಡತಿ ಕುರುಡಿ. ಮಗಳು ಅಲಕಾದೇವಿ ಚೆಲುವೆಯಾಗಿರುತ್ತಾಳೆ. ಅವಳನ್ನು ಸೋದರಮಾವನಿಗೆ ಕೊಟ್ಟು ಮದುವೆ ಮಾಡಿರುತ್ತಾರೆ. ಹತ್ತು ವರ್ಷ ಗಂಡನ ಮನೆಯಲ್ಲಿ ಇದ್ದು ಬೇಸರವಾಗಿ ತವರು ಮನೆಗೆ ಸೇರುತ್ತಾಳೆ. ತಂದೆ ನೋವಿನಿಂದಲೇ ಸಾಯುತ್ತಾನೆ. ಅಲಕಾವತಿ ಮತ್ತು ತಾಯಿ ಕುರುಡಿ ಇಬ್ಬರೆ ಆರಮನೆಯಂಥ ಮನೆಯಲ್ಲಿ ಇರುತ್ತಾರೆ. ಜಯತೀರ್ಥ ಆಚಾರ್ಯನು ಅವರ ಮನೆಗೆ ತೀರ್ಥವನ್ನು ಕೊಡಲು ಹೋದಾಗ, ಅಲಕಾವತಿಯ ಪ್ರೀತಿ ಮತ್ತು ಕಾಮಕ್ಕೆ ಆಚಾರ್ಯನು ಒಳಗಾಗುತ್ತಾನೆ. ಅವನನ್ನು ಪಡೆಯಲು ತನ್ನದೇ ಆದ ರೀತಿಯಲ್ಲಿ ಅಲಕಾವತಿ ಚೌಕಟ್ಟನ್ನು ನಿರ್ಮಿಸುತ್ತಾಳೆ. ತನ್ನ ಸೊರಗಿದ ಗಂಡನನ್ನು ತನ್ನ ಮನೆಗೆ ಹಿಂತಿರುಗುವಂತೆ ಮಾಡುತ್ತಾಳೆ. ಈ ಹಿಂದೆ ಅಲಕಾದೇವಿಯ ಮಾತಿನಂತೆ ದೂರದ ಊರಿಗೆ ಹೋಗಿದ್ದ ಆಚಾರ್ಯನು ಪುನಃ ವಾಪಸ್ಸಾಗುತ್ತಾನೆ. ಊರಿನ ಪೋಸ್ಟ್ ಆಫೀಸಿನಲ್ಲಿ ಪೋಸ್ಟ್ ಮಾಸ್ತರಾಗಿರುತ್ತಾನೆ. ಶ್ರೀಮಂತಿಕೆಯ ಯಜಮಾನಿಕೆಯನ್ನು ಹೊತ್ತಿದ್ದ ಅಲಕಾವತಿಯು 'ಗಂಡನಿಗೆ ವ್ಯವಹಾರ ಜ್ಞಾನ ಸಾಲದೆಂದು' ಆಚಾರ್ಯನನ್ನು ಎಸ್ಟೇಟಿನ ರೈಟರ್ ಆಗಿ ನೇಮಿಸುತ್ತಾಳೆ. ಅಲಕಾವತಿಯು ಆಚಾರ್ಯರನ್ನು ಕ್ರಮೇಣ ಮೈಮನಸ್ಸುಗಳನ್ನು ತಣಿಸುವ ಅಗತ್ಯದಿಂದ ಹತ್ತಿರ ಮಾಡಿಕೊಳ್ಳುತ್ತಾಳೆ. ಮುಂದುವರೆದಂತೆ ಅವನಿಗೆ ಬೇಸರವಾಗದಂತೆ "ಅಲಕಾವತಿಯು ತನ್ನ ಮೈಯ ರುಚಿಯನ್ನು ಹೆಚ್ಚಿಸುತ್ತ, ಅದು ಗುಪ್ತ ಲಭ್ಯವಾದರಿಂದ ಆ ಸುಖವನ್ನು ಇನ್ನಷ್ಟು ಕಟುವಾಗಿಸುತ್ತ ಆಚಾರ್ಯರನ್ನು ಇನ್ನಷ್ಟು ಬಿಗಿಯಾಗಿ ಹಿಡಿಯುತ್ತ ಹೋದಳು.

ಕ್ರಮೇಣ ಆಚಾರ್ಯರಿಗೆ ತನ್ನ ಸ್ವಮರ್ಯಾದೆ ನಷ್ಟವಾಗುತ್ತಿದೆ ಎಂಬ ಭಾವನೆ ಬೆಳೆಯಲು ಶುರುವಾಯಿತು. ಈ ಭಾವನೆ ಗಮನಿಸಿದ ಅಲಕಾವತಿ ಇನ್ನಷ್ಟು ಹೆಚ್ಚು ತನ್ನ ಸಂಗದ ಸುಖ ಅವರಿಗೆ ಬೆಳೆಯುವಂತೆ ಪ್ರಣಯದ ಕಲೆಯಲ್ಲಿ ನಿಷ್ಣಾತಳಾಗುತ್ತ ಹೋದಳು. ಪ್ರತಿದಿನ ಅವರಿಗೆ ಅವಳು ಹೊಸಬಳೆನ್ನುವಂತೆ ಮೈಯನ್ನು ಕೊಟ್ಟಳು. ಈ ಮೈಯಿ ಅಕ್ಷಯವಾಗಿ ಪರಸ್ಪರ ಸಂಗದಲ್ಲಿ ಬಿಚ್ಚಿಕೊಳ್ಳಬಹುದೆಂದು ತೋರಿಸಿ, ಅವರನ್ನು ಬೆರಗಿನಲ್ಲೇ ಉಳಿಸಿದಳು."[೪೩]

ಆಚಾರ್ಯನಿಂದ ಎರಡು ವರ್ಷ ಸುಖ ಅನುಭವಿಸಿದ ಅಲಕಾವತಿ ಬಸುರಿಯಾಗಿ ಹೊಟ್ಟೆಯಲ್ಲಿ ಮಗು ಸಾಯುವುದರ ಜೊತೆಗೆ ಆಕೆಯು ಸಾಯುತ್ತಾಳೆ.

ಕಾಮದ ಉತ್ಕಟತೆಯಲ್ಲಿ ಆಚಾರ್ಯರಿಗೆ ಗಂಗೂಬಾಯಿ ಧನ್ಯತಾ ಭಾವನೆಯಲ್ಲಿ ಅರ್ಪಿಸಿಕೊಂಡರೆ, ಅಲಕಾವತಿ ಅತೃಪ್ತ ಹೆಣ್ಣು ದೇಹದ ಸುಖಕ್ಕೆ ಪ್ರಯತ್ನಿಸುವ ರೀತಿಗಳು ಮತ್ತು ಅದನ್ನು ಪಡೆದಾಗ ಮತ್ತಷ್ಟು ಪಡೆಯ ಬೇಕೆನ್ನುವ ಅವಳ ಮನಸ್ಸಿನ ತುಡಿತವನ್ನು ಕಥೆಗಾರ 'ಆಕಾಶ ಮತ್ತು ಬೆಕ್ಕು' ಕಥೆಯಲ್ಲಿ ಪ್ರಸ್ತಾಪಿಸುತ್ತಾರೆ.

ಅನಂತ ಮೂರ್ತಿಯವರ ಸ್ತ್ರೀ ಪ್ರಧಾನ ದೈಹಿಕ ಸಂಬಂಧಗಳಲ್ಲಿ, ಲಕ್ಷ್ಮಿ ಕಿಟ್ಟುವನ್ನು ಕೂಡಿದರೂ ಅದು ಸಮಾಜದಲ್ಲಿ ರಾದ್ಧಾಂತವಾಗುವುದಿಲ್ಲ. ಯಮುನಾಳು ಮೇಸ್ತ್ರರ ಕಾರಣದಿಂದ ಗರ್ಭಧರಿಸಿ ಸಮಾಜದಲ್ಲಿ ನರಳುತ್ತಾಳೆ. ಅಬ್ಬಕ್ಕ ಸೇರೆಗಾರನ ಜೊತೆ ಕೂಡಿಕೆ ಜೀವನ ನಡೆಸುತ್ತಾಳೆ. ಇವರಿಗೆ ವಿಭಿನ್ನವಾಗಿ ಲಚ್ಚಿ ಗಂಡನಿದ್ದರೂ ಕೂಡ ರಂಗನನ್ನು ದೇಹ ಸಂಬಂಧಕ್ಕೆ ಆಹ್ವಾನಿಸುತ್ತಾಳೆ. ಈ ಮೂರು ಪಾತ್ರಗಳಿಗಿಂತ 'ನವಿಲುಗಳು' ಕಥೆಯಲ್ಲಿನ ಜಾನಕಮ್ಮಳು ಯಾವುದೇ ಪ್ರತಿಭಟನೆ ಇಲ್ಲದೆ ದೈಹಿಕ ಸಂಬಂಧವನ್ನು ಅನುಭವಿಸುತ್ತಾಳೆ. 'ಆಕಾಶ ಮತ್ತು ಬೆಕ್ಕು' ಕಥೆಯಲ್ಲಿನ ಗಂಗೂಬಾಯಿ ಪೂಜ್ಯನೀಯ ಮತ್ತು ಕೃತಜ್ಞತಾ ಭಾವದಲ್ಲಿ ದೈಹಿಕ ಸುಖವನ್ನು ಅನುಭವಿಸಿದರೆ, ಅಲಕಾವತಿಯು ದೈಹಿಕವಾಗಿ ಆಚಾರ್ಯನನ್ನು ಅಧೀನ ಮಾಡಿಕೊಳ್ಳುವ ಮೂಲಕ ತನಗೆ ಅಗತ್ಯವಾದ ಮೈ ಸಂಬಂಧವನ್ನು ಅನುಭವಿಸುವ ಮೂಲಕ ತೃಪ್ತ ಮನಸ್ಸಿನ ಹೆಣ್ಣಾಗುತ್ತಾಳೆ. ಅನಂತಮೂರ್ತಿಯವರ ಸ್ತ್ರೀ ಪ್ರಧಾನ ಪಾತ್ರಗಳಲ್ಲಿ ಪ್ರಕೃತಿ ಸಹಜವಾದ ದೈಹಿಕ ಕಾಮನೆಯ ಸ್ಥಿತಿಗಳು ವಿಭಿನ್ನ ನೆಲೆಗಟ್ಟುಗಳಲ್ಲಿ ಅನಾವರಣ ಗೊಳ್ಳುತ್ತವೆ.

### ೨.೨.೨. ಪುರುಷ ಪ್ರಧಾನ ದೈಹಿಕ ಸಂಬಂಧಗಳು

ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿಗೆ ಚೌಕಟ್ಟನ್ನು ಹಾಕುವ ಮೂಲಕ, ತಾನೆ ಪ್ರಧಾನವಾಗಿ ಕಾಣುತ್ತಾನೆ. ತನ್ನ ದೈಹಿಕ ಕಾಮನೆಗಳ ಈಡೇರಿಕೆಯ ಸಮಯದಲ್ಲಿ ಎದುರಾಗುವ ಸನ್ನಿವೇಶಗಳನ್ನು ತನ್ನ ಲಾಭಕ್ಕಾಗಿ ಬಳಸಿಕೊಳ್ಳುತ್ತಾನೆ.

ತೇಜಸ್ವಿಯವರು ಪುರುಷ ಪ್ರಧಾನ ದೈಹಿಕ ಕಾಮನೆಗಳ ಮನಸ್ಸುಗಳನ್ನು ತಮ್ಮದೆ ಆದ ಕಥಾ ಚೌಕಟ್ಟಿನಲ್ಲಿ ತರುತ್ತಾರೆ. ಅವರ 'ಸ್ವರೂಪ' ಕಥೆ ನಿರ್ದಿಷ್ಟ ಚೌಕಟ್ಟಿನೊಳಗೆ ಸಾಗುತ್ತದೆ. ಅಶ್ಲೀಲ ಎನ್ನುವುದಕ್ಕಿಂತ ಹದಿಹರೆಯದ ಹುಡುಗನ ದೈಹಿಕ ತೊಳಲಾಟವನ್ನು ತೋರಿಸುವ ಕಥೆ ಇದಾಗಿದೆ. ಕಥೆಯ ನಿರೂಪಕನಾಗಿರುವ ಶ್ರೀನಿವಾಸನು ಜಯಂತಿಯನ್ನು ಪ್ರೀತಿಸುತ್ತಾನೆ. ಆಕೆ ಸ್ಕೂಲಿನ ಉಪಾಧ್ಯಾಯಿನಿಯಾಗಿರುತ್ತಾಳೆ. ಅವಳ ಮೇಲಿನ ಪ್ರೀತಿ ದೈಹಿಕ ಸಂಪರ್ಕದವರೆಗೂ ಹೋಗುವುದಿಲ್ಲ. ಆ ಶ್ರೀನಿವಾಸನು ಕೊಡುವ ಕಾರಣವೆಂದರೆ "ಅವಿವಾಹಿತವಾಗಿ ಒಟ್ಟಿಗೆ ಮಲಗುವುದು ಅಧಾರ್ಮಿಕ ಎಂದಲ್ಲ. ಎಲ್ಲಿ ಗರ್ಭಿಣಿ ಯಾಗಿಬಿಡುತ್ತಾಳೋ ಎಂಬ ಭಯದಿಂದ"[೪೪] ಎನ್ನುತ್ತಾನೆ. ಇಲ್ಲಿ ವ್ಯಕ್ತಿಯ ಕಾಮನೆಗಳ ಈಡೇರಿಕೆ ಸಾಧ್ಯವಾಗದಿರುವುದು ಆಕೆ ಗರ್ಭಿಣಿಯಾಗುತ್ತಾಳೆ ಎಂಬ ಭಯದಿಂದಲೆ ಹೊರತು, ತಾನು ಅವಳನ್ನು ಪಡೆಯಲಿಲ್ಲವೆಂಬ ವ್ಯಥೆ ಇರುವ ಸ್ಥಿತಿಯನ್ನು ತೇಜಸ್ವಿಯವರು ಈ ಕಥೆಯಲ್ಲಿ ಓದುಗನಿಗೆ ನೀಡುತ್ತಾರೆ. ಸಮಾಜದಲ್ಲಿನ ವ್ಯಕ್ತಿಗಳ ದೈಹಿಕ ಕಾಮನೆಗಳ ಆಸೆಗಳು ಈಡೇರದೆ ಇರಲು "ಹೆಣ್ಣು ಗರ್ಭಿಣಿಯಾಗುತ್ತಾಳೆ, ಎಂಬ ಭಯದಿಂದಲೆ ಹೊರತು, ನೈತಿಕ ಅನೈತಿಕ ಕಾರಣಗಳು ಕಾಣಬರುವುದಿಲ್ಲ." ಕಥೆಯಲ್ಲಿನ ಶ್ರೀನಿವಾಸನ ಸಹಜವಾದ ಭಯ ಪ್ರಧಾನವಾಗುತ್ತದೆ.

ವ್ಯಕ್ತಿಯಲ್ಲಿರುವ ಮೂಢನಂಬಿಕೆ ಮತ್ತು ಅವೈಜ್ಞಾನಿಕ ನಿಲುವುಗಳು ಹೆಣ್ಣನ್ನು ಹೇಗೆ ಬಲಿ ತೆಗೆದುಕೊಳ್ಳುತ್ತವೆ ಎಂಬುದಕ್ಕೆ 'ಕುಬಿ ಮತ್ತು ಇಯಾಲ' ಕಥೆಯೆ ಉದಾಹರಣೆಯಾಗುತ್ತದೆ. ಲೋರಿಯ ಮೇಹರೋಗಕ್ಕೆ ಮದ್ದು ಮೈನೆರೆಯದ ಕನ್ಯೆಯನ್ನು ಸಂಭೋಗಿಸಿದರೆ ವಾಸಿಯಾಗುತ್ತದೆ ಎಂಬ ಕಾರಣಕ್ಕಾಗಿ, ಇಯಾಳನ್ನು ಸಂಭೋಗಿಸುತ್ತಾನೆ. ಆಕೆ ವಯಸ್ಸಿಗೆ ಬಂದವಳೆಂದು ತಿಳಿದಾಗಲೋ ಅಥವಾ ಸಿಟ್ಟಿನಿಂದಲೇ ಅವಳನ್ನು ಸಾಯಿಸುತ್ತಾನೆ. ವಿಚಿತ್ರ ಕಾಯಿಲೆಯ ಔಷಧಿಯಾಗಿ ಹೆಣ್ಣನ್ನು ಅನುಭವಿಸುವ ಗಂಡಿನ ವಿಕಾರ ಮನಸ್ಸಿನ ಮುಖವಾಡವನ್ನು ತೆರೆದಿಡುತ್ತಾರೆ. ಹಾಗೆಯೇ ಅಸ್ವಸ್ಥ ಸಮಾಜದ ಅವೈಜ್ಞಾನಿಕ ಮೂಢನಂಬಿಕೆಗಳಿಗೆ ಹೆಣ್ಣುಗಳು ಬಲಿಯಾಗುವ ರೀತಿಯನ್ನು ಈ ಕಥೆಯಲ್ಲಿ ಓದುಗರಿಗೆ ನೀಡುತ್ತಾರೆ.

ಲಂಕೇಶರ ಕಥೆಗಳಲ್ಲಿ ಪುರುಷ ಪ್ರಧಾನ ಸಮಾಜದಲ್ಲಿ, ದೈಹಿಕ ಕಾಮನೆಗಳ ವಿಷಯಕ್ಕೆ ಸಂಬಂಧಿಸಿದಂತೆ ಅವರದೆ ಆದ ನಿಲುವುಗಳು ಕಾಣುತ್ತವೆ. 'ಕೊನೆ', 'ಮಾರಲಾಗದ ನೆಲ', 'ದಾಹ', 'ಸ್ಟೆಲ್ಲಾ ಎಂಬ ಹುಡುಗಿ', 'ದೇವಿ', 'ಚಂದ್ರಪ್ಪಗೌಡರಿಗೆ ಬಿದ್ದ ಕನಸು', 'ಮಂಜು ಕವಿದ ಸಂಜೆ', ಕಥೆಗಳಲ್ಲಿ ಪುರುಷ ಮನಸ್ಥಿತಿಯ ವಿಚಾರಗಳನ್ನು ಪುರುಷನಲ್ಲಿರುವ ಅಹಂ ಪ್ರತೀಕವಾಗಿ, ಕಾಮದ ಮನಸ್ಥಿತಿಗಳನ್ನು ನೋಡಬಹುದಾಗಿದೆ.

'ಕೊನೆ' ಕಥೆಯು ಉಜ್ಜನಿಗೆ ಅವನ ಅಪ್ಪ ನಂಜಣ್ಣನು ಹೀಯಾಳಿಸುವುದರೊಂದಿಗೆ ಆರಂಭವಾಗುತ್ತದೆ. ಅಪ್ಪನ ಮಾತಿನಿಂದ ಉಜ್ಜನು ಸಾಯುವ ಯೋಚನೆ ಮಾಡುತ್ತಾನೆ.

ದಾರಿಯಲ್ಲಿ ಬರುತ್ತಿರುವಾಗ ಸಾವು ಮತ್ತು ರೋಮಾಂಚನ ಕಾಮ ಒಟ್ಟಿಗೆ ಅವನ ಮನಸ್ಸಿಗೆ ಬರುತ್ತದೆ. ಹಿಂದೆ ತಾನು ಪದ್ಮಿನಿ ಜೊತೆ ಅನುಭವಿಸಿದ ಸುಖವನ್ನು ನೆನೆಯುತ್ತಾನೆ. ಮುಂದುವರೆದಂತೆ ಗೌಡನ ಮಗಳು ಪಾರ್ವತಿಯ ಜೊತೆ ತಾನು ಸಾಯುವುದಾಗಿ ಹೇಳುತ್ತಾನೆ. ಸಾವಿನ ಮನಸ್ಸು ಮಾಡಿದ ಉಜ್ಜನ ಮನಸ್ಸು ಮಾತ್ರ ಪಾರ್ವತಿಯ ಮೇಲೆ ಆಕ್ರಮಣಕ್ಕೆ ಒಳಗಾಗುವುದು ವಿಚಿತ್ರವಾದ ಸನ್ನಿವೇಶವಾಗಿದೆ. ಬಲವಂತವಾಗಿ ಅವಳನ್ನು ಅನುಭವಿಸಲು ಹೋಗಿ ಹೊಡೆತ ತಿನ್ನುತ್ತಾನೆ. ಸಾವಿನ ಮುಖ ಮಾಡುವ ವ್ಯಕ್ತಿ ಕಾಮದ ಬಯಕೆಯ ಉತ್ಕಟತೆ ಒಳಗಾಗುವ ವಿಚಿತ್ರ ಪರಿಸ್ಥಿತಿಯನ್ನು ಈ ಕಥೆಯಲ್ಲಿ ನೋಡಬಹುದು. ಕಾಮದ ಸಹಜ ಪ್ರಕ್ರಿಯೆಗೆ ಸಮಾಜದ ಬೇಲಿಯನ್ನು ಮೀರುವ ಉಜ್ಜನ ಮನಸ್ಥಿತಿಯನ್ನು ಈ ಕಥೆಯಲ್ಲಿ ಕಂಡರಿಸಿದ್ದಾರೆ.

ವಿಶ್ವನಾಥನು, ನಗರದಲ್ಲಿ ವಾಸವಾಗಿದ್ದು, ಹಳ್ಳಿಯಲ್ಲಿ ತನ್ನ ಪೂರ್ವಜರ ಭೂಮಿಯನ್ನು ಮಾರಲು ಬಂದು ಅದನ್ನು ಮಾರಲಾರದೆ ಹಿಂತಿರುಗುವ ಸ್ಥಿತಿಯನ್ನು 'ಮಾರಲಾಗದ ನೆಲ' ಕಥೆಯಲ್ಲಿ ಲಂಕೇಶರವರು ನಿರೂಪಿಸಿದ್ದಾರೆ. ಆ ಹಿನ್ನೆಲೆಯಲ್ಲಿ ನಡೆಯುವ ಹಳ್ಳಿಯ ವಾತಾವರಣದ ಸ್ಥಿತಿಯನ್ನು ಈ ಕಥೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ವಿಶ್ವನಾಥನು ಊರಿಗೆ ಬರುವಾಗ ಸಂಕ್ರಪ್ಪನ ಮಗಳು ಮೈಕೈತುಂಬಿಕೊಂಡಿದ್ದ ಸಾವಂತ್ರಿಯನ್ನು ನೋಡುತ್ತಾನೆ. "ವ್ಯಕ್ತಿಗಳ ಕಾಮನೆಗಳ ಮನಸ್ಥಿತಿಗಳು ಅವಕಾಶಕ್ಕೆ ಕಾಯುತ್ತಿರುತ್ತವೆ, ಒಂದು ವೇಳೆ ಪರಿಸ್ಥಿತಿ ಪೂರಕವಾಗಿ ನಿಂತರೆ, ಅವುಗಳನ್ನು ಪಡೆಯದೆ ಬಿಡುವುದಿಲ್ಲ" ಎಂಬ ವಿಷಯಕ್ಕೆ ಅನುಗುಣವಾಗಿ ವಿಶ್ವನಾಥನ ಮನಸ್ಸು ಕೂಡ ಸಾವಂತ್ರಿಯ ಸಾಮಿಪ್ಯಕ್ಕೆ ಹಾತೊರೆಯುತ್ತದೆ.

ಒಂದು ದಿನ ಮಾದೇವಣ್ಣನ ಮಗ ಆಕ್ರಮಣಕ್ಕೆ ಸಾವಂತ್ರಿಯು ಜೋರಾಗಿ ಕಿರಿಚಿಕೊಂಡು ಅಳುತ್ತಾಳೆ. ಅಲ್ಲಿಗೆ ಬಂದಂತಹ ವಿಶ್ವನು ಅವಳಿಗೆ ಸಮಾಧಾನ ಮಾಡಲು ಮುಂದಾಗುತ್ತಾನೆ. ಜೊತೆಗೆ ಮಾದೇವಣ್ಣನ ಮಗನು ನಿನ್ನ ಮೇಲಿನ ಕೃತ್ಯಕ್ಕೆ ನಿಜವಾದ ಕಾರಣನಂತೆ ಕಾಣುವುದಿಲ್ಲವೆಂದು ಸಮಾಧಾನ ಮಾಡಲು ಮುಂದಾಗುತ್ತಾನೆ. ಹಾಗೆಯೇ ಗೊತ್ತಿಲ್ಲದಂತೆ ಮಾದೇವಣ್ಣನ ಮಗನ ಪರವಾಗಿಯೂ ವಾದಿಸುತ್ತಾನೆ. ಮುಂದುವರೆದಂತೆ ವಿಶ್ವನಾಥನು ಸಾವಂತ್ರಿಗೆ ಸಮಸ್ಯೆಗಳು ಬರುವ ರೀತಿಯಲ್ಲಿ ಹೇಳುತ್ತಾನೆ. "ಇದರಿಂದ ಏನಾಗುತ್ತೆ ಅಂತ ನಿನಗೆ ಗೊತ್ತಿಲ್ಲ ಸಾವಂತ್ರಿ, ಮಾದೇವಣ್ಣನ ಮಗ ಹೀಗ್ಮಾಡಿದ ಅಂದ್ರೆ ದೊಡ್ಡ ಪಂಚಾಯಿತಿ, ಜಗಳ ಆಗುತ್ತೆ, ಗೊತ್ತಾಯ್ತು, ಪರಿಸ್ಥಿತಿ ಹದಗೆಡುತ್ತೆ, ಅಂತ ಏನನ್ನೋ ಬಡಬಡಿಸಿದೆ. ಕೈ ಮಾತ್ರ ಗುಂಡಿ ಹಾಕಲು ನಿರಾಕರಿಸಿದವು. ಅವಳ ಬಗ್ಗೆ ಅನುಕಂಪ ಬಂದಿತ್ತು: ನನ್ನೂರ ಮುಗ್ಧೆ, ಹರೆಯ ತುಂಬಿ ಕಣ್ಣು ಮಬ್ಬಾದ ಗಳಿಗೆಯಲ್ಲಿ, ಗಂಡಸ್ಸಿನ ಹಿಡಿತಕ್ಕೆ ಸಿಕ್ಕು ನರಳಿ ತೊಡೆಗಳಲ್ಲಿ ಭಯ, ಆನಂದ, ಹಿಂಸೆಯಿಂದ ತತ್ತರಿಸಿಹೋಗಿ ದಿಕ್ಕು ಕಾಣದ ಮುಗ್ಧೆ,... ಗುಂಡಿ ಹಾಕಲು ಹಿಂಜರಿದ ನನ್ನ ಕೈ ಮೆಲ್ಲಗೆ ಬೆನ್ನನ್ನು ನೇವರಿಸಿದವು. ಹಾಗೆಯೇ ಸೂಕ್ಷ್ಮವಾಗಿ ನನ್ನ ಸೊಗಸಾದ ಮಾತುಗಳೊಡನೆ, ನನ್ನ ಹಸ್ತ

ಅವಳ ಎದೆಯತ್ತ ಜಾರಿದವು, ಮೊಲೆಗಳನ್ನು ಸವರುತ್ತ ತೊಟ್ಟುಗಳನ್ನು ಮೆತ್ತಗೆ ಚಿವುಟಿದವು; ಅವಳು ಅಳುತ್ತಿದ್ದಳು, ಸೆರಗು ನೆಲಕ್ಕೆ ಬಿದ್ದ ನೆದರಿರಲಿಲ್ಲ, ನೀನು ತುಂಬ ಒಳ್ಳೆಯ ಹುಡುಗಿ ಸಾವಂತ್ರಿ, ಅಳಬಾರದು, ಬೆಂಗಳೂರಿಗೆ ಬರ್ತಿಯಲ್ಲವಾ, ತುಂಬ ಮಜ ಇರುತ್ತೆ ಗೊತ್ತಾ– ತುಂಬ ಜೋಕಾಗಿರುತ್ತೆ ಅನ್ನುವಷ್ಟರಲ್ಲಿ ಅವಳ ಜಾಕೆಟ್ಟು ಪೂರ್ತಿ ಮೊಲೆಯಿಂದ ಮೇಲಕ್ಕೆ ಜಾರಿತ್ತು. “ವಿಸ್ವಣ್ಣ, ವಿಸ್ವಣ್ಣ” ಅಂತ ಬಿಕ್ಕುತಿದ್ದಳು. “ನೀನು ನನ್ನ ತಂಗಿ ಥರ ಸಾವಂತ್ರಿ, ನನ್ನ ಊರು ಜ್ಞಾಪಿಸಿಕೊಂಡಾಗಲೆಲ್ಲ ನನಗೆ ನಿನ್ನದೇ ನೆನಪು ಗೊತ್ತಾ. ಅಳಬೇಡ, ಚಿನ್ನ.” ಅವಳು ಅರ್ಧ ಮಲಗಿ, ಅರ್ಧ ನನಗೆ ಆತುಕೊಂಡು ಅಚ್ಚರಿಯಿಂದ ನೋಡುತ್ತಿದ್ದಳು. ಕಣ್ಣೀರು ಸುರಿಯುತ್ತಿತ್ತು. ತೊಡೆಗೆ ತೊಡೆ ಸೇರಿಸಿ ಕೆನ್ನೆಯನ್ನು ಅವಳ ಕೆನ್ನೆಯ ಹತ್ತಿರ ಒಯ್ದೆ; ಬಿಸಿಯುಸಿರು ಮೈ ನಡುಗಿಸಿತು. ಅಲ್ಲಿಯವರೆಗೆ ಅವಳ ಧೋರಣೆಯ ವಿಚಾರವಾಗಿ ಅನುಮಾನವಿತ್ತು; ಈಗ ತುಟಿಯ ಮೇಲೆ ಮುತ್ತಿಟ್ಟೆ, ಅವಳು ಸುಮ್ಮನಿದ್ದಳು. ಕುತ್ತಿಗೆಯನ್ನು ಅಪ್ಪಿ ತುಟಿಯಿಂದ ನೇವರಿಸಿದೆ; ಮೊಲೆಗಳ ನಡುವೆ ಮುಖ ಇಟ್ಟು ಕೆನ್ನೆ ಸವರಿದೆ.... ದೇಹದುದ್ದಕ್ಕೂ ಮಲಗಿದೆ, ಕುಕ್ಕುರಗಾಲಲ್ಲಿ ಕೂತೆ”.[೪೫]

ಮಾದೇವಣ್ಣನ ಮಗನಿಂದ ಶೋಷಣೆಗೆ ಒಳಗಾದ ಸಾವಂತ್ರಿಯನ್ನು, ಕಾಪಾಡಲು ಬಂದ ವಿಶ್ವನಾಥನು ಕೂಡ ಸಾವಂತ್ರಿಯನ್ನು “ತಂಗಿಯ ಥರ” ಎಂದು ಹೇಳುವ ಮೂಲಕ ಕಾಮದ ಮನಸ್ಥಿತಿಯಲ್ಲಿಯೇ ನೋಡುತ್ತಾನೆ. ಸಭ್ಯ ನಾಗರೀಕ ಜಗತ್ತಿನ ಪ್ರತಿನಿಧಿಯಂತೆ ವಿಶ್ವನಾಥನು ಕಂಡರೂ, ಅವಳನ್ನು ಆ ಕ್ಷಣ ಪಡೆಯುವ ಉದ್ದೇಶದಿಂದ ‘ಬೆಂಗಳೂರುನಂತಹ ಊರಿನ ಮಜ’ದ ಆಸೆ–ಆಮಿಷಗಳನ್ನು ತೋರಿಸಿ ಸಾವಂತ್ರಿಯಿಂದ ತನಗೆ ಬೇಕಾದ ದೈಹಿಕ ಕಾಮನೆಗಳ ಪೂರೈಕೆ ಮಾಡಿಕೊಳ್ಳಲು ಯತ್ನಿಸುತ್ತಾನೆ.

ಲಂಕೇಶರು ವ್ಯಕ್ತಿಯ ಮನಸ್ಸಿನ ವಿಚಾರಗಳಿಗೆ ಪ್ರಯೋಗಶೀಲರಂತೆ ಕಾಣುತ್ತಾರೆ. ‘ದಾಹ’ ಕಥೆಯಲ್ಲಿ ಹೆಂಡತಿಯನ್ನು ಕಳೆದುಕೊಂಡ ಶಿಕ್ಷಣದ ಅಧಿಕಾರಿಯಾದ ಬಸುವಿಗೆ, ಸಾಂತ್ವನ ಹೇಳಲು ಬಂದು ಪರಿಚಯವಾದ ಪದ್ಮಾಳ ಬಳಿ, ಸೆಲ್ವಿಯಾ ಜೊತೆಗಿನ ದೇಹದ ಸಂಬಂಧವನ್ನು ಹೇಳಿಕೊಳ್ಳುತ್ತಾನೆ. ತನ್ನ ನೀಚತನದ ಅರಿವನ್ನು ಮಾಡುತ್ತಾನೆ. ಆದರೂ ಪದ್ಮಾಳನ್ನು ತನ್ನ ಕಡೆ ಆಕರ್ಷಿತಳಾಗುವಂತೆ ಮಾಡುವಲ್ಲಿ ಯಶಸ್ವಿಯಾಗುತ್ತಾನೆ. ಆತನೆ ಹೇಳುವಂತೆ “ಮನುಷ್ಯ ಮೂಲಭೂತವಾಗಿ ನೀಚ.. ಅವನಲ್ಲಿನ ಪಾಪಪ್ರಜ್ಞೆ ವಿಚಿತ್ರ.... ಎಲ್ಲ ಪಾತಕಗಳನ್ನೊಳಗೊಂಡ ಆತ್ಮಗಳೂ ಒಳ್ಳೆಯ ಜೀವಗಳನ್ನು ಕೊಲ್ಲುತ್ತವೆ” ಎಂಬುದಾಗಿದೆ. ಸೆಲ್ವಿಯಾ ಟೀಚರ್‌ಳ ಜೊತೆಗಿನ ದೇಹ ಸಂಬಂಧದ ಬಗ್ಗೆ ಹೇಳುವಾಗ “ಆಕೆಯ ಮೃದುಮನೋಹರ ದೇಹಕ್ಕೆ ನಾನು ಸುಖ ತಂದೆ, ಅವಳಿಗೆ ವರ್ಗಾ ಆಯಿತು. ಅವಳನ್ನು ಪೀಡಿಸುತ್ತಿದ್ದವರಿಂದ ಬಿಡುಗಡೆಯಾಯಿತು. ಈ ಸಂಕೀರ್ಣ ಸ್ಥಿತಿಯೇ ನನ್ನಲ್ಲಿ ವ್ಯಂಗ್ಯ, ಹೆದರಿಕೆ ಹುಟ್ಟಿಸಿತು. ಯಾವುದೇ ತೊಂದರೆ ಕೊಡದೆ, ಬೆದರಿಕೆ ಹಾಕದೆ ನಾನು ಯಶಸ್ವಿಯಾಗಿದ್ದೆ.”[೪೬] ಎನ್ನುವ ಬಸುವಿನ ಮಾತುಗಳು ಸಹಜವಾದ ದೈಹಿಕ ಕಾಮನೆಗಳನ್ನು

ಪೂರೈಸಿಕೊಳ್ಳುವ ಅಧಿಕಾರಿಯುತ ವ್ಯಕ್ತಿಯ ನಡವಳಿಕೆಗಳು ಪದ್ಮಾಳ ಜೊತೆ ಅನಾವರಣಗೊಂಡರೂ ಪದ್ಮಾಳು ಅವನ ಆಕರ್ಷಣೆಗೆ ಒಳಗಾಗುವುದು ಪ್ರಮುಖವಾದ ವಿಚಾರವಾಗಿದೆ.

ಪುರುಷನ ಅಹಂಗಳು, ಮತ್ತೊಬ್ಬರನ್ನು ದೈಹಿಕವಾಗಿ ಮಾನಸಿಕವಾಗಿ ಕೊಲ್ಲುತ್ತವೆಂಬುದಕ್ಕೆ "ಸ್ಟೆಲ್ಲಾ ಎಂಬ ಹುಡುಗಿ" ಕಥೆಯಲ್ಲಿ ಬರುವ ಸುಬ್ಬಣ್ಣ ಮತ್ತು ಪಾರ್ವತಿಯ ಸಂಸಾರವು ಉದಾಹರಣೆಯಾಗಿದೆ. ಸುಬ್ಬಣ್ಣನು ಕಂಟ್ರಾಕ್ಟರ್ ಅಬೂಬಕರ್‌ನ ಗೆಳೆಯನಾಗಿರುತ್ತಾನೆ. ಅಬೂಬಕರ್ ಶ್ರೀಮಂತ ಜೊತೆಗೆ ಕುಡಿಯುವ, ಇಸ್ಪೀಟ್ ಆಡುವ ಚಟವಿತ್ತು. ಇದರ ಪರಿಣಾಮದಿಂದ, ಒಂದು ದಿನ ಅಬೂಬಕರ್ ಮತ್ತು ಸುಬ್ಬಣ್ಣನಿಗೆ ಮಾತಿಗೆ ಮಾತು ಬೆಳೆದು, 'ಒಂದು ಸಲ, ನಿನ್ನ ಹೆಂಡ್ತಿ ಹತ್ರ ಮಲಗ್ತೀನಿ' ಎನ್ನುತ್ತಾನೆ. ಮುಂದೆ ಒಂದು ದಿನ ಅಬೂಬಕರ್‌ನು, ಸುಬ್ಬಣ್ಣನ ಮನೆಗೆ ನುಗ್ಗಿ, ಸುಬ್ಬಣ್ಣನನ್ನು ಕಟ್ಟಿ ಹಾಕಿ, ಅವನೆದುರೆ ಪಾರ್ವತಿಯನ್ನು ದೈಹಿಕವಾಗಿ ಬಲವಂತದಿಂದ ಅನುಭವಿಸುತ್ತಾನೆ. ಗಂಡಿನ ಜಿದ್ದುಗಳಿಂದ ಹೆಣ್ಣು ಬಲಿಯಾಗುವ ವಿಚಿತ್ರ ಪರಿಸ್ಥಿತಿ ಈ ಕಥೆಯಲ್ಲಿದೆ. ಪಾರ್ವತಿ ಸಾಯುತ್ತಾಳೆ, ಸುಬ್ಬಣ್ಣನಿಗೆ ಅಬೂಬಕರ್‌ನ ಜಮೀನು ಸಿಗುತ್ತದೆ. ಈ ಘಟನೆಯಾದ ಎಷ್ಟೋ ವರ್ಷಗಳ ನಂತರ ಸುಬ್ಬಣ್ಣನಿಗೆ, ಸಾಯುವ ಮುಂಚೆ ಪಾಪಪ್ರಜ್ಞೆ ಕಾಡಿ ನರಳಿ ಸಾಯುತ್ತಾನೆ. ಅಹಂಕಾರಗಳು, ಜಿದ್ದುಗಳು ವ್ಯಕ್ತಿಯ ನಾಶಕ್ಕೆ ದಾರಿ ಮಾಡಿಕೊಡುತ್ತವೆ ಎಂಬುದಕ್ಕೆ ಈ ಕಥೆಯು ಸಾಕ್ಷಿಯಾಗುತ್ತದೆ.

ಕಳೆದು ಹೋದ ದೈಹಿಕ ಸಂಬಂಧಗಳನ್ನು, ಆಕ್ರಮಣಗಳನ್ನು ನೆನೆಯುತ್ತಾ ಅಹಂ ಪಡುವ ವ್ಯಕ್ತಿಯಾಗಿ 'ದೇವಿ' ಕಥೆಯ ಅಧಿಕಾರಿ ಚಂದ್ರಪ್ಪನು ಕಾಣುತ್ತಾನೆ. ತನ್ನ ಮನೆಯಲ್ಲಿ ಹೆಂಡತಿ ಮತ್ತು ಅತಿಥಿಗಳ ನಡುವೆ

"ಬಾಗಲಕೋಟೆಯಲ್ಲಿ ಅಧಿಕಾರಿಯಾಗಿದ್ದಾಗ, ತಮ್ಮ ಆಫೀಸಿನ ಹತ್ತಿರದ ಶಾಲೆಯ ಜಾನೆಟ್-ಹೌದು, ಆಕೆಯ ಹೆಸರು ಜಾನೆಟ್ ಗೀತಾ, ತಡವರಿಸುತ್ತಾ ಕತೆ ಮುಗಿಸಿದ್ದ, 'ಅದು ನನ್ನ ನಿಜವಾದ ಮೊದಲ ರಾತ್ರಿ'"[೭] ಎನ್ನುತ್ತಾನೆ. ಕಳೆದ ದೈಹಿಕ ಕಾಮನೆಗಳ ಪರವಾಗಿ ಹೆಮ್ಮೆಯಿಂದ ಎಲ್ಲರ ಬಳಿ ಹೇಳುತ್ತಾನೆ. ಗಂಡಿನ ದರ್ಪದ ಪ್ರತೀಕ ಚಂದ್ರಪ್ಪನು ಕಾಣುತ್ತಾನೆ.

ಸೇಡು ಮನುಷ್ಯನ ಸಹಜವಾದ ವಿಷಯ. ಹೆಣ್ಣಿನ ಮೇಲಿನ ಸೇಡಿಗಾಗಿ ಗಂಡು ಮತ್ತೊಬ್ಬ ಹೆಣ್ಣಿನ ಜೊತೆ ಸಂಬಂಧವನ್ನು ಹೊಂದುವುದು ವಿಚಿತ್ರವಾದುದು. ಇಂಥ ಅಂಶ ಲಂಕೇಶರ 'ಚಂದ್ರಪ್ಪಗೌಡರಿಗೆ ಬಿದ್ದ ಕನಸು' ಎಂಬ ಕಥೆಯಲ್ಲಿ ಬರುತ್ತದೆ. ಚಂದ್ರಪ್ಪಗೌಡನು ಊರಿನ ಪ್ರತಿಷ್ಠಿತ ವ್ಯಕ್ತಿಯಾಗಿರುತ್ತಾನೆ. ರತ್ನಳನ್ನು ಇಷ್ಟ ಪಟ್ಟು ಮದುವೆಯಾಗಿರುತ್ತಾನೆ. ಕಾಲ ಕ್ರಮೇಣದಲ್ಲಿ ಚಂದ್ರಪ್ಪಗೌಡನು ತನ್ನ ಜಮೀನಿನ ಕಡೆ

ಗಮನ ಹರಿಸುತ್ತಾನೆ. ರತ್ನಾಳು ಸಮಾಜಸೇವೆಗೆ ನಿಲ್ಲುತ್ತಾಳೆ. ಹೆಂಡತಿಯ ಶೀಲದ ಬಗ್ಗೆ ಅನುಮಾನಗೊಂಡ ಚಂದ್ರಪ್ಪಗೌಡನು ಬುದ್ಧಿ ಭ್ರಮಣೆಗೆ ಒಳಗಾಗುತ್ತಾನೆ. ತನ್ನ ದೈಹಿಕ ಸಾಮರ್ಥ್ಯವನ್ನು ಮನೆಯ ಕೆಲಸಗಾರಳಾದ ಮಂಜಿಯನ್ನು ಆಲಿಂಗನ ಮಾಡಿಕೊಳ್ಳುತ್ತಾನೆ. ವಿಚಿತ್ರವಾಗಿ ಸುಖಿಸುತ್ತಾನೆ. ಪುರುಷನ ಅಹಂಗೆ ಪೆಟ್ಟಾದರೆ ಅದರ ಸರಿಪಡಿಸುವಿಕೆಗಾಗಿ ಮತ್ಯಾರೋ ಬಲಿಪಶುವಾಗುವ ರೀತಿ ಈ ಕಥೆಯಲ್ಲಿ ಬರುತ್ತದೆ.

ಗಂಡಸ್ಸಿನ ಮುದಿ ವಯಸ್ಸಿಗೂ ದೈಹಿಕ ಚಪಲ ಕಡಿಮೆಯಾಗುವುದಿಲ್ಲ ಎಂಬುದನ್ನು ಪ್ರಧಾನವಾಗಿಟ್ಟುಕೊಂಡು ಲಂಕೇಶರು 'ಮಂಜು ಕವಿದ ಸಂಜೆ' ಕಥೆಯನ್ನು ಬರಿದಿದ್ದಾರೆ. ಸಂಬಂಧಗಳು, ಮದುವೆಯ ಬಂಧನಗಳು ಮನುಷ್ಯ ನಿರ್ಮಿಸಿಕೊಂಡಿರುವ ಕಟ್ಟಳೆಗಳು. ಅವುಗಳನ್ನು ಯಾವಾಗ ಬೇಕಾದರೂ ಮೀರಬಹುದು ಎಂಬುದಕ್ಕೆ ಪ್ರಭುದೇವನ ಮತ್ತು ಗೌರಮ್ಮಳ ಸಂಸಾರ ಕಾಣುತ್ತದೆ.

"ಮದುವೆ ಎನ್ನುವುದು ಊಟದಂತೆ ನಿತ್ಯ ಸಂಭೋಗ ಸಿಕ್ಕಲಿ ಎಂದು ಮಾಡಿಕೊಂಡ ಏರ್ಪಾಟು, ಅನ್ನಿಸಿದರೂ ಆತ ಹಾಗೆ ಹೇಳಲು ಹಿಂಜರಿದ. ಯಾಕೆಂದರೆ ಗೌರಮ್ಮ ಕೂಡಲೆ ವಾದಕ್ಕೆ ಇಳಿದು, 'ಮದುವೆ ಸ್ವರ್ಗದಲ್ಲಿ ಮುಂಚೆಯೇ ಗೊತ್ತಾಗಿರುತ್ತದೆ' ಎಂದೋ, 'ಅದೊಂದು ಪವಿತ್ರ ಸಂಬಂಧ' ಎಂದು ವಾದಿಸಲು ಆರಂಭಿಸಿದ್ದಳು."೪೮ ತನ್ನ ಕಂಪನಿಯಲ್ಲಿ ಬರುವ ಒಂದೊಂದು ಹೆಣ್ಣಿನ ಸಹವಾಸದಿಂದ ತಾನು ಹಾಗೂ ತನ್ನ ವ್ಯವಹಾರಗಳ ಅಧಃಪತನವನ್ನು ಈ ಕಥೆಯಲ್ಲಿ ತರುತ್ತಾರೆ.

ದೈಹಿಕ ಕಾಮನೆಗಳು, ಸಭ್ಯ ನಾಗರಿಕನಂತೆ ಮುಖವಾಡಗಳನ್ನು ಧರಿಸಿದರೂ ಅಸಹಜವಾದ ಗಂಡಿನ ಬಯಕೆಗಳು ಅವನ ಅಧಃಪತನಕ್ಕೂ ಕಾರಣವಾಗುತ್ತವೆಂಬುದನ್ನು ಲಂಕೇಶರ ಒಂದೊಂದು ಕಥೆಯನ್ನು ಅಧ್ಯಯನ ಮಾಡಿದಾಗ ತಿಳಿಯುತ್ತದೆ.

ಅನಂತಮೂರ್ತಿಯವರ ಕಥೆಗಳಲ್ಲಿನ ಪ್ರಕೃತಿ ಸಹಜವಾದ ಕಾಮದ ಪರಿಕಲ್ಪನೆ ಪುರುಷನಲ್ಲಿ ಸಹಜವಾಗಿ ಮೂಡುತ್ತವೆಂಬುದನ್ನು 'ಘೋಜರಾಜ'. 'ಜರತ್ಕಾರು' ಮತ್ತು 'ಪ್ರಶ್ನೆ' ಕಥೆಗಳ ಮೂಲಕ ನಿರೂಪಿಸುತ್ತಾರೆ.

'ಘೋಜರಾಜ' ಕಥೆಯಲ್ಲಿನ ರಾಜಣ್ಣನು ಮದುವೆಯಾಗಲು ಭಯ ಪಡುತ್ತಾನೆ. ಆದರೆ ಮದುವೆಯ ಮುಂಚಿನ ದೈಹಿಕ ಸಂಬಂಧಕ್ಕೆ ಆತುರಪಡುವ ವ್ಯಕ್ತಿಯಾಗಿದ್ದಾನೆ. ಸಹಜವಾದ ವಯಸ್ಸಿನ ಕಾಮನೆಗಳನ್ನು ಅದುಮಿಡಲು ಸಾಧ್ಯವಿಲ್ಲವೆಂಬಂತೆ ವರ್ತಿಸುತ್ತಾನೆ. ತನ್ನಲ್ಲಿ ಬರುತ್ತಿರುವ ಸಹಜವಾದ ಕಾಮದ ಮನಸ್ಸಿಗೆ ಚಿಂತಾಕ್ರಾಂತನಾಗುತ್ತಾನೆ. ಕಲ್ಪನೆಯಲ್ಲಿಯೇ ಕಾಮದ ಅನುಭವವನ್ನು ಪಡೆಯುತ್ತಾನೆ.

ತನ್ನ ಹೆಡ್‌ಮಾಸ್ತರ್‌ರನ ಮಗಳು ಅರುಂಧತಿಯ ಜೊತೆಯಲ್ಲಿನ ಸಹವಾಸವನ್ನು ತನ್ನದೇ ಆದ ರೀತಿಯಲ್ಲಿ ವ್ಯಾಖ್ಯಾನಿಸುತ್ತಾನೆ. " ಲಘುವಾಗಿ ಏನನ್ನಾದರೂ ಕಲ್ಪಿಸತೊಡಗಿದರೆ ನಿದ್ದೆ ಬರಬಹುದೆಂದು ಪಾರ್ಕಿಗೆ ಅರುಂಧತಿಯ ಜೊತೆ ಹೋದ. ಅರುಂಧತಿಯ

ಮೋರೆ ಲೈಬ್ರರಿಯಲ್ಲಿ ಮೊನ್ನೆ ಎದುರು ಕುಳಿತಿದ್ದವಳ ಬಟ್ಟಲು ಮುಖದಷ್ಟು ಚೆನ್ನಾಗಿಲ್ಲದಿದ್ದರೇನಂತೆ– ಅವಳ ಎದೆ ಮೃದುವಾಗಿ ಉಬ್ಬಿ ಬೆಳೆದಿದೆ ಎಂದು ಸಮಾಧಾನಪಟ್ಟ, ಹಸಿರು ಹುಲ್ಲಿನ ಮೇಲೆ ಹಿತವಾದ ಬೆಳದಿಂಗಳು ಚೆಲ್ಲಿದಾಗ ಅವಳ ಕೋಮಲವಾದ ಮೈ ತಬ್ಬಿ ಮೃದು ಕೈಯನ್ನು ಮೃದುವಾಗಿ ಹಿಸುಕಿದರೆ– ಹುಟ್ಟಿದ ಮಕ್ಕಳಿಗೆ ಹಾರ್ಲಿಕ್ಸ್ ತರಲು ಸಂಬಳ ಸಾಲದು ಎನ್ನಿಸಿತು– ಹಾಗಾದರೆ ಅರುಂಧತಿ ಕಳುಹಿಸಿದ ಕೀಟ್ಸ್– ಕವನಗಳ ಉಡುಗೊರೆಗೆ ಬದಲಾಗಿ ಸಂತಾನ ನಿಯಂತ್ರಣದ ಬಗ್ಗೆ ಒಂದು ವೈಜ್ಞಾನಿಕ ಗ್ರಂಥವನ್ನು ಕಳುಹಿಸಿದರೆ ಹೇಗೆ?– ಸುಖಕ್ಕೆ ಸುಖ–ಜೊತೆಗೆ ದೇಶ ಸೇವೆ, (ದೇಶಸೇವೆಯೇ ಈಶಸೇವೆ!) ಅರುಂಧತಿ ಈಗಲೇ ಪೆಚ್ಚು ಮೋರೆ–ಮಕ್ಕಳಾದ ಮೇಲೆ ಅಲಮೇಲಮ್ಮ ನಂತಾದರೆ–ಸಂತಾನ ನಿಯಂತ್ರಣದಲ್ಲಿ ತಪ್ಪೇನುಎಂದು ಪಾರ್ಕಿನಲ್ಲಿ ಮತ್ತೆ ಅವಳನ್ನು ತಬ್ಬಿ ಬೆನ್ನು ಸವರಿದ."[೪೯]

ರಾಜಣ್ಣನು ಎಷ್ಟೋ ಬಾರಿ ತನ್ನ ಅರುಂಧತಿಯ ಸಂಬಂಧ ಸಹೋದರ–ಸಹೋದರಿಯ ಸಂಬಂಧವೆಂದು ಹೇಳಿಕೊಂಡರೂ ಸಹಜವಾದ ಕಾಮವನ್ನು ಹತ್ತಿಡಲು ಸಾಧ್ಯವಾಗುವುದಿಲ್ಲ. ಹಾಗೆಯೇ ಒಂದು ವೇಳೆ ಅರುಂಧತಿಯ ಜೊತೆ ಸಹವಾಸ ಮಾಡಿದರೆ ಮದುವೆಯ, ಮಕ್ಕಳ, ಸಂಸಾರದ ಭಯ. 'ಸಂತಾನ ನಿಯಂತ್ರಣದ ಅವಶ್ಯಕತೆಯು ಬೇರೆಯವರ ಜೊತೆ ಮದುವೆಯಾಗಿರುವ ಹೆಂಡತಿಯ ಜೊತೆ ದೈಹಿಕ ಸಂಬಂಧವಾದರೆ ಇರಲಾರದು' ಎಂದು ರಾಜಣ್ಣ ಚಿತ್ರವನ್ನು ಕಲ್ಪಿಸಕೊಳ್ಳತೊಡಗುತ್ತಾನೆ. ಪಕ್ಕದ ಮನೆಯಲ್ಲಿ ವಾಸಿಸುತ್ತಿದ್ದ ಇನ್ಸ್‌ಪೆಕ್ಟರ್‌ನ ಹೆಂಡತಿ ಸ್ನಾನಕ್ಕೆ ಹೋದಾಗ ಅವಳ ಜೊತೆ ತಾನು ದೈಹಿಕ ಸಂಬಂಧವೇರ್ಪಡಿಸಿಕೊಂಡರೆ ಯಾವುದೇ ಸಮಸ್ಯೆ ಇಲ್ಲವೆಂದು ತೀರ್ಮಾನಿಸಿಕೊಳ್ಳುತ್ತಾನೆ. ಆದರೆ ಅದು ಕೂಡ ಸಾಧ್ಯವಾಗುವುದಿಲ್ಲ.

ಗಂಡಿನ ಸಹಜವಾದ ವಯಸ್ಸಿನ ಮನಸ್ಥಿತಿಯನ್ನು ರಾಜಣ್ಣನ ಪಾತ್ರದ ಮೂಲಕ ಅನಂತಮೂರ್ತಿಯವರು ಈ ಕಥೆಯಲ್ಲಿ ವಿವರಿಸುತ್ತಾರೆ. ಯೌವ್ವನದ ವ್ಯಕ್ತಿ ತನ್ನಲ್ಲಿರುವ ಪ್ರಕೃತಿ ಸಹಜವಾದ ಸ್ಥಿತಿಗೆ ಹೇಗೆಲ್ಲಾ ಯೋಚಿಸುತ್ತಾನೆಂಬುದನ್ನು ಈ ಕಥೆಯ ಮೂಲಕ ಕಟ್ಟಿಕೊಟ್ಟಿದ್ದಾರೆ. ಮುಂದುವರೆದಂತೆ ಒಂದಷ್ಟು ಭಯ ಕಟ್ಟುಪಾಡುಗಳು ಇಲ್ಲದಿದ್ದರೆ ಆತನು ದೈಹಿಕ ಸಂಬಂಧವನ್ನು ಹೇಗೆಲ್ಲಾ ಬೆಳೆಸುತ್ತಾನೆಂಬುದನ್ನು 'ಜರತ್ಕಾರು' ಕಥೆಯ ಮೂಲಕ ಹೇಳುತ್ತಾರೆ.

ತಿಮ್ಮಪ್ಪನು 'ಜರತ್ಕಾರು' ಕಥೆಯ ಪ್ರಧಾನ ಪಾತ್ರವಾಗಿರುತ್ತಾನೆ. ಕಥೆಗಾರನು, ಕಥೆಯನ್ನು ಆರಂಭಿಸುತ್ತಿದ್ದಂತೆ 'ಪುರಾಣನಾಮ ಚೂಡಾಮಣಿ' ಕಥೆಯೊಂದುನ್ನು ತರುತ್ತಾನೆ. ಭೃಗುವಿನ ವಂಶದ ಜರತ್ಕಾರುವಿನ ಪಾತ್ರವನ್ನು ತಂದು, ಅವನಿಗೆ ಮದುವೆಯಾಗಿ ಸಂತಾನಭಾಗ್ಯ ಲಭಿಸಿದ ಮೇಲೆ ಮುಕ್ತಿ ಎಂದು ಪೂರ್ವಜರು ಹೇಳುತ್ತಾರೆ ಎಂಬುದನ್ನು ಕಥೆಯ ಪಾತ್ರವಾದ ತಿಮ್ಮಪ್ಪನ ಪಾತ್ರಕ್ಕೆ ಸಮೀಕರಿಸುತ್ತಾರೆ.

ತಿಮ್ಮಪ್ಪನು ಚಿಕ್ಕ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡು ತಾಯಿ ರುಕ್ಮಿಣಿ ನೆರಳಿನಲ್ಲಿ ಬೆಳೆಯುತ್ತಾನೆ. ರುಕ್ಮಿಣಿಯು ಪಿತ್ರಾರ್ಜಿತ ಆಸ್ತಿಯ ಪರಿಣಾಮದಿಂದ ಮಗನನ್ನು ಚೆನ್ನಾಗಿ ಸಾಕುತ್ತಿರುತ್ತಾಳೆ. ಆಕೆ ಮಡಿವಂತೆ, ಮಗ ತಿರುಪತಿ ತಿಮ್ಮಪ್ಪನ ಆಶೀರ್ವಾದದಿಂದ ಜನಿಸಿದ್ದಾನೆಂದೇ ತಿಳಿದಿರುತ್ತಾಳೆ. ಈಕೆಯ ವೈಧವ್ಯದ ಮಡಿವಂತಿಕೆಯ ಕಾರಣಕ್ಕಾಗಿ ಯಾವ ವಿದ್ಯಾವಂತ ಹೆಣ್ಣು ಅವಳ ಮನೆಯಲ್ಲಿರಲು ಒಪ್ಪುತ್ತಿರಲಿಲ್ಲ. ಕಮಲ ಎಂಬ ಎಸ್.ಎಸ್.ಎಲ್.ಸಿ. ಓದಿರುವ ಹುಡುಗಿಯನ್ನು ಮನೆಯಲ್ಲಿ ಕೆಲಸಕ್ಕೆ ಸೇರಿಸಿಕೊಂಡಿರುತ್ತಾಳೆ. ಆಕೆ ತಿಮ್ಮಪ್ಪ ಬರೆದದ್ದನ್ನೆಲ್ಲ ಇವಳೇ ಟೈಪ್ ಮಾಡುವ ಕೆಲಸದ ಜೊತೆಗೆ ಮನೆಯ ಕೆಲಸವನ್ನು ಮಾಡಿಕೊಂಡಿರುತ್ತಾಳೆ.

ತಿಮ್ಮಪ್ಪನಿಗೆ ಹತ್ತನೇ ವಯಸ್ಸಿನಲ್ಲಿದ್ದಾಗ ತಿರುಪತಿಗೆ ರೈಲಿನಲ್ಲಿ ಬರುವಾಗ ಕಾಮದ ಚಿಗುರು ಹೊಡೆಯುತ್ತದೆ. ತಿಮ್ಮಪ್ಪನು ಬೆಳೆದಂತೆ, ಪ್ರತಿನಿತ್ಯ ಮೂಗಿನ ತನಕ ಕುಡಿದು, ಯಾವ ಕೆಲಸಕ್ಕೂ ಹೋಗದೆ ಸೂಳೆಯರ ಸಹವಾಸದಲ್ಲಿರುತ್ತಾನೆ. ಒಮ್ಮೆ ಕಮಲಳನ್ನು ತನ್ನನ್ನು ಕೂಡುವಂತೆ ಹೇಳಿ ಅವಳಿಂದಲೂ ಸುಖವನ್ನು ಪಡೆಯುತ್ತಾನೆ. ಹೀಗೆಯೇ ಒಂದು ದಿನ ರುಕ್ಮಿಣಿಗೆ ತನ್ನ ಮಗನ ಸಹವಾಸದಿಂದ ಕಮಲಳು ಗರ್ಭಧರಿಸಿದ್ದಾಳೆಂದು ತಿಳಿಯುತ್ತದೆ. ಕಾಲಕ್ರಮೇಣ ರುಕ್ಮಿಣಿ ಸಾಯುವಾಗ ತಿಮ್ಮಪ್ಪನು ಕಮಲಳನ್ನು ಮದುವೆಯಾಗುವಂತೆ ತಿಳಿಸಿ ಸಾಯುತ್ತಾಳೆ. ಅಂತಿಮವಾಗಿ ತಿಮ್ಮಪ್ಪನು ಕಮಲಳ ಜೊತೆಯಲ್ಲಿಯೇ ಇರುವಂತೆ ಆಗುತ್ತದೆ. 

ಅನಂತಮೂರ್ತಿಯವರ 'ಘೋಜರಾಜ' ಕಥೆಯಲ್ಲಿ ರಾಜಣ್ಣನ ದೈಹಿಕ ಕನಸನ್ನು ಕಾಣುವಂತೆ ಮಾಡಿದರೆ, 'ಜರತ್ಕಾರು'ವಿನಲ್ಲಿ ತಿಮ್ಮಪ್ಪ ಅದರ ಅನುಭವವನ್ನು ಪಡೆಯುವಂತೆ ಮಾಡಿದ್ದಾರೆ. ಆದರೆ 'ಪ್ರಶ್ನೆ' ಕಥೆಯಲ್ಲಿ ರಂಗನ ಪಾತ್ರದಲ್ಲಿ ವಿವಾಹಕ್ಕೂ ಮುನ್ನ ಲಚ್ಚಿಯ ಜೊತೆಯಲ್ಲಿ, ವಿವಾಹ ಬಂಧನದ ಮೂಲಕ ಶಾರದೆಯ ಜೊತೆ, ಕಾಮದ ಬಯಕೆ ಈಡೇರಿಸಿಕೊಳ್ಳಲು ಪ್ರಯತ್ನಿಸುವ ವ್ಯಕ್ತಿಯಾಗಿ ಚಿತ್ರಿಸಿದ್ದಾರೆ.

ಅನಂತಮೂರ್ತಿಯವರು, 'ಪ್ರಶ್ನೆ'ಯ ಕಥೆಯ ಮೂಲಕ ದೈಹಿಕ ಬದುಕಿನ ಅಸ್ತಿತ್ವವನ್ನು ಹುಡುಕುವ ಪ್ರಯತ್ನವನ್ನು ಮಾಡಿದ್ದಾರೆ. ರಂಗನಲ್ಲಿ ಲಚ್ಚಿಯ ಸುಖವನ್ನು ಶಾರದೆಯ ಮೂಲಕ ಕೊಡು ಎನ್ನುವುದು ಸರಿಯಲ್ಲ ಎಂಬುದನ್ನು ತರುತ್ತಾರೆ. ಹೆಣ್ಣಿನ ಸಂಗ ಮಾಡುವಾಗ ಏನೂ ಹೇಸಿಗೆಯಲ್ಲ ವೆಂಬ ಚಲುವು ಲಚ್ಚಿಯದು ಎಂದು ರಂಗನು ತಿಳಿದಿರುತ್ತಾನೆ. ಲಚ್ಚಿ ಪೂರ್ತ ಹೆಣ್ಣು, ಆದರೆ ಶಾರದೆ ಹಾಗಲ್ಲ. "ಶಾರದೆ ಬಟ್ಟೆ ಬಿಚ್ಚಿದರೂ ಬೆತ್ತಲೆಯಾಗುವುದಿಲ್ಲ. ಬಲಿಗೆ ಹೋಗುವ ಪ್ರಾಣಿಯಂತೆ ಕಾಣುತ್ತಾಳೆ. ಲಚ್ಚಿ ಬಟ್ಟೆ ತೊಟ್ಟರೂ ಬೆತ್ತಲೆ. ಒಬ್ಬಳನ್ನು ಹಗಲೆಂದು, ಆತ್ಮದ ಸಹವಾಸಕ್ಕೆಂದು ದೇವರು ಸೃಷ್ಟಿಸಿದ; ಇನ್ನೊಬ್ಬಳನ್ನು ಕತ್ತಲಿನ ಸುಖಕ್ಕೆಂದು ಸೃಷ್ಟಿಸಿದ. ಅದಿದ್ದರೆ ಇದಿಲ್ಲ; ಇದಿದ್ದರೆ ಅದಿಲ್ಲ; ಬಟ್ಟೆ ಕಳೆದ ಮೇಲೆ ಆ ಹೆಣ್ಣು, ಈ ಹೆಣ್ಣು, ಎಲ್ಲ ಹೆಣ್ಣು ಒಂದೆ ಎಂದುಕೊಂಡಿದ್ದೆ. ನಾನೂ ಸಂಪೂರ್ಣ ಎಂದೂ ಬೆತ್ತಲೆಯಾದ್ದಿಲ್ಲ. ಆಗಬೇಕು, ಒಂದು ದಿನ ಆಗಿಬಿಡಬೇಕು.

ಎಲ್ಲ ತೆಗೆದು ಒಗೆದು, ತೆಗೆದೆ, ಒಗೆದೆ....ಬೆತ್ತಲೆಯಾಗಲಿಲ್ಲ. ಶಾರದೆಗೆ 'ಲಚ್ಚಿ ಕೊಡುವ ಸುಖ ನೀನು ಕೊಡು' ಎಂದು ಪೀಡಿಸುವುದು ಮೂರ್ಖತನವಿರಬಹುದು. ನಾಲ್ಕು ಜನರನ್ನು ಸುಖಪಡಿಸಬೇಕೆನ್ನುವ ಅಸೆಯಿರುವ ಹುಡುಗಿ ಲಚ್ಚಿ. ಸ್ನಾನ ಮಾಡುವಾಗ ಒಂದು ದಿನ ಕಂಡುಬಿಡ್ತ ಮಾರಾಯರೆ ಎಂದು ನಾಚಿದಳು. ನಾಳೆ ಬಂದು ಎಣ್ಣೆ ನೀರು ಹಾಕಲಾ, ಕಣ್ಣು ಉರಿಯುತ್ತದೆಂದಿರಿ ಎರೆದುಕೊಳ್ಳಿಯಯ್ಯ ಎಂದಳು. ಕಾಲೊತ್ತಿದಳು. ನೀವು ಜಗಿದ ತಾಂಬೂಲ ಬಾಯಿಯಲ್ಲಿಡಿ ಎಂದಳು. ಬಾಯಿಯನ್ನು ಸ್ವಲ್ಪ ತೆರೆದು ಕೇಳಿದಳು. ನನ್ನನ್ನ ಪೂರ್ತ ಎಂಜಲು ಮಾಡಿ ಎಂದಳು. ನಿಮ್ಮ ಎಂಜಲು ನಾನು ಎಂದಳು. ದೇವರ ಹೆಣ್ಣು ಇವಳು. ಊರ್ವಶಿಯಂತೆ ನೀತಿ ಅನೀತಿಗೆ ಅತೀತಳು– ನಿರ್ದೋಷಿ. ಇವಳ ಸಂಗ ಮಾಡಿದ ಮೇಲೆ ಕಾದ ನೆಲದ ಮೇಲೆ ಶ್ರಾವಣದ ಮಳೆ ಬಿದ್ದಾಗ ಬರುವ ಮಣ್ಣಿನ ವಾಸನೆಯಂತೆ."[೫೦]

ರಂಗನು ಇಷ್ಟ ಪಡುತ್ತಿದ್ದ ಶಾರದೆಯು, ಕುರುಡು ಮಾವನಾದ ಶಂಕರನ ಮನೆಯಲ್ಲಿ ಸೇವೆ ಮಾಡಿಕೊಂಡು ಇರುತ್ತಾಳೆ. ಲಚ್ಚಿ ಕುಟುಂಬ ಜಮೀನುದಾರ ಶಂಕರ ಆಸರೆಯಲ್ಲಿರುತ್ತದೆ. ಲಚ್ಚಿಗೆ ಸಹಜವಾಗಿ ತನ್ನ ದೇಹವನ್ನು ಒಡೆಯನಾದ ರಂಗನಿಗೆ ನೀಡುವುದು ಸಹಜವಾದುದು ಎಂದು ತಿಳಿದಿರುತ್ತದೆ. ಶಾರದೆ ವಿಭಿನ್ನ ಹೆಣ್ಣಾಗಿ ರಂಗನಿಗೆ ಕಾಣಿಸತೊಡಗುತ್ತಾಳೆ. ಒಮ್ಮೆ "ದನಕಾಯುವ ಹುಡುಗನೊಬ್ಬ ಜೊತೆಗಾತಿಯೊಬ್ಬಳೊಡನೆ ತುಂಗೆಯ ಮರಳಿನ ಮೇಲೆ ತಬ್ಬಿ ಮಲಗಿದ್ದನ್ನು ನೋಡಿದ ರಂಗ ಹೂವಾರಿಸುತ್ತಿದ್ದ ಶಾರದೆಯನ್ನು ಹಿಡಿದೆಳೆದಿದ್ದ; ಕೆಣಕಿದ್ದ. ಅತ್ತು ಬಿಟ್ಟಳು ಶಾರದೆ, ತಾನೊಬ್ಬ ಮಹಾಪಾತಕಿ, ಹೆಣ್ಣಿನ ದೇಹ ಬಯಸುವ ಕಾಮುಕಿ, ಎನ್ನುವ ಭಾವನೆ ಬರುವಂತೆ ಮಾಡಿದ್ದಳು."[೫೧] ಆದರೂ ರಂಗನಿಗೆ ಶಾರದೆಯ ಮೇಲೆ ಒಲುವು ಇರುತ್ತದೆ. ತಾನು ಗಂಡು ಕಪ್ಪೆಯಾಗಿ, ಶಾರದೆ ಹೆಣ್ಣು ಕಪ್ಪೆಯಾಗಿದ್ದರೆ ಹೇಗಿರುತ್ತಿತ್ತು. ತಾನು ಮಲೆನಾಡಿನ ಒಂದು ಕೆಸರಿನಲ್ಲಿ 'ಟ್ರೊಂಯ್,ಟ್ರೊಂಯ್' ಎಂದು ಕರೆಯುತ್ತಿದ್ದರೆ, ಆಗವಳು ಕುಪ್ಪಳಿಸಿ, ಕುಪ್ಪಳಿಸಿ ಬರುತಿದ್ದಳೇನೋ ಎಂದು ಯೋಚಿಸುತ್ತಾನೆ. ಅಂತಿಮವಾಗಿ ಶಾರದೆಯ ದೇಹ ಸ್ಪರ್ಶದ ಅನುಭವ ಪಡೆಯುತ್ತಾನೆ".[೫೨]

ಅನಂತಮೂರ್ತಿಯವರು ಪುರುಷರು ಪ್ರಧಾನವಾಗಿ ತೋರಿಸುವ 'ಪ್ರಶ್ನೆ' ಕಥೆಯಲ್ಲಿ ರಂಗನ ಪಾತ್ರದ ಮೂಲಕ ಶ್ರೀಮಂತ ಹೊಲಸು ಸಮಾಜ ಪ್ರತಿಷ್ಟೆಯ ಇನ್ನೊಂದು ಮುಖ ಆಧ್ಯಾತ್ಮದ ಸ್ವಪ್ರತಿಷ್ಟೆ. ಕೋಪ, ಕಾಮ, ರಾಗದ್ವೇಷಮುಕ್ತವಾದವನಾಗಿರಬೇಕು ಎಂದು ಹೇಳುತ್ತಾ "ಪ್ರಕೃತಿ ಹೆಣ್ಣಿನ ತೊಡೆಗಳ ನಡುವೆ ಮಾಡಿದ ಗಾಯ, ಗಂಡಸಿನ ಟೊಂಕದಲ್ಲಿ ಉರಿಯುವ ಪಂಜು."[೫೩] ಎಂಬ ಮಾತನ್ನು ಅಭಿವ್ಯಕ್ತ ಪಡಿಸುತ್ತಾರೆ.

ಮೂರು ಕಥೆಗಳ ಪುರುಷ ಪಾತ್ರಗಳು ದೈಹಿಕ ಕಾಮವನ್ನು ತಮ್ಮದೇ ಆದ ವ್ಯಾಖ್ಯಾನಗಳ ಮೂಲಕ ಪ್ರತಿನಿಧಿಸುವ ಪಾತ್ರಗಳಾಗಿವೆ.

***********

## ೨.೩. ಲಿಂಗಧಾರಿತ ಶೋಷಣೆಯ ಮುಖಗಳು

ಪುರುಷ ಪ್ರಧಾನ ಭಾರತೀಯ ಸಮಾಜದಲ್ಲಿ ಸ್ತ್ರೀ ಅಸಮಾನತೆ ಪ್ರಮುಖವಾದುದಾಗಿದೆ. ಹೆಣ್ಣು ನಿರಂತರವಾಗಿ ಶೋಷಣೆಗೆ ಒಳಗಾಗುತ್ತಿರುವುದನ್ನು ಕಥೆಗಳಲ್ಲಿ ಕಾಣಬಹುದಾಗಿದೆ. ಪುರುಷನು ಮಾಡುವ ತಪ್ಪುಗಳಿಗೆ ಬಲಿಪಶು ಸ್ತ್ರೀಯಾಗುತ್ತಿರುವುದು ಸಾಮಾನ್ಯವಾಗಿದೆ. ಅದು ಜಾತಿಯಲ್ಲಿರಬಹುದು, ವೃತ್ತಿಯಲ್ಲಿರಬಹುದು, ಸಾಂಸಾರಿಕ ಬದುಕಿನಲ್ಲಿ ಇರಬಹುದು, ದೈಹಿಕ ಸಂಬಂಧಗಳಲ್ಲಿ ಇರಬಹುದು ಹೆಣ್ಣು ಅದರ ಫಲವನ್ನು ಅನುಭವಿಸುವ ಸ್ಥಿತಿಯನ್ನು ಕಾಣುತ್ತೇವೆ.

ಗಾಯತ್ರಿ ನಾವಡರವರು ಪುರುಷ ಸಮಾಜದಲ್ಲಿನ ಸ್ತ್ರೀಯ ಬಗ್ಗೆ " ಪುರುಷಪ್ರಧಾನ ವ್ಯವಸ್ಥೆಯಲ್ಲಿ ಕೇಂದ್ರವಾಗಿ ನಿಂತ ಗಂಡು ತನ್ನನ್ನು ಪರಿಪೂರ್ಣ 'ನಾನು' ಎಂದು ನಿರ್ವಚಿಸಿಕೊಂಡು ಹೆಣ್ಣನ್ನು 'ಅನ್ಯ'ವಾಗಿ ಪರಿಭಾವಿಸಿದ. ಹೀಗೆ ಅನ್ಯವಾಗಿ – ಅನುಬಂಧವಾಗಿ ಸೇರಲ್ಪಟ್ಟ ಹೆಣ್ಣಿನ ಭಿನ್ನತೆಯನ್ನು ಭೇದವಾಗಿ ಗ್ರಹಿಸಲಾಯಿತು. ಗಂಡು ಹುಟ್ಟಿನೊಂದಿಗೇ ಅಸ್ತಿತ್ವವನ್ನು ಪಡೆದುಕೊಂಡರೆ ಜೈವಿಕ ಹಾಗೂ ಸಾಮಾಜಿಕ ಸ್ಥಿತ್ಯಂತರಗಳಿಗೆ ಎದುರಾಗುವ ಹೆಣ್ಣಿನ ಅಸ್ತಿತ್ವದ ಹುಡುಕಾಟವೇ ದೊಡ್ಡ ಹೋರಾಟ. ಗಂಡು ಅರ್ಥೈಸುವ ಹೆಣ್ಣಿನ ಅಸ್ತಿತ್ವ, ವ್ಯಕ್ತಿತ್ವ 'ಕುಡುಂಬಿನಿ', 'ಜಗನ್ಮಾತೆ'. 'ಪತಿವ್ರತೆ', 'ವೇಶ್ಯೆ' ಮಾದರಿಯವು. ಈ ಮಾದರಿಗಳಿಗೆ ಒಗ್ಗುವಂತೆ ಹೆಣ್ಣಿನ ಗುಣಸ್ವಭಾವ, ವ್ಯಕ್ತಿತ್ವನ್ನು ವೈಭವೀಕರಿಸಲಾಯಿತು. ಇಲ್ಲವೆ ಪತಿತಗೊಳಿಸಲಾಯಿತು. ಅವನ್ನು ಹೆಣ್ಣುತನದ ಸಹಜತೆ ಎಂಬಂತೆ ನಂಬಿಸಲಾಯಿತು. ಈ ವೈಭವೀಕರಣ ಎಷ್ಟರ ಮಟ್ಟಿಗೆ ನಡೆದಿದೆ ಎಂದರೆ ಹೆರದ ಹೆಣ್ಣನ್ನು ಹೆಣ್ಣಲ್ಲ ಎನ್ನುವಷ್ಟು! ಹೆಣ್ಣುತನವನ್ನು ತಾಯ್ತನದೊಂದಿಗೆ, ಶೀಲದೊಂದಿಗೆ ಸಮೀಕರಿಸಿ ಆಕೆಯ ಇಡಿಯ ವ್ಯಕ್ತಿತ್ವವನ್ನು, ಅನುಭವವನ್ನು ನಿರಾಕರಿಸಲಾಯಿತು. ಆದರೆ ತಾಯ್ತನ ಅಥವಾ ಪಾತಿವ್ರತ್ಯಗಳು ಹೆಣ್ಣುತನದ ನಿಜದ ತುಡಿತಗಳಾಗಿವೆಯೇ? ಹೆಣ್ಣಿನ ಅಂತರಂಗದ ಅನುಭವ ಮತ್ತು ಗಂಡು ಹೆಣ್ಣನ್ನು ಗ್ರಹಿಸಿದ ಅನುಭವಕ್ಕಿಂತ ಬೇರೆಯಾದುದು. ಹೀಗೆ ಹೆಣ್ಣೊಬ್ಬಳಿಗೆ ತಾನು ತಾನಾಗಿರುವ ಸ್ಥಿತಿಯನ್ನು ಒಪ್ಪಿಕೊಳ್ಳುವಲ್ಲಿ, ತನ್ನದಲ್ಲದ ಅನುಭವಕ್ಕೆ ಒಗ್ಗಿಕೊಳ್ಳುವಲ್ಲಿ ಒತ್ತಡವಿದೆ. ಈ ಬಗೆಯ ಸಾಂಸ್ಕೃತಿಕ ಒತ್ತಡಗಳು ಗಂಡಿಗಿಲ್ಲ." [೫೪] ಎಂದು ಹೇಳುತ್ತಾರೆ.

ಜಾತಿಪದ್ಧತಿಯು ಸ್ತ್ರೀಯರನ್ನು ಅವರು ಪಡೆದಿರುವ ಸಾಮಾಜಿಕ ಅಂತಸ್ತಿನ ಮತ್ತು ನಿರ್ವಹಿಸುವ ಪಾತ್ರಗಳ ಆಧಾರದ ಮೇಲೆ ಶ್ರೇಷ್ಟ–ಕನಿಷ್ಟ, ಉಚ್ಛ–ನೀಚ, ಮೇಲು– ಕೀಳು – ಎಂದು ವರ್ಗೀಕರಿಸುವ ಕ್ರಮ ಎಲ್ಲಾ ಸಮಾಜಗಳಲ್ಲೂ ಇದೆ. ಹೆಣ್ಣಿನ ದೇಹ ಪ್ರಕೃತಿಯ ಬಗ್ಗೆ ತಮ್ಮದೇ ಆದ ದೃಷ್ಟಿಕೋನದಲ್ಲಿ ನೋಡುವುದು, ಜಾತಿಯ ಮೂಲಕ ದೈಹಿಕ ಕಾಮನೆಗಾಗಿ ಬಳಸಿಕೊಳ್ಳುವ ಸನ್ನಿವೇಶವನ್ನು ತೇಜಸ್ವಿಯವರು 'ಸ್ವರೂಪ' ಕಥೆಯ

ಮೂಲಕ ತೋರಿಸಿದ್ದಾರೆ. ಕಥೆಯಲ್ಲಿ ಮೇಲ್ವರ್ಗದ ವ್ಯಕ್ತಿಯೊಬ್ಬನು " ಹೊಲೆಯರ ಹೆಂಗಸರು ನಮ್ಮ ಗದ್ದೆ ಕೆಲಸಕ್ಕೆ ಬರುತ್ತಾರೆ. ಏನು ಕಟ್ಟು ಮಸ್ತಾಗಿದ್ದಾರೆ ಅಲ್ಲವೇ...... ಒಂದು ಕುಪ್ಪಸ ಇಲ್ಲ; ಒಂದು ಬಾಡಿ ಇಲ್ಲ; ಕೇವಲ ಸೆರಗನ್ನೇ ಬಿಗಿದುಕೊಂಡು ........ ಅಂದರೆ ಕೇವಲ ಎಲೆ ಅಡಿಕೆ ಆಸೆಗೆ ಹಾಸಿಗೆಗೆ ಬರುತ್ತಾರೆಂದು ತಿಳಿಯಬೇಡ. ಅವರು ಸಹ ಸುಲಭರಲ್ಲ. ನೋಡಪ್ಪಾ, ನೀನೇನೋ ತೆಳ್ಳಗೆ ಬೆಳ್ಳಗೆ ಇದ್ದೀಯ ನಿನ್ನನ್ನು ಜಾತಿಭ್ರಷ್ಟನನ್ನಾಗಿ ಮಾಡಲು ಅವರಿಗೂ ಆಸೆ ಇರಬಹುದು. ಆಹಾ ಜಾತಿಭ್ರಷ್ಟರಾಗಲು ಎಂಥ ಸುಂದರ ವಿಧಾನ !"[೫೫] ಎಂದು ವ್ಯಕ್ತಿಗಳಿಬ್ಬರು ಮಾತನಾಡಿಕೊಳ್ಳುತ್ತಾರೆ. ಪುರುಷ ದೈಹಿಕ ಕಾಮನೆಗಳಿಗೆ ಹೆಣ್ಣು ಸುಲಭವಾಗಿ ಸಿಗುತ್ತಾಳೆ ಎಂದು ಯೋಚಿಸುವ ಪುರುಷ ಸಮಾಜದ ಮನಸ್ಸುಗಳು ಹೆಚ್ಚಾಗಿವೆ.

ಅನಾದಿ ಕಾಲದಿಂದಲೂ ಅಂತರಜಾತಿಯ ವಿವಾಹಗಳು ಸಹಜವಾಗಿ ಸಂಘರ್ಷಗಳಿಗೆ, ವಿರಸಗಳಿಗೆ ಕಾರಣಗಳಾಗಿ ಕೊಲೆಗಳ ಮೂಲಕ ಕೊನೆಗೊಳ್ಳುವುದನ್ನು ನೋಡುತ್ತಿದ್ದೇವೆ. ಇಂತಹ ಒಂದು ಉದಾಹರಣೆಯಾಗಿ ತೇಜಸ್ವಿಯವರ 'ಪಿಶಾಚಿಗಳು' ಕಥೆಯಲ್ಲಿ ಬರುವ ತಾರಾಳು ಅನ್ಯ ಜಾತಿಯ ಹೇಮಂತನನ್ನು ಪ್ರೀತಿಸಿದ ಕಾರಣಕ್ಕಾಗಿ, ಆಕೆಯ ಅಕ್ಕಳ ಮದುವೆಗೆ ತೊಂದರೆಯಾಗುತ್ತದೆ. ಅಂತಿಮವಾಗಿ ತಾರಾಳ ವಿಷಯವಾಗಿ ಆಕೆಯ ತಂದೆ ತನ್ನ ಮಗಳು ಇವಳಲ್ಲ ಎಂದು ತರ್ಪಣ ಬಿಡುವ ಸನ್ನಿವೇಶವನ್ನು ಕಥೆಯ ಚೌಕಟ್ಟಿನಲ್ಲಿ ಕಟ್ಟಿಕೊಟ್ಟಿದ್ದಾರೆ.

ತಾರಾಳು, ಹೇಮಂತನನ್ನು ಮದುವೆ ಯಾವಾಗ ಮಾಡಿಕೊಳ್ಳೋದು ಎಂದು ಕೇಳುತ್ತಾಳೆ. ಆ ವಿಚಾರವಾಗಿ ಹೇಮಂತನು "ನೋಡು ಅದಕ್ಕೇ ಹೆಂಗಸರ ಮಾತು ಕಟ್ಟಿಕೊಂಡರೆ ಉದ್ಧಾರವಿಲ್ಲಾ ಅನ್ನೋದು. ಯಾರೋ ಏನೋ ಅನ್ನುತ್ತಾರಂತ ಹೇಳೋ ರೋಷಕ್ಕೆ ಮದುವೆಯಾಗಿ ಕರಕೊಂಡು ಹೋಗಬೇಕೇನೇ? ಸಂಸಾರ ಅಂದರೆ ಎಂಥಾ ಜವಾಬ್ದಾರಿ ನನ್ನ ಪಾಲಿಗೆ? ಹೆಂಗಸರ ಪಾಲಿಗೆ ಮಕ್ಕಳು ಹೆರೋದು ಮಾತ್ರ. ಆದರೆ ಗಂಡಸರ ಪಾಲಿಗೆ ಅಷ್ಟು ಸೌಮ್ಯವಾಗಿಲ್ಲ ತಿಳುಕೋ"[೫೬] ಎನ್ನುತ್ತಾನೆ. ಪ್ರೀತಿಯ ಹೆಸರಿನಲ್ಲಿ ವಂಚನೆ, ಮದುವೆಯ ಹೆಸರಿನಲ್ಲಿ ಗಂಡಸ್ಸಿನ ಜವಾಬ್ದಾರಿ ಹೆಚ್ಚಾಗಿರುತ್ತವೆ ಎನ್ನುವ ಅಹಂನ ಮಾತುಗಳು, ಹೇಮಂತನ ರೀತಿಯ ಪಾತ್ರಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಪ್ರೀತಿಯ ಹೆಸರಿನಲ್ಲಿ ಗಂಡು ಹೆಣ್ಣಿಗೆ ಆಕರ್ಷಣೆಯ ಮಾತುಗಳನ್ನಾಡುತ್ತಾನೆ. ಮದುವೆಯ ವಿಚಾರ ಬಂದರೆ ಜವಾಬ್ದಾರಿಯ ಹೆಸರಿನಲ್ಲಿ ಜಾರಿ ಕೊಳ್ಳುತ್ತಾನೆ.

ಗೌರಿ ಬಿಲ್ಲೋರ ಜಾತಿಯ ಸುಬ್ಬಯ್ಯನ ಹೆಂಡತಿ. ಸೌಂದರ್ಯವತಿ. ಇಳಿವಯಸ್ಸಿನ ಸೂರಾಚಾರಿಯು ಅವಳ ಸೌಂದರ್ಯಕ್ಕೆ ಅಚ್ಚರಿ ವ್ಯಕ್ತ ಪಡಿಸಿದವನು. ದುರಂತವೆಂದರೆ ಅವಳ ಮಕ್ಕಳ ಸಾವಿಗೆ ಆಕೆಯ 'ಮೊಲೆಯ ದೋಷ'ವೆಂದು ಹೇಳುವ ಮೂಲಕ

ಅವಳ ಸೌಂದರ್ಯವನ್ನು ಸುಡುವ ವಿಕೃತ ಮನಸ್ಸಿಗೆ ಹೋಗುತ್ತಾನೆ. ಹಳ್ಳಿಯ ಮೂಢನಂಬಿಕೆಗಳು ಹೆಣ್ಣೊಬ್ಬಳ ಸೌಂದರ್ಯವನ್ನು ನಾಶಪಡಿಸುವ ಸ್ಥಿತಿಗೆ ಹೋಗುವ ವಿಪರ್ಯಾಸವನ್ನು 'ಅವನತಿ' ಕಥೆಯಲ್ಲಿ ತೇಜಸ್ವಿಯವರು ಓದುಗರಿಗೆ ನೀಡಿದ್ದಾರೆ. ವ್ಯಕ್ತಿಯ ವಿಕಾರ ಮನಸ್ಸಿಗೆ ಸೌಂದರ್ಯ ಬಲಿಯಾಗುವ ಸ್ಥಿತಿ ಈ ಕಥೆಯಲ್ಲಿದೆ.

ಗೌಪ್ಯತೆಯನ್ನು ಕಾಪಾಡಲು ಸಾಧ್ಯವಿಲ್ಲವೆಂದು, ಕಳ್ಳತನವನ್ನು ತಿಳಿಸುತ್ತಾಳೆ ಎಂಬ ದುಷ್ಟತನದ ಮನಸ್ಸಿನ ಗುಂಪು ಜೊತೆಯಲ್ಲಿಯೇ ಇದ್ದ ಶಾರಿ ಎಂಬ ಹೆಣ್ಣಿನ ನಾಲಿಗೆಯನ್ನು ಕತ್ತರಿಸಿ ಹಾಕುವ ಸನ್ನಿವೇಶವನ್ನು 'ನಿಗೂಢ ಮನುಷ್ಯರು' ಕಥೆಯಲ್ಲಿ ಕಾಣಬಹುದು. ಎಲ್ಲವೂ ಹೆಣ್ಣಿನ ಮನಸ್ಸು ದೇಹಗಳ ಮೇಲೆ ದೌರ್ಜನ್ಯವನ್ನು ಮಾಡುವ ಸಮಾಜದ ಮನಸ್ಥಿತಿಯನ್ನು ತೇಜಸ್ವಿಯವರ ಕಥೆಗಳಲ್ಲಿ ಕಾಣಬಹುದಹು.

ತೇಜಸ್ವಿಯವರ ಕಥೆಗಳಿಗಿಂತ ಭಿನ್ನ ರೀತಿಯ ಸನ್ನಿವೇಶಗಳನ್ನು ಲಂಕೇಶರ ಕಥೆಗಳಲ್ಲಿ ಕಾಣಬಹುದು. ಕೆಲವೊಮ್ಮೆ ಪಾತ್ರಗಳು ಪ್ರಧಾನವಲ್ಲದಿದ್ದರೂ ಹೆಣ್ಣಿನ ಶೋಷಣೆಯ ಸನ್ನಿವೇಶಗಳನ್ನು ಕಥೆಗಳಲ್ಲಿ ನಿರೂಪಿಸುವ ವಿಶಿಷ್ಟ ಬರವಣಿಗೆ ಲಂಕೇಶರಲ್ಲಿ ಕಂಡುಬರುತ್ತದೆ.

'ರೊಟ್ಟಿ' ಕಥೆಯಲ್ಲಿ ಹೆಸರಿಲ್ಲದ ಪಾತ್ರದಲ್ಲಿರುವ ಹೆಣ್ಣು ತನ್ನ ಇರುವಿಕೆಗೆ ಹೋರಾಟ ಮಾಡುತ್ತಾಳೆ. ಪೋಲೀಸರು ರಕ್ಷಣೆ ಮಾಡುವ ನೆಪದಲ್ಲಿ ಆಕೆಯ ದೇಹದ ಭಾಗಗಳನ್ನು ಬಲತ್ಕಾರವಾಗಿ ಮುಟ್ಟುತ್ತಾರೆ." ಅವಳ ರೆಟ್ಟೆ ಹಿಡಿದು ಎಳೆದ. ತೋಳನ್ನು ಸುತ್ತಿ ಬೆನ್ನನ್ನು ಹಾದು ಮೊಲೆಗಳನ್ನು ನೇವರಿಸುವ ಆ ಪೊಲೀಸ್ ಕೈ. ಅವನಿಂದ ಬಿಡಿಸಿಕೊಳ್ಳಲು ಯತ್ನಿಸಿದಳು. .....ನಾನು ಬರೋಲ್ಲ. ನೀವು ಹೋಗಿ–ನನ್ನಷ್ಟಕ್ಕೆ ನನ್ನ ಬಿಡಿ ಅಂದಳು. ಆದರೆ ಆತ ಬಿಡಲಿಲ್ಲ; ಬೆವೆತ ಎದೆಯನ್ನು ಒತ್ತಿದ ಅವನ ಖಾಕಿ ಎದೆ."[೫೭] ಅವಳನ್ನು ರಕ್ಷಣೆ ಮಾಡುತ್ತೇವೆಂದು ನಿಂತ ಪೋಲೀಸರು ಅವಳನ್ನು ಸ್ಟೇಷನ್ನಿಗೆ ಕರೆದುಕೊಂಡು ಹೋಗಿ ಮಾನಸಿಕವಾಗಿ ಹಿಂಸೆ ಕೊಡುತ್ತಾರೆ. ರಕ್ಷಣೆಯ ಬದಲು ಶೋಷಣೆ ಮಾಡುವ ಅಧಿಕಾರಯುಕ್ತ ಪುರುಷನ ಮನಸ್ಥಿತಿಯು ಅನಾವರಣಗೊಳ್ಳುತ್ತದೆ.

ಸ್ತ್ರೀಯನ್ನು ಲೈಂಗಿಕವಾಗಿ ಶೋಷಣೆ ಮಾಡುವ ಸನ್ನಿವೇಶಗಳು ಲಂಕೇಶರ ಬಹುಪಾಲು ಕಥೆಗಳಲ್ಲಿ ಬರುತ್ತವೆ. ಪೊಲೀಸರ, ರಾಜಕಾರಣಿಗಳ ಅಧಿಕಾರಯುಕ್ತ ವ್ಯವಸ್ಥೆಯಲ್ಲಿ ಲೈಂಗಿಕವಾಗಿ ಶೋಷಣೆ ಮಾಡುವ ವ್ಯಕ್ತಿಗಳು ವಿವಿಧ ಪ್ರಲೋಭನೆಗಳು, ಆಸೆಗಳನ್ನು ತೋರಿಸುವುದು, ಸಾಧ್ಯವಾಗದಿದ್ದಾಗ ದರ್ಪಗಳ, ಬಲತ್ಕಾರಗಳನ್ನು ಮಾಡುವ ಸಮಾಜವನ್ನು ಲಂಕೇಶರು ಅನಾವರಣಗೊಳಿಸುತ್ತಾರೆ. ನವ್ಯದ ಮನಸ್ಥಿತಿಯ ನೇರವಂತಿಕೆಯು ಇಂದಿನ ಸಮಾಜಕ್ಕೆ ಹಿಡಿದ ಕೈಗನ್ನಡಿಯಂತಿದೆ. 'ಸೆಪ್ಟೆಂಬರನಲ್ಲಿ ಪ್ರಥಮ ರಾತ್ರಿ'ಯ 'ಶಾಂತ', 'ಗುತ್ತಿ ಗೀತಾ ಆದದ್ದು' ಕಥೆಯ 'ಗುತ್ತಿ', ಒಂದೇ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಾರೆ. ಶಾಂತ ತನ್ನ ಬದುಕಿಗಾಗಿ ದೇಹ ಮಾರಾಟಮಾಡಿಕೊಳ್ಳುವ ಹೆಣ್ಣಾದರೆ, ಗುತ್ತಿ ಆಕಸ್ಮಿಕ

ಘಟನೆಯಿಂದ ತನ್ನನ್ನು ಮಾರಾಟದ ವಸ್ತುವಾಗಿ ಬದಲಾವಣೆಮಾಡಿಕೊಂಡು ಅಧಿಕಾರಿಶಾಹಿವರ್ಗಕ್ಕೆ ದೇಹವನ್ನು ಮಾರಾಟ ಮಾಡಿಕೊಳ್ಳುವ 'ಗೀತಾ'ಳಾಗುವುದು, ರೋಗಗ್ರಸ್ಥ ಸಮಾಜದ ವಿಪರ್ಯಾಸವಾಗಿದೆ. ಬಲತ್ಕಾರಗಳು, ತಿರಸ್ಕಾರಗಳು, ದೈಹಿಕ ದೌರ್ಜನ್ಯಗಳು ಈ ಎರಡು ಕಥೆಗಳಲ್ಲಿ ಕಂಡುಬರುತ್ತವೆ.

'ಒಂದು ಬಾಗಿಲು' ಕಥೆಯಲ್ಲಿನ ಚಿನ್ನಮ್ಮ ಗಂಡನಿಂದ ದೂರವಾದ ಹೆಣ್ಣು, ಮನೆಕಟ್ಟುವ ಕೆಲಸಕ್ಕೆ ತೊಡಗಿಸಿಕೊಳ್ಳುತ್ತಾಳೆ. ಮೇಸ್ತ್ರಿಯು ನೀಡುವ ಕೂಲಿಯೇ ಬದುಕಿನ ನಿರ್ವಹಣೆಗಾಗಿ ಆಧಾರವಾಗಿರುತ್ತದೆ. ಆಕೆಗೆ ಯಾವುದೇ ಪೆನ್ಷನ್ ಬರುವುದಿಲ್ಲ. ಆದರೂ ಬದುಕಿಗಾಗಿ ಹೋರಾಟ ನಡೆಸುತ್ತಾಳೆ. ಲೇಖಕರು, ಅವಳ ಪುಟ್ಟ ಗುಡಿಸಲಿಗೆ ಬಾಗಿಲೊಂದನ್ನು ನೀಡಿದಾಗ, ಆ ಬಾಗಿಲನ್ನೆ ಕಳವು ಮಾಡುವ ಸನ್ನಿವೇಶ ಈ ಕಥೆಯಲ್ಲಿ ಬರುತ್ತದೆ. ಸ್ತ್ರೀಯು ಬದುಕಿಗಾಗಿ, ನೆಲೆಗಾಗಿ ಹೋರಾಟ ನಡೆಸಿದರೆ, ಅವಳನ್ನೆ ಶೋಷಣೆ ಮಾಡುವ ಪುರುಷವರ್ಗವನ್ನು ಓದುಗರಿಗೆ ಕಥೆಗಾರ ಈ ಕಥೆಯಲ್ಲಿ ನೀಡುತ್ತಾರೆ.

ತಂಗಿ, ಅಕ್ಕ, ಸಹೋದರಿ ಎಂಬುದು ಕೆಲವೊಮ್ಮೆ ಕೇವಲ ಬಾಯಿ ಮಾತಿಗಷ್ಟೆ. ಪುರುಷನಲ್ಲಿ ಆಂತರಿಕವಾಗಿ ಅಡಗಿರುವ ಕಾಮವು ಅವಕಾಶ ಸಿಕ್ಕಾಗ ಸಹಜವಾಗಿ ಉದ್ದೀಪನಗೊಳ್ಳುತ್ತದೆ. ಅಸಹಾಯಕ ಹೆಣ್ಣು ಸಿಕ್ಕಾಗ ಅವಳನ್ನು ರಕ್ಷಣೆ ಮಾಡುವ ಹೆಸರಿನಲ್ಲಿ ನಾನಾ ರೀತಿಯಲ್ಲಿ ಶೋಷಣೆ ಮಾಡುವ ಸಮಾಜವನ್ನು ಕಾಣುತ್ತೇವೆ. 'ಮಾರಲಾಗದ ನೆಲ'ದ ಕಥೆಯಲ್ಲಿ ವಿಶ್ವನಾಥನು, ಗದ್ದೆಯಲ್ಲಿ ಮಾದೇವಣ್ಣನ ಮಗನ ಬಲತ್ಕಾರದಿಂದ ಸಾವಂತ್ರಿಯನ್ನು ರಕ್ಷಿಸಲು ಮುಂದಾಗುತ್ತಾನೆ. ಪ್ರೀತಿಯಿಂದ ಅನುಕಂಪ ತೋರಿಸಿ ಮಾತನಾಡುತ್ತಾನೆ. ಒಬ್ಬ ಪುರುಷನು, "ಶೋಷಣೆಗೆ ಒಳಗಾಗುವ ಹೆಣ್ಣನ್ನು ರಕ್ಷಿಸುವ ಬದಲು ಶೋಷಣೆಯನ್ನು ಮಾಡಿದ ಮತ್ತೊಬ್ಬ ಪುರುಷನನ್ನು ರಕ್ಷಿಸುವ" ವಿಲಕ್ಷಣ ಮನಸ್ಥಿತಿಯನ್ನು ಕಥೆಯಲ್ಲಿ ನೋಡಬಹುದು. ವಿಶ್ವನಾಥನು ಮಾದೇವಣ್ಣನು ಮಗನ ರಕ್ಷಣೆಯನ್ನು ಪರೋಕ್ಷವಾಗಿ ಮಾಡುತ್ತಾನೆ. ಸಾವಂತ್ರಿಯು, ತನ್ನ ಮೇಲೆ ಅತ್ಯಾಚಾರ ಮಾಡಲು ಬಂದ ವ್ಯಕ್ತಿ ಮಾದೇವಣ್ಣನ ಮಗ ಎಂದು ಹೇಳಿದರೂ ಸಭ್ಯ ನಾಗರಿಕನ ಮುಖವಾಡ ಧರಿಸಿದ ವಿಶ್ವನಾಥನು "ಇದರಿಂದ ಏನಾಗುತ್ತೆ ಅಂತ ನಿನಗೆ ಗೊತ್ತಿಲ್ಲ ಸಾವಂತ್ರಿ, ಊರೇ ಹಾಳಾಗಬಹುದು, ನೀನಿದನ್ನು ಯಾರಿಗೂ ಹೇಳಬಾರದು. ಪಿಟ್ಟೆನ್ನಬಾರದು ಸಾವಂತ್ರಿ, ಮಾದೇವಣ್ಣನ ಮಗ ಹೀಗ್ಮಾಡಿದ ಅಂದ್ರೆ ದೊಡ್ಡ ಪಂಚಾಯಿತಿ, ಜಗಳ ಆಗುತ್ತೆ, ಗೊತ್ತಾಯ್ತು, ಪರಿಸ್ಥಿತಿ ಹದಗೆಡುತ್ತೆ".[೫೮] ಎಂದು ಹೇಳುವ ಮೂಲಕ ಅವಳ ರಕ್ಷಣೆ ಮಾಡುವ ನೆಪದಲ್ಲಿ ಅವಳ ದೇಹವನ್ನು ಮುಟ್ಟುತ್ತಾನೆ. ಅವಳನ್ನು ಪಡೆಯಲು ಈತನು ಮುಂದಾಗುವ ವಿಕಾರ ಮನಸ್ಥಿತಿಗಳು ಈ ಕಥೆಯಲ್ಲಿ ಅನಾವರಣ ಗೊಂಡಿದೆ. ಅಂತಿಮವಾಗಿ ಹೆಣ್ಣೆ ಶೋಷಣೆಗೆ ಒಳಗಾಗುವ ದಾರುಣ ಸ್ಥಿತಿಯಿದೆ.

ಒಂದು ಹೆಣ್ಣು ಸಮಾಜ ಮುಖಿಯಾಗಬಾರದು, ಒಂದು ವೇಳೆ ಅವಳು ಆದರೆ ಅದನ್ನು ಹೇಗಾದರೂ ಮಾಡಿ ತಡೆಗಟ್ಟುವ ದುಸ್ಸಾಹಸಕ್ಕೆ ಪುರುಷ ಸಮಾಜ ನಿಲ್ಲುತ್ತದೆ. ಅವಳ ಅಂತ್ಯವಾದರೂ ಸರಿಯೇ. ಅವಳಿಂದ ಲಾಭವನ್ನು ಪಡೆದರೂ ಅವಳ ನಾಶಕ್ಕೆ ನಿಲ್ಲುವ ಸನ್ನಿವೇಶವುಳ್ಳ ಕಥೆ 'ಉರಿದ ಊರಿನವರು' ಆಗಿದೆ. ಕಥೆಯಲ್ಲಿರುವ ಚೆಲುವಮ್ಮ ಸೇಡು, ಹತಾಶೆಗೆ ಒಳಗಾಗಿ ಅಂತಿಮವಾಗಿ ಬೆಂಕಿಯಲ್ಲಿಯೇ ಸಾಯುವ ಸ್ಥಿತಿಗೆ ಬರುತ್ತಾಳೆ. ಅವಳು ಪುರುಷ ಸಮಾಜವನ್ನು ಎದುರು ಹಾಕಿಕೊಂಡ ಕಾರಣಕ್ಕಾಗಿ ಸಾಯುತ್ತಾಳೆ. ಪುರುಷರಿಂದ ತನ್ನ ಕುಟುಂಬಕ್ಕೆ ಆದ ಅನ್ಯಾಯಕ್ಕೆ ಪುರುಷನನ್ನೆ ಆಶ್ರಯಿಸುವ ವ್ಯಂಗ್ಯವನ್ನು ಈ ಕಥೆ ತೋರಿಸುತ್ತದೆ.

ಸಂಸಾರವನ್ನು ನಡೆಸಲಾರದ ವ್ಯಕ್ತಿಯು ಹೆಂಡತಿಯಿಂದ ಬಿಡುಗಡೆ ಪಡೆದು, ಬಿಡುಗಡೆ ಹೊಂದಿದ ಸಮಯದಲ್ಲಿ ಬರುವ ಸಂಪತ್ತಿನಿಂದ ಬದುಕನ್ನು ರೂಪಿಸಿಕೊಳ್ಳುವ ಮನಸ್ಥಿತಿಯನ್ನು 'ಸ್ಟೆಲ್ಲಾ ಎಂಬ ಹುಡುಗಿ' ಕಥೆಯಲ್ಲಿ ನೋಡಬಹುದು. ಲಂಕೇಶರು ಈ ಕಥೆಯಲ್ಲಿ ಎರಡು ಪಾತ್ರಗಳನ್ನು ಪ್ರಧಾನವಾಗಿ ತರುತ್ತಾರೆ. ಸ್ಟೆಲ್ಲಾ ನರ್ಸ್ ಆಗಿರುತ್ತಾಳೆ. ಸ್ಮಿಥ್ ಅವಳ ಗಂಡ. ಒಂದು ವೇಳೆ ಇಬ್ಬರು ಬಿಡುಗಡೆ ಹೊಂದಿದ ನಂತರ ಸ್ಟೆಲ್ಲಾಳು ಫ್ರಾನ್ಸಿಸ್‌ನನ್ನು ವಿವಾಹವಾಗಲು ನಿರ್ಧರಿಸುತ್ತಾಳೆ. ದುರಂತವೆಂದರೆ ಅವಳ ಬದುಕಿಗೆ ಸ್ಮಿಥ್‌ಗಿಂತ ಫ್ರಾನ್ಸಿಸ್‌ನು ಅಪಾಯಕಾರಿಯಾಗಿ ಕಾಣುತ್ತಾನೆ. 'ಉರಿವ ಬಾಣಲೆಯಿಂದ ಉರಿಯುವ ಬೆಂಕಿಗೆ ಬೀಳುವ' ಸ್ಥಿತಿ ಸ್ಟೆಲ್ಲಾಳದು ಆಗಿರುತ್ತದೆ. ಮತ್ತೊಂದು ಪಾತ್ರದಲ್ಲಿ ಸುಬ್ಬಣ್ಣನು, ತನ್ನ ಹೆಂಡತಿ ಪಾರ್ವತಿಯ ಮೇಲೆ ಕಂಟ್ರಾಕ್ಟರ್ ಅಬೂಬಕರ್ ಅತ್ಯಚಾರ ಮಾಡಿದರೂ ಕೊಲ್ಲುವುದಾಗಿ ಆರ್ಭಟಿಸಿ ಜಮೀನನ್ನು ಪಡೆದು ಸುಮ್ಮನಾಗುವುದು ಅಸ್ವಸ್ಥ ಮನಸ್ಥಿತಿಯ ಪುರುಷ ಸಮಾಜಕ್ಕೆ ಸಾಕ್ಷಿಯಾಗಿದೆ. ಪಾತ್ರಗಳು ವಿಭಿನ್ನ ಆದರೆ ಶೋಷಣೆಗೆ ಒಳಗಾಗುವವರು ಮಾತ್ರ ಸ್ಟೆಲ್ಲಾ ಮತ್ತು ಪಾರ್ವತಿಯಾಗಿದ್ದಾರೆ.

ನಾಗರಿಕ ಜಗತ್ತಿನ ನಗರದಲ್ಲಿ ಹಳ್ಳಿಯಿಂದ ಬರುವ ಹೆಣ್ಣು ಹುಡುಗಿ ಬದುಕನ್ನು ಕಟ್ಟಿಕೊಳ್ಳುವುದು ಸುಲಭವಾದುದಲ್ಲ. ಅದಕ್ಕೆ ಉದಾಹರಣೆಯಾಗಿ ಲಂಕೇಶರ ಮತ್ತೊಂದು ಕಥೆ 'ಶಾರದೆಯ ಪುಟ್ಟ ಸಂಸಾರ'. ಹಳ್ಳಿಯ ಸರ್ಕಾರಿ ಶಾಲೆಯಲ್ಲಿ ಉತ್ತೀರ್ಣಳಾದ ಕಥಾ ನಾಯಕಿ ಶಾರದೆ ಅಪ್ಪಅಮ್ಮರ ಬಡತನದ ಕಾರಣಕ್ಕಾಗಿ ಬೆಂಗಳೂರಿನ ಅಜ್ಜಿ ಮನೆಗೆ ಬರುತ್ತಾಳೆ. ಜೀವನಕ್ಕಾಗಿ ಕೆಲಸ ನಿರ್ವಹಿಸುವ ಸಂದರ್ಭದಲ್ಲಿ ಪಂಕಜ್ ಮೂರ್ತಿ ಮತ್ತು ಮೂನಿಯಂತಹ ವ್ಯಕ್ತಿಗಳು ಪ್ರೀತಿಯೆಂಬ ಹೆಸರಿನಲ್ಲಿ, ಶಾರದೆಯನ್ನು ಶೋಷಣೆ ಮಾಡುವ ವ್ಯಕ್ತಿಗಳಾಗುತ್ತಾರೆ. ನಗರ ಜನರ ಶೋಷಣೆಗೆ ಶಾರದೆ ಬಲಿಯಾಗುವುದನ್ನು ಕಾಣಬಹುದಾಗಿದೆ.

ಪುರುಷ ಸಾಮ್ರಾಜ್ಯದಲ್ಲಿ ಪುರುಷನೆ ಅಧಿಪತಿ. ಸ್ತ್ರೀ ಯಾವಗಲೂ ದ್ವಿತೀಯ ಪ್ರಜೆಯಂತೆ ಶೋಷಣೆಗೆ ಒಳಗಾಗುವ ಹೆಣ್ಣು ಎಂಬುದನ್ನು ಲಂಕೇಶರ ಬಹುಪಾಲು ಕಥೆಗಳಲ್ಲಿ ಚಿತ್ರಿಸಿದ್ದಾರೆ.

ಆಧುನಿಕ ಪಾಶ್ಚಾತ್ಯ ವಿಚಾರಗಳನ್ನು ಮೈಗೂಡಿಸಿಕೊಂಡಿರುವ ಅನಂತಮೂರ್ತಿಯವರ ಕಥೆಗಳಲ್ಲೂ ಸ್ತ್ರೀ ಮೇಲಿನ ಶೋಷಣೆಯ ವಿವಿಧ ಮುಖಗಳನ್ನು ಕಾಣಿಸುತ್ತವೆ.

'ಪ್ರೀತಿಯು ತಿರುವು ಹೆಣ್ಣಿನ ಬಸರಿನಲ್ಲಿ ಕೊನೆಗೊಳ್ಳುತ್ತದೆ' ಕೆಲವೊಂದು ಸುಖಾಂತವಾಗುತ್ತವೆ. ಇನ್ನು ಕೆಲವು ದುಃಖಂತವಾಗುತ್ತವೆ. ಆದರೆ ದುಃಖಾಂತವಾದವುಗಳೆ ಹೆಚ್ಚಾಗಿರುತ್ತವೆ ಎಂಬುದನ್ನು ಸ್ತ್ರೀ ಕೇಂದ್ರಿತ ಶೋಷಣೆಗಳಲ್ಲಿ ಕಾಣಬಹುದು. 'ಪ್ರಶ್ನೆ' ಕಥೆಯ ಶಾಂತಳ ಅಕ್ಕ ಪಾರ್ವತಿಯು ಮನೆಗೆ ಬಂದು ಸಲುಗೆ ಬೆಳೆಸಿಕೊಂಡ ಮೇಷ್ಟ್ರರ ಜೊತೆ ಸಂಬಂಧ ಹೊಂದಿ ಬಸುರಿಯಾಗುತ್ತಾಳೆ. ತಪ್ಪು ಯಾರೆ ಮಾಡಲಿ ಫಲವನ್ನು ಹೆಣ್ಣು ಹೊರಬೇಕೆಂಬ ಅಲಿಖಿತ ನಿಯಮದಂತೆ ಸಮಾಜವನ್ನು ಎದುರಿಸಲಾರದೆ ಹೆದರಿದ ಪಾರ್ವತಿಯ ಬದುಕು ಸಾವಿನಲ್ಲಿ ಅಂತ್ಯಕಾಣುತ್ತದೆ. ವಯಸ್ಸಿನ ಸಹಜವಾದ ಕಾಮನೆಗಳು ಏನೆ ಇರಲಿ ಅದರ ಫಲಿತಾಂಶ ಕ್ರೂರವಾಗಿ ಕಾಣುತ್ತದೆ. ಹೆಣ್ಣಿನ ವಿಪರ್ಯಾಸವೆಂದರೆ ಪುರುಷನಿಂದ ತನಗಾದ ಅನ್ಯಾಯದ ವಿರುದ್ಧ ಹೋರಾಡಲು ಅಸಹಾಯಕಳಾಗುತ್ತಾಳೆ. ಅನಂತಮೂರ್ತಿಯ 'ಘಟಶ್ರಾದ್ಧ' ಕಥೆಯ ಯಮುನಾ ಬಾಲ್ಯದಲ್ಲಿಯೇ ಗಂಡನನ್ನು ಕಳೆದುಕೊಂಡು ವಿಧವೆಯಾಗುತ್ತಾಳೆ. ಸಮಾಜದಲ್ಲಿ ಹೆಂಡತಿ ಸತ್ತರೆ ಪುನರ್ ವಿವಾಹವಾಗಲು ಗಂಡಸ್ಸಿಗೆ ಅವಕಾಶವಿದೆ. ಆದರೆ ಗಂಡ ಸತ್ತರೆ ಹೆಣ್ಣಿಗೆ ಪುನರ್ ವಿವಾಹವಾಗಲು ಅವಕಾಶಗಳು ಕಡಿಮೆ. ಒಂದು ವೇಳೆ ಆಕೆ ವಿವಾಹವಾದರೂ ಸಮಾಜದ ನೋಟವೇ ಬೇರೆಯಾಗಿರುತ್ತದೆ. ಆಧುನಿಕ ಸೌಲಭ್ಯಗಳ ಬಳಕೆ ಇಲ್ಲದ ಯಮುನಾ ವಯಸ್ಸಿನ ಸಹಜ ಕಾಮನೆಗೆ ಒಳಗಾಗಿ ಕಥೆಯಲ್ಲಿ ಬರುವ ಮೇಷ್ಟ್ರರ ಕಾರಣದಿಂದ ಗರ್ಭ ಧರಿಸುತ್ತಾಳೆ. ಸಮಾಜಕ್ಕೆ ಹೆದರಿ ಅದನ್ನು ತೆಗೆಸಲು ಹೋರಾಟ ನಡೆಸಿ ಕೊನೆಗೆ ಜೀವಕಳೆದುಕೊಳ್ಳುತ್ತಾಳೆ. ಈ ಎರಡು ಕಥೆಗಳಲ್ಲಿ 'ಮೇಷ್ಟ್ರರ' ಪಾತ್ರಗಳು ಪ್ರಧಾನವಾಗಿ ಕಾಣುತ್ತವೆ. ಸಮಾಜದಲ್ಲಿ ಮೌಲ್ಯಗಳನ್ನು ಬಿತ್ತುವ ವ್ಯಕ್ತಿಗಳು 'ಸಭ್ಯರ ಮುಖವಾಡ'ಗಳನ್ನು ಧರಿಸಿ ತಮ್ಮ ತೆವಲುಗಳನ್ನು ತೀರಿಸಿಕೊಳ್ಳುತ್ತಾರೆ. ಹೋರಾಟದ ವಿಷಯದಲ್ಲಿ ಮಾತ್ರ ನುಣಚಿಕೊಳ್ಳುವ ವ್ಯಕ್ತಿಗಳಾಗುತ್ತಾರೆ.

'ಪ್ರಸ್ತ' ಕಥೆಯ ಸೀತಕ್ಕ ಬಾಲ್ಯದಲ್ಲಿಯೆ ವಿವಾಹವಾಗಿ, ವಯಸ್ಸಿನ ಕಾಮನೆಗಳು ಕಡಿಮೆಯಾಗುವ ಮಧ್ಯ ವಯಸ್ಸಿನಲ್ಲಿ ಶೀನಪ್ಪಯ್ಯಗಂಡನನ್ನು ಪುನಃ ಪಡೆಯುತ್ತಾಳೆ. ಆದರೆ ಗಂಡನ ಸಾಮಿಪ್ಯತೆಯ ಪ್ರೀತಿಯಿಂದ ವಂಚಿತಳಾಗುತ್ತಾಳೆ. ಶೀನಪ್ಪಯ್ಯ ಚಿಕ್ಕ ವಯಸ್ಸಿನ ಹೆಂಡತಿಯಾದ ಸೀತಾಳನ್ನು ಬಿಟ್ಟು ಬೇರೆಯವಳ ಜೊತೆ ಸಂಬಂಧವನ್ನು ಹೊಂದುತ್ತಾನೆ. ಕೌಟುಂಬಿಕ ಸುಖವನ್ನೇ ಅರಿಯದ 'ಸೀತಾಳು ಪುರುಷ ಸಮಾಜದ ಶೋಷಣೆಯ ಪ್ರತಿನಿಧಿಯಾಗುತ್ತಾಳೆ'.

'ಕಾಮರೂಪಿ' ಕಥೆಯ ಶಂಕರ್‌ಬಾಬುವಿನ ಮೊದಲ ತಂಗಿ ಸರೋಜ. ಶಂಕರ್‌ಬಾಬು ತನ್ನ ವೈಯಕ್ತಿಕ ಬೆಳವಣಿಗಾಗಿ ತಂಗಿಯ ಬದುಕನ್ನೆ ನಾಶ ಪಡೆಸುವ ವ್ಯಕ್ತಿಯಾಗುತ್ತಾನೆ. ಮಂತ್ರಿಯ ಆಸಕ್ತಿಯ ಫಲವಾಗಿ ತನ್ನ ಆಪ್ತ ಕಾರ್ಯದರ್ಶಿಗೆ ಸರೋಜಳನ್ನು ಕೊಟ್ಟು ವಿವಾಹ ಮಾಡುತ್ತಾರೆ. ಅವಳ ಬದುಕು ದುರಂತವಾಗುತ್ತದೆ. ಅವಳ ತಂಗಿ ಗೀತಾಳು, ಹಾಗೆಯೇ ಅದೇ ಕಥೆಯಲ್ಲಿ ಬರುವ ಬಲತ್ಕಾರಕ್ಕೆ ಆಮೀನಾ ಬಾಲಕಿ ಗಲ್ಫಿನ ಶ್ರೀಮಂತ ಮುದುಕನನ್ನು ಮದುವೆಯಾಗುವುದು. ಇವೆಲ್ಲಾ ಸಂಗತಿಗಳೂ ಶೋಷಣೆಯ ವಿವಿಧ ಮುಖಗಳಾಗಿ ಕಾಣುತ್ತವೆ.

ವಯಸ್ಸಿನ ಕ್ರಾಂತಿಯ ಮನೋಭಾವನೆ, ಜಾತಿ ಧರ್ಮವನ್ನು ಮೀರಿ ನಿಲ್ಲುತ್ತೇನೆಂಬ ಅತ್ಯುತ್ಸಾಹಗಳು ಅಲ್ಪ ಕಾಲದವರೆಗೆ ಮಾತ್ರ ಅಂತಿಮವಾಗಿ ಎಲ್ಲವೂ ದುಃಖಮಯವೆಂಬುದಕ್ಕೆ 'ಬೇಟೆ, ಬಳೆ ಮತ್ತು ಓತಿಕೇತ' ಕಥೆಯಲ್ಲಿನ ಹಸೀನಾ ಪಾತ್ರ ಉದಾಹರಣೆಯಾಗಿದೆ. 'ಹಸೀನಾ' ಪ್ರೀತಿಯ ಪಡೆಯುವಿಕೆಗಾಗಿ 'ತುಷಾರ'ಳಾಗುತ್ತಾಳೆ. ಬದುಕಿನ ನಿರ್ವಹಣೆಯ ಹೋರಾಟಕ್ಕಾಗಿ ತುಷಾರ 'ವರ್ಗೀಸ್' ಆಗುತ್ತಾಳೆ. ಆದರೂ ಪುರುಷ ಪ್ರಧಾನ ಹೋರಾಟದಲ್ಲಿ ದುರಂತವಾಗಿ ಸಾಯುತ್ತಾಳೆ. ಕಥೆಯಲ್ಲಿನ ಹೆಣ್ಣು ಯಾವುದನ್ನು ಇಷ್ಟ ಪಟ್ಟು ಬದುಕಿನಲ್ಲಿ ಪಡೆಯುತ್ತಾಳೋ ಅವೆಲ್ಲವೂ ಶಾಶ್ವತವಾಗಿ ಉಳಿಯಲಾರವು ಎಂಬುದಕ್ಕೆ ಕಥೆಗಾರರು ಈ ಕಥೆಯನ್ನು ಕಟ್ಟಿದ್ದಾರೆ. ಇಲ್ಲಿನ ಹಸೀನಾಳಂಥ ಹೆಣ್ಣು ಸದಾ ಹೋರಾಟ, ದ್ವಂದ್ವ ಯೋಚನೆಗಳು, ಶೋಷಣೆಯ ಫಲಿತಗಳನ್ನು ಪಡೆಯುವ ವ್ಯಕ್ತಿಯಾಗಿ ಅನಾವರಣ ಗೊಂಡಿದ್ದಾಳೆ. ಇಲ್ಲಿ ಗಾಯತ್ರಿ ನಾವಡರವರು ಅಭಿಪ್ರಾಯ ಪಡುವಂತೆ "ಒಂದೇ ಕೌಟುಂಬಿಕ ಸಾಮಾಜಿಕ ಪರಿಸರದಲ್ಲಿ ಬೆಳೆದ ಗಂಡು-ಹೆಣ್ಣು ಮಕ್ಕಳಿಗೆ ಒದಗುವ ಸಂದರ್ಭ, ಸಿಗುವ ಒತ್ತಾಸೆ ಭರವಸೆಗಳು, ದಕ್ಕುವ ಅನುಭವ, ಅವಕಾಶಗಳು ವಿಭಿನ್ನವಾಗಿರುತ್ತವೆ. ಹೀಗೆ ಭಿನ್ನವಾದ ಒಂದು ಸಾಂಸ್ಕೃತಿಕ ಸಂದರ್ಭದಲ್ಲಿ ಬದುಕಬೇಕಾದ ಹೆಣ್ಣಿನ ಕನಸು, ಬಯಕೆ ಮತ್ತು ಗ್ರಹಿಕೆಗಳು ಬೇರೆಯಾಗಿರುತ್ತವೆ. ಹೀಗಾಗಿಯೇ ಜಗತ್ತನ್ನು ಕಾಣುವ, ಅನುಭವಿಸುವ ಮತ್ತು ಅಭಿವ್ಯಕ್ತಿಸುವ ಪುರುಷ ಸಂವೇದನೆಗೂ ಹೆಣ್ಣೊಬ್ಬಳ ಪರಿಗ್ರಹಿಕೆ ಹಾಗೂ ಅಭಿವ್ಯಕ್ತಿ ವಿನ್ಯಾಸಕ್ಕೂ ಅಂತರವಿರುತ್ತದೆ."[೫೯]

'ಪ್ರಶ್ನೆ'ಕಥೆಯ ಪಾರ್ವತಿ ಮೇಷ್ಟ್ರುರಿಂದ ಬಸಿರಾಗಿ ಸಮಾಜಕ್ಕೆ ಹೆದರಿ ಸಾಯುತ್ತಾಳೆ. 'ಘಟಶ್ರಾದ್ಧ' ಕಥೆಯಲ್ಲಿ ಯಮುನಾಳು ಪುರುಷ ಸಮಾಜದವರ ಅವಹೇಳನದ ಮಾತುಗಳನ್ನು ಕೇಳಲಾರದೆ ಯಾತನೆಗಳನ್ನು ಅನುಭವಿಸುತ್ತಾಳೆ. 'ಪ್ರಸ್ತ' ಕಥೆಯಲ್ಲಿ ಶೀನಪ್ಪಯ್ಯನ ಕಾರಣಕ್ಕಾಗಿ ಸಾಂಸರಿಕ ಸುಖವನ್ನು ಅನುಭವಿಸುವಲ್ಲಿ ಸೀತಕ್ಕ ಸೋಲುತ್ತಾಳೆ. 'ಕಾಮರೂಪಿ' ಕಥೆಯಲ್ಲಿ ಪುರುಷ ಸಮಾಜದ ಅಹಂಗೆ ಸರೋಜಳು ಬಲಿಯಾಗುತ್ತಾಳೆ. 'ಬೇಟೆ, ಬಳೆ ಮತ್ತು ಓತಿಕೇತ' ಕಥೆಯ ಹಸೀನಾಳು ಬದುಕಿನ ನಿರ್ವಹಣೆಗಾಗಿ ಹೋರಾಟ ನಡೆಸಿ

ಸಾಯುತ್ತಾಳೆ. ಪುರುಷ ಸಮಾಜದ ವಿವಿಧ ಮುಖಗಳು ಹೆಣ್ಣಿನ ಮೇಲಿನ ವಿವಿಧ ರೂಪಗಳಲ್ಲಿ ಶೋಷಣೆ ನಡೆಸುತ್ತವೆ. ಕಥೆಗಾರರು ವಿಭಿನ್ನ ಧೋರಣೆಗಳನ್ನು ಇಟ್ಟುಕೊಂಡು ಹೆಣ್ಣಿನ ಶೋಷಣೆಯು ಕೇಂದ್ರೀಕೃತವಾಗುವಂತೆ ಕಥೆಗಳನ್ನು ರಚಿಸಿರುವುದನ್ನು 'ಶೋಷಣೆ'ಯ ಭಾಗದಲ್ಲಿ ನೋಡಬಹುದು.

*******************

**ಕೊನೆ ಟಿಪ್ಪಣಿ:**


೧. ಬಪ್ಪನಾಡು ರಾಘವ, ಯು.ಆರ್. ಅನಂತಮೂರ್ತಿ, ವಸಂತ ಪ್ರಕಾಶನ, ಪುಟ-೨೮, ೨೦೧೧.

೨. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು, (ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೯, ೨೦೦೧.

೩. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೨, ೨೦೧೫.

೪. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೧೩, ೨೦೧೫.

೫. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೬೮, ೨೦೧೫.

೬ ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೭೪, ೨೦೧೫.

೭ ಪೂರ್ಣಚಂದ್ರ ತೇಜಸ್ವಿ, ಕಿರಗೂರಿನ ಗಯ್ಯಾಳಿಗಳು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೪೯, ೨೦೦೫.

೮. ಲಂಕೇಶ್ ಪಿ. ಕೆರೆಯ ನೀರನು ಕೆರೆಗೆ ಚೆಲ್ಲಿ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೪, ೨೦೧೧.

೯. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೯, ೨೦೦೧.

೧೦. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೨೦, ೨೦೦೧.

೧೧. ಅನಂತಮೂರ್ತಿ ಯು.ಆರ್.ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೩೬, ೨೦೦೧.

೧೨. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೪೮, ೨೦೦೧.

೧೩. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೪೮, ೨೦೦೧.

೧೪. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೪೮, ೨೦೦೧.

೧೫. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೪೮, ೨೦೦೧.

೧೬ ಆಮೂರ ಜಿ.ಎಸ್. ಯು.ಆರ್.ಅನಂತಮೂರ್ತಿಯ ವೈಚಾರಿಕತೆ ಹಾಗೂ ಸಾಹಿತ್ಯ, ಮನೋಹರ ಗ್ರಂಥ ಮಾಲಾ, ಪುಟ-೧೧, ೨೦೧೩

೧೭. ಶಂಕರರಾವ್ ಚ.ನ. ಭಾರತೀಯ ಸಮಾಜ, ಜೈಭಾರತ ಪ್ರಕಾಶನ, ಪುಟ-೪೧, ೧೯೯೭.

೧೮. ಶಂಕರರಾವ್ ಚ.ನ. ಭಾರತೀಯ ಸಮಾಜ, ಜೈಭಾರತ ಪ್ರಕಾಶನ, ಪುಟ-೧೨೬, ೧೯೯೭.

೧೯. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೫೯೬. ೨೦೦೧.

೨೦. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೪೦೪. ೨೦೦೧.

೨೧. ಶಂಕರರಾವ್ ಚ.ನ. ಭಾರತೀಯ ಸಮಾಜ, ಜೈಭಾರತ ಪ್ರಕಾಶನ, ಪುಟ-೮೧, ೧೯೯೭.

೨೨. ಶ್ರೀಮತಿ ಎಚ್.ಎಸ್. (ಅನು), ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಪುಟ – ೧೩೧, ೨೦೦೯.

೨೩. ಮಮತಾ ಜಿ. ಸಾಗರ, ಪ್ರಜಾವಾಣಿ, ಸಾಹಿತ್ಯ ಪುರವಣಿ, ೨೦೧೨

೨೪. ಲಂಕೇಶ್, ಟೀಕೆ ಟಿಪ್ಪಣಿ, ಪತ್ರಿಕ ಪ್ರಕಾಶನ, ಪುಟ-೩೦, ೧೯೯೭.

೨೫. ದಂಡಪ್ಪ ಎಚ್, ಸುಮಿತ್ರಬಾಯಿ ಬಿ.ಎನ್. (ಸಂ), ಸುವರ್ಣ ಸಾಹಿತ್ಯ ವಿಮರ್ಶೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪುಟ-೪೫೫, ೨೦೦೬.

೨೬. ದಂಡಪ್ಪ ಎಚ್, ಸುಮಿತ್ರಬಾಯಿ ಬಿ.ಎನ್. (ಸಂ), ಸುವರ್ಣ ಸಾಹಿತ್ಯ ವಿಮರ್ಶೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪುಟ-೧೮೫, ೨೦೦೬.

೨೭. ಲಂಕೇಶ್ ಪಿ. ಕಲ್ಲು ಕರಗುವ ಸಮಯ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೧೨೭, ೧೯೯೦.

೨೮. ಲಂಕೇಶ್ ಪಿ. ಕಲ್ಲು ಕರಗುವ ಸಮಯ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೧೩೦, ೨೦೧೫.

೨೯. ಲಂಕೇಶ್ ಪಿ. ಕಲ್ಲು ಕರಗುವ ಸಮಯ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೧೫೮,೧೫೫, ೨೦೧೫.

೩೦. ಲಂಕೇಶ್ ಪಿ. ಕಲ್ಲು ಕರಗುವ ಸಮಯ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೧೧, ೨೦೧೫.

೩೧. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು, (ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೯೬. ೨೦೦೧.

೩೨. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೦೧. ೨೦೦೧.

೩೩. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೯೬. ೨೦೦೧.

೩೪. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೨೦೧. ೨೦೦೧.

೩೫. ಆಮೂರ ಜಿ.ಎಸ್. ಕನ್ನಡ ಕಥನ ಸಾಹಿತ್ಯ: ಸಣ್ಣಕತೆ, ಪ್ರಿಯದರ್ಶಿನಿ ಪ್ರಕಾಶನ, ಪುಟ-೧೯೧, ೨೦೧೨.

೩೬. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೩೫. ೨೦೦೧.

೩೭. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು, (ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೩೫. ೨೦೦೧.

೩೮. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೩೬. ೨೦೦೧.

೩೯. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ,

ಪುಟ-೧೧೪. ೨೦೦೧.
೪೦. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೧೪. ೨೦೦೧.
೪೧. ಆಮೂರ ಜಿ.ಎಸ್. ಕನ್ನಡ ಕಥನ ಸಾಹಿತ್ಯ: ಸಣ್ಣಕತೆ, ಪ್ರಿಯದರ್ಶಿನಿ ಪ್ರಕಾಶನ, ಪುಟ-೧೮೬, ೨೦೧೨.
೪೨. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೨೬೪. ೨೦೦೧.
೪೩. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೩೮೦. ೨೦೦೧.
೪೪. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೭೯, ೨೦೧೬.
೪೫. ಲಂಕೇಶ್ ಪಿ. ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೬೮,೬೯. ೨೦೦೭
೪೬. ಲಂಕೇಶ್ ಪಿ. ಕಲ್ಲು ಕರಗುವ ಸಮಯ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೭, ೨೦೧೫.
೪೮. ಲಂಕೇಶ್ ಪಿ. ಮಂಜು ಕವಿದ ಸಂಜೆ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೭, ೨೦೧೫.
೪೯. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು, (ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೭೮. ೨೦೦೧.
೫೦. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು, (ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೧೪. ೨೦೦೧.
೫೧. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು, (ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೧೨. ೨೦೦೧.
೫೨. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು, (ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೩೫. ೨೦೦೧.
೫೩. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು, (ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೧೬. ೨೦೦೧.
೫೪. ದಂಡಪ್ಪ ಎಚ್, ಸುಮಿತ್ರಬಾಯಿ ಬಿ.ಎನ್. (ಸಂ), ಸುವರ್ಣ ಸಾಹಿತ್ಯ ವಿಮರ್ಶೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪುಟ-೪೧೮, ೨೦೦೬.
೫೫. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೬೧, ೨೦೧೬.
೫೬ ಪೂರ್ಣಚಂದ್ರ ತೇಜಸ್ವಿ, ಪಾಕ ಕ್ರಾಂತಿ, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೪೭, ೨೦೧೬.
೫೭ ಲಂಕೇಶ್ ಪಿ. ನಾನಲ್ಲ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೪೦, ೨೦೧೧.
೫೮. ಲಂಕೇಶ್ ಪಿ. ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೬೮, ೨೦೦೭.
೫೯. ದಂಡಪ್ಪ ಎಚ್, ಸುಮಿತ್ರಬಾಯಿ ಬಿ.ಎನ್. (ಸಂ), ಸುವರ್ಣ ಸಾಹಿತ್ಯ ವಿಮರ್ಶೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಪುಟ-೪೧೮, ೨೦೦೬.

**********

# ಅಧ್ಯಾಯ-೩

# ಜಾತಿ-ಧರ್ಮಾಧಾರಿತ ಸಮುದಾಯದ ಪರಿಕಲ್ಪನೆ

---

೩.೧. ಜಾತಿ ಆಧಾರಿತ ಸಮಾಜ

೩.೨. ನಂಬಿಕೆಗಳು-ಆಚರಣೆಗಳು

೩.೪. ವೈಚಾರಿಕತೆಯ ಸವಾಲುಗಳು

## ಅಧ್ಯಾಯ– ೩

## ಜಾತಿ–ಧರ್ಮಾಧಾರಿತ ಸಮುದಾಯದ ಪರಿಕಲ್ಪನೆ

ಜಾತಿ ಮತ್ತು ಧರ್ಮಾಧಾರಿತ ಸಮುದಾಯ ಸಮಾಜದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ನಗರ ಪ್ರದೇಶಗಳಿಗೆ ಹೋಲಿಸಿಕೊಂಡಾಗ ಗ್ರಾಮೀಣ ಭಾಗದಲ್ಲಿ ಜಾತಿ ಹಿನ್ನೆಲೆಯ ಸಮಾಜ ಹೆಚ್ಚಿನ ಮಹತ್ವ ಪಡೆದುಕೊಂಡಿರುತ್ತದೆ. ಶ್ರಮಿಕ ವರ್ಗ ಉಳ್ಳವರ ನೆರಳಿನಲ್ಲಿಯೇ ಜೀವನ ನಡೆಸುವ ಅನಿವಾರ್ಯತೆ ಇರುತ್ತದೆ. ಊಳಿಗಮಾನ್ಯ ಪದ್ದತಿಯ ಮುಷ್ಠಿಯಲ್ಲಿ ಸಿಲುಕಿದ ಶ್ರಮಿಕ ವರ್ಗ ಅದರಿಂದ ಮುಕ್ತವಾಗುವುದು ಸುಲಭವಾಗಿರುವುದಿಲ್ಲ. ಆಗಾಗ್ಗೆ ನಡೆಯುವ ಪ್ರಕೃತಿ ವಿಕೋಪಗಳು ಮನುಷ್ಯನ ಬದುಕನ್ನು ಕಷ್ಟಕ್ಕೀಡುಮಾಡುತ್ತವೆ. ಅಂಥ ಕಷ್ಟಗಳ ಸನ್ನಿವೇಶಗಳಲ್ಲಿ ಬದುಕುವ ಜನಾಂಗ ತಮ್ಮದೇ ಆದ ಆಚಾರ–ವಿಚಾರಗಳು, ನಂಬಿಕೆಗಳನ್ನು ಹೊಂದಿರುತ್ತಾರೆ. ಹಬ್ಬ–ಹರಿದಿನಗಳಲ್ಲಿ ತಮ್ಮದೇ ವಿಭಿನ್ನವಾದ ಆಚರಣೆಗಳನ್ನು ಪಾಲಿಸುತ್ತಾರೆ.

ವೈಜ್ಞಾನಿಕ ಸತ್ಯಗಳು ಹೊರಬಂದರೂ ವೈಚಾರಿಕವಾಗಿ ಅವುಗಳನ್ನು ಅಳವಡಿಸಿಕೊಳ್ಳುವುದಕ್ಕಿಂತ ಮೂಢನಂಬಿಕೆಗಳ ನಡುವೆ ಬದುಕುತ್ತಾರೆ. ಬಹುಪಾಲು ಸಂದರ್ಭಗಳಲ್ಲಿ ವ್ಯಕ್ತಿಗಳು ಜನರಲ್ಲಿ ಮೂಢನಂಬಿಕೆಗಳನ್ನು ಬಿತ್ತಿ ವೈಯಕ್ತಿಕ ಲಾಭಕ್ಕೂ ಮುಂದಾಗುತ್ತಾರೆ. ಒಟ್ಟಾರೆಯಾಗಿ ಅವರ ನಂಬಿಕೆಗಳು ಬಹುಪಾಲು ಸನ್ನಿವೇಶಗಳಲ್ಲಿ ವೈಚಾರಿಕತೆಗೆ ಸವಾಲನ್ನು ಒಡ್ಡುವ ರೀತಿಯಲ್ಲಿ ರೂಪುಗೊಂಡಿರುತ್ತವೆ. ಆ ಹಿನ್ನೆಲೆಯಲ್ಲಿ ಜಾತಿ–ಧರ್ಮಾಧಾರಿತ ಸಮುದಾಯವನ್ನು ಅಭ್ಯಸಿಸಲಾಗಿದೆ.

### ೩. ೧. ಜಾತಿ ಆಧಾರಿತ ಸಮಾಜ.

ಮನುಷ್ಯನ ಬದುಕಿನ ನಿರ್ವಹಣೆಯ ಅನಿವಾರ್ಯ ಆಯ್ಕೆ ದುಡಿಮೆಯಾಗಿದೆ. ಆತನ ಹಸಿವು ನಿವಾರಣೆಗೆ, ಆರ್ಥಿಕ ಬೆಳವಣಿಗೆಗೆ ದುಡಿಮೆ ಆಧಾರವಾಗಿರುತ್ತದೆ. ದುಡಿಯಲು ಆಶ್ರಯಿಸಿರುವ ಭೂಮಿ ವ್ಯವಸಾಯಕ್ಕೆ ಮಾತ್ರ ಸೀಮಿತವಾಗಿಲ್ಲ. ಮನಷ್ಯನ ಆರ್ಥಿಕ ಬಂಡವಾಳ ಹೂಡಿಕೆಯ ಕೇಂದ್ರವೂ ಆಗಿದೆ. ವ್ಯವಸಾಯ ಬದುಕಿನ ಅನಿವಾರ್ಯಕ್ಕಿಂತ ಕೆಲವರಿಗೆ ಹವ್ಯಾಸದ ರೂಪದಲ್ಲಿ ಬದಲಾವಣೆಯಾಗುತ್ತಿರುವುದು ಕೂಡ ಇದೆ. ಹಾಗೆಯೇ ಭೂ ರಹಿತವಾದ ವ್ಯಕ್ತಿಗಳು ಜೀವನೋಪಾಯಕ್ಕಾಗಿ ಕೂಲಿ, ವ್ಯಾಪಾರವನ್ನು ಮಾಡಿ ಜೀವನ ನಡೆಸುವ ಪರಿಯನ್ನು ನೋಡಬಹುದಾಗಿದೆ. ಇವುಗಳ ಜೊತೆಗೆ ಜಾತಿಯಾಧಾರಿತ ದುಡಿಮೆಗಳು ಕೂಡ ಪ್ರಧಾನವಾಗಿರುತ್ತವೆ.

ಭಾರತೀಯ ಇತಿಹಾಸ ಪುಟಗಳನ್ನು ತಿರುವಿದಾಗ, ಸಮಾಜವು ಜಾತಿಯಾಧಾರಿತ ಶ್ರಮಿಕ ಜನಾಂಗವನ್ನು ರೂಪಿಸಿದೆ. ಬ್ರಾಹ್ಮಣನ ಉಪನಿಷತ್ತು ಬೋಧನೆ, ಕ್ಷತ್ರಿಯನ ಹೋರಾಟದ ಜೀವನ, ವೈಶ್ಯನ ವ್ಯಾಪಾರ, ಶೂದ್ರ ಮೇಲಿನ ವರ್ಗಗಳ ಸೇವೆಯ ರೂಪದ ದುಡಿಮೆಯೇ ಆಗಿದೆ. ಕಾಲಾನಂತರ ಎಲ್ಲರ ದುಡಿಮೆಗಳು ಬದಲಾದವು. ಇಂದು ಗ್ರಾಮೀಣ ಸಮಾಜದ ಬಹುಪಾಲು ಕಸುಬು ವ್ಯವಸಾಯ, ಮತ್ತು ಅದಕ್ಕೆ ಸಂಬಂಧಿಸಿದ ಉಪ ಕಸುಬುಗಳಾಗಿರುತ್ತವೆ. ಈ ವ್ಯವಸಾಯ ನಂಬಿದ "ರೈತನು ಸಾಲದಲ್ಲಿಯೇ ಹುಟ್ಟಿ, ಸಾಲದಲ್ಲಿಯೇ ಬೆಳೆದು, ಸಾಲದಲ್ಲಿಯೇ ಸಾಯುತ್ತಾನೆ" ಎಂಬ ವಾದವಿದೆ. ರೈತನು ಆಹಾರ ಧಾನ್ಯಗಳನ್ನು ಬೆಳೆದರೂ ಲಾಭವಿಲ್ಲ. ವಾಣಿಜ್ಯ ರೂಪದ ಬೆಳೆಯನ್ನು ಬೆಳೆದರೂ ಲಾಭದ ಸ್ಥಿರತೆಯು ಎಲ್ಲಾ ಕಾಲದಲ್ಲೂ ಇರುವುದಿಲ್ಲ. ಸದಾ ಆತನು ಆತಂಕದಲ್ಲಿಯೇ ವ್ಯವಸಾಯವನ್ನು ಮಾಡುವ ಸ್ಥಿತಿಯಲ್ಲಿರುತ್ತಾನೆ. ಆದರೂ ರೈತರುಗಳ ನಡುವಿನ ದರ್ಪ, ಸಿನಿಕತನ, ವೈಷಮ್ಯಗಳಿಗೆ ಕೊನೆಯಿರುವುದಿಲ್ಲ.

ರೈತರ ಬೆಳೆಗಳಿಗೆ ಇನ್ನೂ ಉತ್ತಮ ಮಾರುಕಟ್ಟೆ ಲಭ್ಯವಿಲ್ಲ. ರೈತ ಸಮುದಾಯಕ್ಕೆ ತಿಳಿದಿದ್ದರೂ ಬೆಳೆಯುವ ಬೆಳೆಗಳ ವಿಷಯಕ್ಕೆ ಪೈಪೋಟಿ ಇರುತ್ತದೆ. ಎಲ್ಲರೂ ಕೆಲವೊಮ್ಮೆ ಏಕ ಮಾದರಿಯ ಬೆಳೆಯನ್ನು ಬೆಳೆದು ಲಾಭವನ್ನು ಮಾಡುವ ಯೋಚನೆ ಮಾಡುತ್ತಾರೆ. ಎಷ್ಟೋ ಬಾರಿ ಉತ್ತಮ ಧಾರಣೆ ಲಭಿಸದೆ ಸಾಲದ ಸುಳಿಯಲ್ಲಿ ಸಿಲುಕುತ್ತಾರೆ. ಸರ್ಕಾರಗಳು ಕೂಡ ರೈತರ ಬೆಳೆಗೆ ಲಾಭವನ್ನು ಕೊಡಿಸುವಲ್ಲಿ ವಿಫಲವಾಗುತ್ತಿವೆ.

ತೇಜಸ್ವಿಯವರ ಕಥೆಗಳಲ್ಲಿ, ವ್ಯವಸಾಯದ ಬದುಕು ಮತ್ತು ಹವ್ಯಾಸ ರೂಪದ ವ್ಯವಸಾಯ ಪರಿಕಲ್ಪನೆ ಈ ಎರಡು ಅಂಶಗಳು ಕಾಣುತ್ತವೆ. ಅವರ 'ನಿಗೂಢ ಮನುಷ್ಯರು' ಕಥೆಯಲ್ಲಿನ ಜಗನ್ನಾಥನು ಒಬ್ಬ ಬರಹಗಾರನಾಗಿದ್ದು, ಆತನು ಭೂಮಿಯನ್ನು ಕೊಂಡು ವ್ಯವಸಾಯ ಮಾಡುವ ಮಹಾದಾಸೆಯನ್ನು ಹೊಂದಿರುತ್ತಾನೆ. ಹಾಗೆಯೇ ನವಿಲುಗುಂದದಲ್ಲಿನ ಗೋಪಾಲಯ್ಯನು ಪ್ರಕೃತಿಯ ವೈಪರೀತ್ಯದಿಂದ ತೋಟಕ್ಕೆ ಹಾನಿಯುಂಟಾಗಿ ನಷ್ಟವನ್ನು ಅನುಭವಿಸಿ, ತೋಟವನ್ನು ಮಾರಾಟ ಮಾಡಲು ಮುಂದಾಗುತ್ತಾನೆ. ಇಂಥ ಸಂದರ್ಭದಲ್ಲಿ ಮಳೆಯ ಅನಾಹುತದಿಂದ ಉಗ್ರಗಿರಿಯ ಕುಸಿತದ ಅವಾಂತರವನ್ನು ನೋಡುತ್ತಾ, ತೋಟ ಮಾರಾಟಮಾಡುವ ಮತ್ತು ತೆಗೆದುಕೊಳ್ಳುವ ವಿಚಾರಕ್ಕೆ ಪೂರ್ಣವಿರಾಮ ಹಾಕಲಾಗುತ್ತದೆ. ಭೂಮಿಯ ಅವಲಂಬನೆಯಿಂದ ದುಡಿಮೆ ಮಾಡಿ ಲಾಭ ಗಳಿಸಲು ಸಾಧ್ಯವಿಲ್ಲ ಎಂಬುದು ಈ ಕಥೆಯಲ್ಲಿ ಅನಾವರಣಗೊಂಡಿದೆ.

ತೇಜಸ್ವಿಯವರು ಇದೆ ರೀತಿಯ ಪೂರಕ ಅಂಶವನ್ನು 'ಮಳೆಗಾಲದ ಚಿತ್ರ' ಕಥೆಯಲ್ಲೂ ತರುತ್ತಾರೆ. ರೈತನ ಭೂ ಆಶ್ರಿತ ಬೆಳೆಯ ಕಷ್ಟವನ್ನು ಅನಾವರಣಗೊಳಿಸುತ್ತಾರೆ. ಸರಿಯಾದ ಸಮಯಕ್ಕೆ ಮಳೆ ಬಾರದಿದ್ದಾಗ ಕಾಫಿಗಿಡಕ್ಕೆ ಆಗುವ ತೊಂದರೆಯಿಂದ ಬೆಳ್ಳಿಯಪ್ಪನೆಂಬ

ರೈತನು ಸಾಲಸೋಲ ಮಾಡಿ ನಷ್ಟವನ್ನು ಅನುಭವಿಸುವ ದಾರುಣ ಸ್ಥಿತಿಯನ್ನು ಓದುಗನಿಗೆ ನೀಡುತ್ತಾರೆ. "ವ್ಯವಸಾಯ ಅದು ಉದ್ಯಮವಲ್ಲ. ಬದಲಿಗೆ ಬದುಕಿನ ಆಧಾರ. ರೈತನ ದುಡಿಮೆ ಒಂದು ವೇಳೆ ಯೋಗ್ಯವಾದ ರೀತಿಯಲ್ಲಿ ಬದುಕನ್ನು ರೂಪಿಸದಿದ್ದರೆ ವಿನಾಶ ಕಟ್ಟಿಟ್ಟಬುತ್ತಿ"ಯಾಗುತ್ತದೆ.

'ಕಿರಗೂರಿನ ಗಯ್ಯಾಳಿಗಳು' ಕಥೆಯಲ್ಲಿ ಹರಿಜನರು, ಬಿಲ್ಲವರು, ಒಕ್ಕಲಿಗರು ಹೀಗೆ ನಾನಾ ಜಾತಿಯವರು ವಿವಿಧ ರೀತಿಯ ದುಡಿಮೆಯಲ್ಲಿ ತೊಡಗಿಸಿಕೊಳ್ಳುತ್ತಾರೆ. ಹರಿಜನರ ಸಿದ್ದ ಮತ್ತು ಮಾರನು ಕೂಲಿಗಾಗಿ ಸಿಂಗೇಗೌಡರ ಹೆಬ್ಬಲಸಿನ ಮರ ಕಡಿಯುವುದಕ್ಕೆ ತೊಡಗಿರುತ್ತಾರೆ. ಅದನ್ನು ನಾಲ್ಕು ದಿನವಾದರೂ ಕಡಿಯಲಾರದೆ ಸಾಕಾಗುವ ಮನಸ್ಥಿತಿಯ ವ್ಯಕ್ತಿಗಳಾಗಿದ್ದಾರೆ. ಗ್ರಾಮಸೇವಕ ಶಂಕ್ರಪ್ಪನ ಕುತಂತ್ರದಿಂದ ಇಂಥ ಹರಿಜನರ ಕುಟುಂಬಗಳ ಜೊತೆ ಒಕ್ಕಲಿಗರು ದ್ವೇಷ ಕಟ್ಟಿಕೊಳ್ಳುವ ಸನ್ನಿವೇಶ ಉಂಟಾಗುತ್ತದೆ. ಮುಂದೆ ಕಥೆಯಲ್ಲಿನ ಎಲ್ಲಾ ಅನಾಹುತಗಳಿಗೆ ಈ ದ್ವೇಷವೆ ಕಾರಣವಾಗುತ್ತದೆ.

ದುಡಿಮೆಯೂ ಭೂಮಿಗಷ್ಟೆ ಸೀಮತವಲ್ಲ. ಅದರ ವ್ಯಾಪ್ತಿ ವಿಶಾಲವಾಗಿದೆ. ತೇಜಸ್ವಿಯವರ ಕಥೆಗಳಲ್ಲಿ 'ಕೃಷ್ಣೇಗೌಡನ ಆನೆ' ಗ್ರಾಮೀಣ ಭಾರತದ ದುಡಿಮೆಯ ಬದುಕನ್ನು ಅನಾವರಣಗೊಳಿಸುತ್ತದೆ. ಕಥೆಯಲ್ಲಿ ಕೆಇಬಿ ಇಲಾಖೆಯ ದುರ್ಗಪ್ಪ, ಪೋಸ್ಟಾಫೀಸಿನ ಜಬ್ಬಾರ್, ಟೆಲಿಫೋನ್ ಇಲಾಖೆಯ ತಿಪ್ಪಣ್ಣ, ಫಾರೆಸ್ಟ್ ಇಲಾಖೆಯ ನಾಗರಾಜ, ವೆಟರ್ನರಿ ಇಲಾಖೆಯ ಪುಟ್ಟಯ್ಯರಂಥ ಸರ್ಕಾರಿ ನೌಕರ ತಮ್ಮ ದುಡಿಮೆಯ ಬಗ್ಗೆ ತಾತ್ಸಾರ ಮನೋಭಾವನೆ ಹೊಂದಿರುತ್ತಾರೆ. ಇಲಾಖೆಯ ನೌಕರರಾದರೂ ಇಲಾಖೆಗಳ ಮೇಲಾಧಿಕಾರಿಗಳ ಅಧೀನದಲ್ಲಿ ಕೆಲಸ ಮಾಡುವ ಅನಿವಾರ್ಯತೆ ಇರುತ್ತದೆ. ಒಂದು ಇಲಾಖೆಯವರು ಮತ್ತೊಂದು ಇಲಾಖೆಯನ್ನು ದೂಷಿಸುವ ಮನಸ್ಸನ್ನು ಹೊಂದಿದವರಾಗಿರುತ್ತಾರೆ. ನಿರಂತರ ದುಡಿಮೆಯಲ್ಲಿ ಬದಲಾವಣೆ ಕಾಣದಿದ್ದರೆ ಸಹಜವಾಗಿ ವ್ಯಕ್ತಿ ಖಿನ್ನತೆಗೆ ಒಳಗಾಗುವ ಮನಸ್ಥಿತಿಯನ್ನು ಕಥೆಗಾರರು ತಂದಿದ್ದಾರೆ. ಜೊತೆಗೆ ತಮಗೆ ಅರಿವಿಲ್ಲದಂತೆ ತಮ್ಮ ಇಲಾಖೆಗಳ ನ್ಯೂನತೆಯನ್ನು, ಸರ್ಕಾರದ ವೈಫಲ್ಯತೆಗಳನ್ನು ಸಾರ್ವಜನಿಕಗೊಳಿಸುತ್ತಾರೆ.

"ಆಧುನಿಕ ಜಗತ್ತಿನಲ್ಲಿ ಹಣ ಸಂಪಾದಿಸಲು ಹೋದಾಗ ಆದರ್ಶಗಳಿಗೆ ಮತ್ತು ತಾಳ್ಮೆಗೆ ಬೆಲೆಯಿರುವುದಿಲ್ಲ." ಮುಂದುವರೆದಂತೆ ಸಂಸಾರದ ಮೇಲೆ ವ್ಯತಿರಿಕ್ತ ಪರಿಣಾಮ ಉಂಟುಮಾಡುತ್ತದೆ ಎಂಬುದನ್ನು ತೇಜಸ್ವಿಯವರ 'ತುಕ್ಕೋಜಿ' ಕಥೆಯಲ್ಲಿ ನೋಡಬಹುದಾಗಿದೆ. ಕಥೆಯ ನಾಯಕ ತುಕ್ಕೋಜಿಯ ಮನೆತನದ ವೃತ್ತಿ ದರ್ಜಿಯದಾಗಿರುತ್ತದೆ. "ಅವನ ತಂದೆ ಹಾಸನದಲ್ಲಿ ಹೆಸರಾಂತ ಬಟ್ಟೆಯ ವ್ಯಾಪಾರಿಯಾಗಿರುತ್ತಾನೆ. ಟೈಲರ್ ವೃತ್ತಿಯವನು. ಆತನ ತಂದೆ ಹೆಸರಾಂತ ಬಟ್ಟೆ ವ್ಯಾಪಾರಿ. ಆದರೆ ಮದುವೆ

ಸಮಯದಲ್ಲಿ ತುಕ್ಕೋಜಿ ತಂದೆಗೆ ಅವಿಧೇಯನಾಗಿ ಅನೇಕ ವರದಕ್ಷಿಣೆ ಸಹಿತವಾಗಿ ಬಂದ ಹೆಣ್ಣುಗಳನ್ನು ತಿರಸ್ಕರಿಸಿ, ಕೃಷ್ಣಾಬಾಯಿ ಎಂಬ ವಿಧವೆಯೊಬ್ಬರ ಮಗಳಾದ ಸರೋಜಳನ್ನು ಹಠದಿಂದ ಮದುವೆಯಾಗಿದ್ದನು. ಈ ಕಾರಣಕ್ಕಾಗಿ ರಾದ್ಧಾಂತವಾಗಿ ತುಕ್ಕೋಜಿ ತಂದೆಯ ಆಸ್ತಿಪಾಸ್ತಿಯನ್ನೆಲ್ಲಾ ತಿರಸ್ಕರಿಸಿ ಹೆಂಡತಿಯೊಂದಿಗೆ ಹೊಸದಾಗಿ ಪೇಟೆಯಾಗಿ ರೂಪುಗೊಳ್ಳುತ್ತಿದ್ದ ಗುರುಗಳ್ಳಿಗೆ ಬಂದಿದ್ದನು. ತುಕ್ಕೋಜಿ ಕೈಯಲ್ಲಿ ಕಾಸಿಲ್ಲದ ಬಡವನಾಗಿದ್ದರೂ ಅವನೇನೂ ಅದಕ್ಕೆ ಹೆದರುತ್ತಿರಲಿಲ್ಲ. ಏಕೆಂದರೆ ಅನುವಂಶಿಕವಾಗಿ ಬಂದ ಹೊಲಿಗೆ ವಿದ್ಯೆ ಅವನಿಗೆ ಅಭಯಹಸ್ತದಂತೆ ಇತ್ತು."[೧]

ವ್ಯಕ್ತಿಯು ತನ್ನ ಜ್ಞಾನ ಮತ್ತು ದೈಹಿಕ ಕ್ಷಮತೆಯ ಆಧಾರದ ಮೇಲೆಯೆ ವೃತ್ತಿ ನಿರ್ಧರಿಸಿಕೊಳ್ಳುತ್ತಾನೆ. ಆ ವ್ಯಕ್ತಿಗೆ ಇಂಥದೆ ದುಡಿಮೆ ಬದುಕು ಸಾಗಿಸಲು ಅವಶ್ಯಕ 'ವೆಂಬುದೇನು ಇಲ್ಲ. ಅದು ಅವನ ಬದುಕಿಗೆ ಅವಶ್ಯಕವೂ ಅನಿವಾರ್ಯವಾಗಿದೆ. ಹಾಗೆಯೇ ತುಕ್ಕೋಜಿಯು ಅನುವಂಶಿಕವಾಗಿ ಬಂದಿದ್ದ ದರ್ಜಿಯ ದುಡಿಮೆಯನ್ನು ಬದುಕಿನ ನಿರ್ವಹಣೆಗಾಗಿ ಬಳಸಿಕೊಳ್ಳುತ್ತಾನೆ. ಇಲ್ಲಿ ಆತನಿಗೆ ಅನುವಂಶಿಕ ಮತ್ತು ಜಾತಿಯ ಹಿನ್ನೆಲೆ ದುಡಿಮೆ ನಿರ್ಧರಿಸುತ್ತದೆಂಬುದನ್ನು ನೋಡಬಹುದಾಗಿದೆ.

ಕಷ್ಟ ಪಟ್ಟು ದುಡಿಯುವ ದುಡಿಮೆಗಾರರಿಗೆ ಸಮಸ್ಯೆಗಳು ಮತ್ತು ಅವಮಾನಗಳು ಹೆಚ್ಚಾಗಿರುತ್ತವೆಂಬುದನ್ನು ತೇಜಸ್ವಿಯವರ 'ಕುಬಿ ಮತ್ತು ಇಯಾಲ' ಕಥೆಯಲ್ಲಿನ ರೆಹಮಾನ್ ಮತ್ತು ರಂಗ ಎಂಬ ಹಮಾಲಿಗಳ ವಿಚಾರವಾಗಿ ನೋಡಬಹುದಾಗಿದೆ. ಕಥೆಯಲ್ಲಿನ ಬೈರಾಪುರದಲ್ಲಿ ಯಾವುದೇ ಕಳ್ಳತನಗಳಾದರೂ ಅದು ಹಮಾಲಿಗಳ ಕಾರಣದಿಂದ ಎಂದು ಪೊಲೀಸರು ನಿರ್ಧರಿಸಿರುತ್ತಾರೆ. ಆದರೆ ವಾಸ್ತವದಲ್ಲಿ ಯಾವುದೆ ತಪ್ಪನ್ನು ಮಾಡದ ಹಮಾಲಿಗಳು ಪೋಲೀಸರ ವಕ್ರದೃಷ್ಟಿಗೆ ಸಿಲುಕಿ ಬಲಿಪಶುಗಳಾಗುತ್ತಾರೆ. ಊರಿನಲ್ಲಿ ನಡೆಯುವ ಎಲ್ಲಾ ಸಮಸ್ಯೆಗಳು ಈ ಹಮಾಲಿಗಳಿಂದ ಎಂದು ಅವರ ಮೇಲೆ ಪೊಲೀಸರು ದೌರ್ಜನ್ಯವೆಸಗುತ್ತಾರೆ. ಸಮಾಜ ಸಹಜವಾಗಿ ಬಲ್ಲಿದರ ಕೋಪವನ್ನು ಅಸಹಾಯಕರ ಮೇಲೆ ತೀರಿಸಿಕೊಳ್ಳುವ ಅಧಿಕಾರಿಶಾಹಿ ವರ್ಗ ಇರುತ್ತದೆ. ಪ್ರಬಲ ಜಾತಿಗಳ ವ್ಯಕ್ತಿಗಳ ತಿಕ್ಕಾಟದಲ್ಲಿ ಅಮಾಯಕ ದುಡಿಮೆಗಾರರು ಬಲಿಪಶುಗಳಾಗುವುದನ್ನು ಕಥೆಗಾರರು ಓದುಗನಿಗೆ ನೀಡುತ್ತಾರೆ.

ಆಧುನಿಕತೆಯ ದುಡಿಮೆಗಳ ಜ್ಞಾನ ವ್ಯಕ್ತಿಗೆ ಇಲ್ಲವಾದರೆ ಆಗುವ ಸಮಸ್ಯೆಗಳು ಅನೇಕ. ಅದರ ಒಳಹೊರಗುಗಳನ್ನು ತಿಳಿದುಕೊಳ್ಳುವ ವ್ಯಕ್ತಿಗೆ ಮಾತ್ರ ದುಡಿಮೆಯ ತಂತ್ರಗಾರಿಕೆಯನ್ನು ತಿಳಿಯಲು ಸಾಧ್ಯವಾಗುತ್ತದೆ. ವ್ಯಕ್ತಿಗಳ ವೃತ್ತಿ ಪ್ರವೃತ್ತಿಗಳು ಕೂಡ ಭಿನ್ನವಾಗಿರುತ್ತವೆ. ಅವೆರಡಕ್ಕೂ ಸರಿಸಮಾನವಾದ ನ್ಯಾಯ ಒದಗಿಸಲು ಸಾಧ್ಯವಿಲ್ಲವೆಂಬುದನ್ನು ಪ್ರಸ್ತುತ ಸಮಾಜದಲ್ಲಿ ನೋಡಬಹುದು. ಈ ರೀತಿಯ ಪರಿಕಲ್ಪನೆಯು ತೇಜಸ್ವಿಯವರ

'ಅಬಚೂರಿನ ಪೋಸ್ಟಾಫೀಸು' ಕಥೆಯಲ್ಲಿ ಪ್ರಸ್ತಾಪವಾಗಿದೆ. ಆಧುನಿಕತೆ ಹಳ್ಳಿಗೆ ಬಂದಾಗ ಆಗುವ ತಲ್ಲಣಗಳನ್ನು 'ಅಬಚೂರಿನ ಪೋಸ್ಟಾಫೀಸು' ಕಥೆಯ ಮೂಲಕ ತಿಳಿಯಬಹುದು. ಬೋಬಣ್ಣನು ಅಲ್ಲೀಜಾನ್ ಸಾಬರ ತೋಟದಲ್ಲಿ ರೈಟರ್ ಕೆಲಸಕ್ಕೆ ಸೇರಿದ್ದವನಾಗಿರುತ್ತಾನೆ. ಹಾಗೆಯೇ ಬೋಬಣ್ಣನಿಗೆ ಹೆಚ್ಚುವರಿಯಾಗಿ 'ಪೋಸ್ಟ್ ಮಾಸ್ಟರ್' ಹುದ್ದೆಯೂ ಲಭಿಸಿರುತ್ತದೆ. ಎರಡನ್ನೂ ಸರಿದೂಗಿಸುವಲ್ಲಿ ಬೋಬಣ್ಣನು ಸೋಲುತ್ತಾನೆ. ಬೋಬಣ್ಣನ ವಿವೇಕರಹಿತವಾದ ಯೋಚನೆಗಳಿಂದ ಸಾಂಸಾರಿಕ ಬದುಕು ಕೂಡ ದಾರಿ ತಪ್ಪುತ್ತದೆ. ಅಂತಿಮವಾಗಿ ಊರನ್ನೆ ಬಿಡುವ ಪ್ರಸಂಗ ಕಥೆಯಲ್ಲಿ ಅನಾವರಣಗೊಂಡಿದೆ. ಬೋಬಣ್ಣನಂತಹ ಇಬ್ಬಂದಿತನದ ಮನಸ್ಸುಗಳು ಸಮಾಜದಲ್ಲಿ ಸರ್ವೇಸಾಮಾನ್ಯವಾಗಿರುತ್ತವೆ. ಎಲ್ಲವನ್ನೂ ಪಡೆಯುವ ಉತ್ಸಾಹ ಅಥವಾ ಅನಿವಾರ್ಯತೆಯೂ ಅವುಗಳನ್ನು ಸರಿದೂಗಿಸಿಕೊಂಡು ಹೋಗುವಲ್ಲಿ ಸೋಲುತ್ತವೆ.

ತೇಜಸ್ವಿಯವರ 'ತಬರನ ಕಥೆ'ಯಲ್ಲಿ ಕೆಲಸ ಮಾಡುವ ಅಧೀನ ವ್ಯಕ್ತಿಗಳು ಅಧಿಕಾರಶಾಹಿ ಸರ್ಕಾರದ ಅಡಿಯಲ್ಲಿ ದುಡಿಮೆಯ ಹಂತವನ್ನು ದಾಟಿದ ನಂತರ ನಿವೃತ್ತಿಯಾಗಿ ಪ್ರತಿಫಲದ ಫಲಾಪೇಕ್ಷೆಯಾಗಿ ಪಿಂಚಣಿಯನ್ನು ಪಡೆಯುತ್ತಾರೆ. ಅದು ಒಂದು ನಿರ್ದಿಷ್ಟ ರೂಪದ ವಂತಿಕೆಯಾಗಿರುತ್ತದೆ. ಆದರೆ, ಆ ವಂತಿಕೆಯೂ ನಿವೃತ್ತ ನೌಕರನಿಗೆ ಸುಲಭವಾಗಿ ಸಿಗುವ ಸ್ಥಿತಿಯಲ್ಲಿರುವುದಿಲ್ಲ. ಪಿಂಚಣಿಯನ್ನು ಪಡೆಯುವ ವ್ಯಕ್ತಿಯು, ಅನುಮೋದನೆಯನ್ನು ನೀಡುವ ಅಧಿಕಾರಿ ಶಾಹಿ ವರ್ಗಕ್ಕೆ ಭಕ್ಷೀಸು ರೂಪದಲ್ಲಿ ಲಂಚವನ್ನು ನೀಡಿದಾಗ ಮಾತ್ರ ನಿವೃತ್ತನಿಗೆ ಪಿಂಚಣಿ ಸಿಗುತ್ತದೆ. ಒಂದು ವೇಳೆ ತಪ್ಪಿದರೆ ಅದನ್ನು ಪಡೆಯುವುದಕ್ಕಾಗಿ ಪರದಾಡ ಬೇಕಾಗುತ್ತದೆ. ಕೆಲವೊಮ್ಮೆ ಅದು ದೊರಕದೆ ಹೋಗಬಹುದು. ಕಥೆಯಲ್ಲಿನ ತಬರನು ತನ್ನ ಹೆಂಡತಿಯಾದ ಅಪ್ಪಮ್ಮ(ಅಪ್ಪಿ)ಳ ಕಾಯಿಲೆಗೆ ಚಿಕಿತ್ಸೆಯನ್ನು ಕೊಡಿಸಲಾರದೆ ಅಸಹಾಯಕನಾಗುತ್ತಾನೆ. ಹೆಂಡತಿ ಸಾಯುತ್ತಾಳೆ. ತಬರನು ಸಮಾಜದ ಅಸಹಾಯಕ ವ್ಯಕ್ತಿಯ ಪ್ರತಿನಿಧಿಯಾಗಿ ಕಾಣುತ್ತಾನೆ. ದೇಶದ ಸ್ವಾತಂತ್ರ್ಯವನ್ನು ಒಪ್ಪಿಕೊಳ್ಳುವುದಕ್ಕಿಂತ ಬ್ರಿಟೀಷರ ಆಡಳಿತ ಮೇಲು ಎಂಬ ಮನಸ್ಥಿತಿಗೆ ಬರುತ್ತಾನೆ. ಆತನ ಈ ರೀತಿಯ ಹತಾಶೆಯ ಹೇಳಿಕೆಯು ದೇಶದ ಸ್ವಾತಂತ್ರ್ಯವು ಉಳ್ಳವರ ಪರವಾಗಿಯೆ ಇದೆ ಎಂಬುದನ್ನು ತಿಳಿಸುತ್ತದೆ.

'ನಿಗೂಢ ಮನುಷ್ಯರು' ಕಥೆಯಲ್ಲಿನ ಜಗನ್ನಾಥನ ಭೂಮಿ ಕೊಳ್ಳುವ ಆಸೆ, 'ಅಬಚೂರಿನ ಪೋಸ್ಟಾಫೀಸು' ಕಥೆಯ ರೈಟರ್ ಜೊತೆಗೆ ಪೋಸ್ಟ್‌ಮಾಸ್ಟರ್ ಬೋಬಣ್ಣನ ದುಡಿಮೆಯ ಬದುಕಿನ ನಡವಳಿಕೆಗಳು, 'ಕಿರಗೂರಿನ ಗಯ್ಯಾಳಿಗಳು' ಕಥೆಯ ಕೂಲಿ ಮಾಡುವ ಹರಿಜನರ ಮೇಲಿನ ಅನುಮಾನಗಳು ಮತ್ತು ತಿರಸ್ಕಾರಗಳು, 'ಕುಬಿ ಮತ್ತು ಇಯಾಲ' ಕಥೆಯ ಹಮಾಲಿಗಳ ಮೇಲಿನ ಕ್ರೌರ್ಯ, 'ತುಕ್ಕೋಜಿ' ಕಥೆಯ ತುಕ್ಕೋಜಿಯ ದರ್ಜಿಕೆಲಸದಲ್ಲಿನ ಬದಲಾವಣೆಗಳು, 'ತಬರನ ಕಥೆ'ಯ ತಬರನ ನಿವೃತ್ತ ಬದುಕು,

ಇವೆಲ್ಲಾ ಕಥೆಗಳ ಪಾತ್ರಗಳಲ್ಲಿ ತೇಜಸ್ವಿಯವರು ಸಮಾಜದ ಶ್ರಮಿಕ ವರ್ಗದ ಬದುಕಿನ ಚಿತ್ರಣವನ್ನು ತರುತ್ತಾರೆ. ಈ ರೀತಿಯ ವಿಚಾರಗಳನ್ನು ಲಂಕೇಶರ ಕಥೆಗಳಲ್ಲಿ, ದುಡಿಯುವ ವರ್ಗದ ಆಸೆ- ಆಕಾಂಕ್ಷೆಗಳು, ದಿಕ್ಕು ತಪ್ಪುವ ರೀತಿಯನ್ನು ನೋಡಬಹುದಾಗಿದೆ.

ಲಂಕೇಶರು ದುಡಿಮೆಯ ಆಗು-ಹೋಗುಗಳನ್ನು ಕಥೆಯ ಮೂಲಕ ಸಹಜವಾಗಿ ನಿರೂಪಿಸುತ್ತಾರೆ. ಗ್ರಾಮೀಣ ಭಾರತದ ಮುಖ್ಯ ಕಸುಬು ಬೇಸಾಯವಾಗಿದೆ. ಬಹುಪಾಲು ಸಂದರ್ಭಗಳಲ್ಲಿ ವಂಶಿಕವಾಗಿ ಬರುವ ದುಡಿಮೆಗಳನ್ನು ಸುಲಭವಾಗಿ ಬದಲಾಯಿಸಲು ಸಾಧ್ಯವಿಲ್ಲ. ಒಂದು ವೇಳೆ ಬದಲಾವಣೆಗಳನ್ನು ಮಾಡಿಕೊಳ್ಳಲು ಯೋಚಿಸಿದರೆ ಅದರ ಸಾಧಕ-ಬಾಧಕಗಳನ್ನು ಅನುಭವಿಸಿಯೇ ತೀರಬೇಕು. ಬಹುಪಾಲು ಭಾರತೀಯ ರೈತನು ತನ್ನ ದುಡಿಮೆಯನ್ನು ಪ್ರೀತಿಸಿ ಅನಿವಾರ್ಯವಾಗಿ ಒಪ್ಪಿಕೊಂಡರೂ ತನ್ನ ಮುಂದಿನ ತಲೆಮಾರಿಗೆ ಬಳುವಳಿಯಾಗಿ ಬಿಟ್ಟುಕೊಡುವುದಿಲ್ಲ. ತಾನು ದುಡಿಮೆಯಲ್ಲಿ ಅನುಭವಿಸಿದ ಕಷ್ಟಗಳನ್ನು ಮುಂದಿನ ಜನಾಂಗಕ್ಕೆ ವರ್ಗಾಯಿಸುವ ಮನಸ್ಥಿತಿಯನ್ನು ಹೊಂದಿರುವುದಿಲ್ಲ. ಆತನು ತನ್ನ ಮಕ್ಕಳು ಬೇಸಾಯದ ದುಡಿಮೆಯಿಂದ ಹೊರಬರಲಿ ಎಂದು ಆಶಿಸುತ್ತಾನೆ. ಅದಕ್ಕಾಗಿ ಶಿಕ್ಷಣವನ್ನು ಕೊಡಿಸುವ ಮೂಲಕ ಬದಲಾವಣೆಯನ್ನು ಬಯಸುತ್ತಾನೆ. ಒಂದು ವೇಳೆ ಮಕ್ಕಳು ಅದರ ಲಾಭವನ್ನು ಪಡೆಯದಿದ್ದರೆ ಸಹಜವಾಗಿ ಕೋಪ, ನೋವು, ಹತಾಶೆಯನ್ನು ಹೊಂದಿ ಅಸಹಾಯಕನಾಗುತ್ತಾನೆ.

ಲಂಕೇಶರ 'ಕೊನೆ' ಕಥೆಯಲ್ಲಿನ ನಂಜಣ್ಣನು ತನ್ನ ಮಗನಾದ ಉಜ್ಜನಿಗೆ ಶಿಕ್ಷಣವನ್ನು ಮೊಟಕುಗೊಳಿಸಿ, ಬೇಸಾಯವನ್ನು ಮಾಡದೆ ಬೇಜವಬ್ದಾರಿಯುತ ಬದುಕನ್ನು ನಡೆಸುವ ರೀತಿಯಿಂದ ಕೋಪಗೊಂಡು ಜರಿಯುತ್ತಾನೆ. "ಚಂಜೆ ಆತೂಂದ್ರೆ ಕೂಳಿಗೆ ಕಾಯಾಕೆ ಹೇಸಿಗೆಯಾಗಬ್ಯಾಡ್ವ? ಬರ್ತಾ ಬರ್ತಾ ನಂಗೇನು ವಯಸ್ಸು ಬಂದಾತ? ನಿನ್ನಂಗಿದ್ದಾಗ ಹತ್ತು ಪಟ್ಟಿ ಕಬ್ಬು ಕೊಚ್ಚಿ ಬೆವರು ಚೆಲ್ಲಿ ಅಮ್ಯಾಗೆ ನೀರು ತತ್ತಾ, ರೊಟ್ಟಿ ತತ್ತಾ, ಅಂತಿದ್ದೆ. ಅನ್ನ ಕೇಳಾಕೂ ಮರ್ವಾದಿ, ಮುಖ ಬೇಕು ಕಣಲಾ. ಆ ಮೂಲೆಮನಿ ಕುಂಟುಹುಡುಗನ ತುಣ್ಣಿ ಮ್ಯಾಲೆ ಕೂತ್ಕೊಂಡಾದ್ರೂ ಬಾ, ಬುದ್ಧಿ ಬಂದಾತು, ಒಂದೇ ಕಾಲಿನಾಗೆ ಹಾಳಿ ಉಕ್ಕೆ ಹೊಡೀತಾನೆ. ಹಂಗಿಲ್ಲದೆ ಆ ತಬ್ಬಲಿಗೆ ಒಂದು ಗುಕ್ಕು ಅನ್ನ ಹಾಕ್ಯಾರ ಅವರು? ಒಟ್ಟಿನಾಗೆ ನನ್ನ ಹಣೆಬರಾ. ಹುಟ್ಟಿದೆ ನೀನು ಸೂಳೆಮಗ. ಅತ್ತ ಅಕ್ಸರ ಇಲ್ಲ. ಇತ್ತ ಬ್ಯಾಸಾಯ ಇಲ್ಲ. ಹೋದ ವರ್ಸ ಬಂದ ಐನೂರು ರೂಪಾಯಿ ಎತ್ಗೊಂಡೋಗಿ ಮದ್ರಾಸು, ಮುಂಬಯಿ ನೋಡಿ ಬಂದೆ. ನಿನ್ನ ಜನ್ಮಕ್ಕೀಟು ಬೆಂಕಿ ಹಾಕಾ; ಒಟ್ಟಿನಾಗೆ, ನಾ ಪಡಕೊಂದು ಬರ್ಲ್ಲಲ್ಲ; ಕೂಳು ತಿಂತಾ ಕುಂತರೆ ವಾಂತಿ ಆಗ್ತೈತಿ. ಬೇವಾರ್ಸಿ ನಾಯಿ ಹಂಗೆ ನೀ ಕುಂತಿರೋದು ನೋಡಿ ನನ್ನ ಕರಕೊಳ್ಳೋ ಕೊಟ್ರ ಬಸವ-ನಿನ್ನ ಮನೆ ಹಾಳಾಗ - ಅಂದೆ, ಕೇಳಿದನಾ ದೇವ್ರು? ಮೊಸರು ಕಡಿಯಾಕೆ ನಿಂತ್ರೆ ಎದೆಯಾಗೆ ಅಕ್ಕಿ ಕುಟ್ಟಿದಂಗಾಗ್ತೈತಿ...."[೨]

ಕಥೆಯಲ್ಲಿನ ತಂದೆಯ ಮಾತುಗಳಲ್ಲಿರುವ ಯಾತನೆಯ ಮಾತುಗಳೆಲ್ಲವೂ ಗ್ರಾಮೀಣ ಭಾಗದ ಬೇಸಾಯದ ದುಡಿಮೆಯನ್ನು ನೆಚ್ಚಿಕೊಂಡಿರುವ ವ್ಯಕ್ತಿಯಲ್ಲಿನ ಅಂತರಂಗದ ವೇದನೆಯ ಮಾತುಗಳಾಗಿವೆ. ಜವಬ್ದಾರಿಯನ್ನು ಮರೆತ ಮಗನಿಂದ ತಂದೆಯೂ ಹೇಗೆ ತಾನೆ ಆಸರೆಯ ನಿರೀಕ್ಷೆಯನ್ನು ಮಾಡಲು ಸಾಧ್ಯ? ಎಂಬುದನ್ನು ಈ ಕಥೆಯಲ್ಲಿ ಕಾಣಬಹುದಾಗಿದೆ.

ನಗರೀಕರಣಗಳ ವೇಗದ ನಿಯಂತ್ರಣಕ್ಕೆ ಮದ್ದು ಗ್ರಾಮೀಣ ಭಾಗವನ್ನು ಉತ್ತಮಪಡಿಸುವುದು. ಬದಲಾಗುತ್ತಿರುವ ನಗರೀಕರಣ ಮತ್ತು ಗ್ರಾಮೀಣ ಬದುಕಿನ ರೀತಿಗಳನ್ನು ತಿಳಿದಿದ್ದ ಲಂಕೇಶರು, ಬದುಕನ್ನು ಅರಸಿ ನಗರಕ್ಕೆ ವಲಸೆ ಹೋಗುವ ಜನರು ತಮ್ಮ ಪಿತ್ರಾರ್ಜಿತ ಜಮೀನನ್ನು ಮಾರಾಟಮಾಡಲು ಮುಂದಾಗುವ ರೀತಿಯನ್ನು, ಅದರಿಂದಾಗುವ ಲಾಭ-ನಷ್ಟಗಳನ್ನು 'ಮಾರಲಾಗದ ನೆಲ' ಕಥೆಯ ಮೂಲಕ ನಿರೂಪಿಸುತ್ತಾರೆ. ಭರಮಪ್ಪನ ಮಗ ವಿಶ್ವನಾಥನು ತನ್ನ ಪಿತ್ರಾರ್ಜಿತ ಆಸ್ತಿಯನ್ನು ಮಾರಲು ನಗರದಿಂದ ಊರಿಗೆ ಹೋಗುತ್ತಾನೆ. ಆದರೆ ಊರಿನಲ್ಲಿ ಆಗುವ ಅನಾಹುತಗಳು ತಂತ್ರಗಳನ್ನು ತಿಳಿಯಲಾರದ ವಿಶ್ವನಾಥನು ಭೂಮಿಯನ್ನು ಮಾರಲಾರದೆ ಹಿಂತಿರುಗುತ್ತಾನೆ. ಬೇಸಾಯದ ದುಡಿಮೆಯಿಂದ, ನಗರದಲ್ಲಿ ದುಡಿಯುವ ದುಡಿಮೆಗೆ ಬದಲಾಗಿರುತ್ತಾನೆ. ಬೇಸಾಯ ಮಾಡುವ ಭೂಮಿಯ ವ್ಯಾಮೋಹದಿಂದ ದೂರವಾಗಿ ಅದನ್ನು ಮಾರಿ ತಾನು ಹಣವನ್ನು ಪಡೆಯಲು ಮುಂದಾಗುತ್ತಾನೆ. ಬಹುಪಾಲು ಜನಾಂಗದವರು ಬೇಸಾಯದ ಸಂಬಂಧವನ್ನು ಕಡಿದುಕೊಳ್ಳುವ ರೀತಿಗಳ ಬಗ್ಗೆ ಕಥೆ ತಿಳಿಸುತ್ತದೆ. ಅದು ಅನಿವಾರ್ಯವೋ ಅವಶ್ಯಕತೆಯೋ ಎನ್ನುವುದಕ್ಕಿಂತ, ಬದುಕಿನ ಜೀವಾಳವಾಗಿದ್ದ ಭೂಮಿಯನ್ನು ಮತ್ತೊಬ್ಬರಿಗೆ ಪರಭಾರೆ ಮಾಡುವ ಮನಸ್ಥಿತಿಯಿಂದ ಇಂದು ನಗರೀಕರಣ ಹೆಚ್ಚಳಕ್ಕೆ ಕಾರಣವಾಗಿದೆ ಎಂಬುದನ್ನು ತೋರಿಸುತ್ತದೆ.

ಜಾತಿಗಿಂತ ವೃತ್ತಿ ಧರ್ಮ ದೊಡ್ಡದು. ದುಡಿಮೆಯ ಮಹತ್ವದಿಂದಲೇ ವ್ಯಕ್ತಿ ಪರಿಚಯವಾಗಬೇಕೇ ಹೊರತು ಜಾತಿಯಿಂದಲ್ಲವೆಂಬುದು, ಅರೋಗ್ಯ ಸಮಾಜದ ಅತಿಮುಖ್ಯ ಯೋಚನೆಗಳಲ್ಲಿ ಒಂದು. ವ್ಯಕ್ತಿಯು ಜಾತಿಯನ್ನು ಪ್ರಧಾನವಾಗಿಟ್ಟುಕೊಂಡು ವೃತ್ತಿ ನೋಡಿದರೆ ಅದರಿಂದಾಗುವ ಅನಾಹುತಗಳು ತಮ್ಮ ಮೇಲೆಯೇ ಹೆಚ್ಚಾಗಿರುತ್ತವೆಂಬುದನ್ನು 'ಮುಟ್ಟಿಸಿಕೊಂಡವನು' ಕಥೆಯಲ್ಲಿ ನೋಡಬಹುದು. ತಿಮ್ಮಪ್ಪನು ವೃತ್ತಿಯಲ್ಲಿ ವೈದ್ಯನಾಗಿರುತ್ತಾನೆ. ಜಾತಿಯಲ್ಲಿ ಹೊಲೆಯನಾಗಿರುತ್ತಾನೆ. ಬಸಲಿಂಗನೆಂಬ ರೈತನಿಗೆ ಭೂಮಿಯಲ್ಲಿ ಬಿತ್ತನೆ ಹಾಕುವ ವೇಳೆಗೆ ಕಣ್ಣಿನ ನೋವು ಕಾಣಿಸಿಕೊಳ್ಳುತ್ತದೆ. ಆತನಿಗೆ ತನ್ನ ಕಣ್ಣಿನನೋವಿನ ಮುಂದೆ ಕುಟುಂಬ, ವ್ಯವಸಾಯ ಗೌಣವಾಗುತ್ತದೆ. ತನ್ನ ಕಣ್ಣಿನ ನೋವಿನ ಪರಿಹಾರಕ್ಕಾಗಿ ತಿಮ್ಮಪ್ಪ ವೈದ್ಯನ ಬಳಿ ಹೋಗಿ ಚಿಕಿತ್ಸೆ ಪಡೆಯುತ್ತಾನೆ.

ಆದರೆ ಆತನ ಹೆಂಡತಿಯ ಜಾತಿಯ ಮಾತುಗಳಿಂದ ಕಂಗಲಾಗುತ್ತಾನೆ. ವೈದ್ಯನ ಎಚ್ಚರಿಕೆಯ ಮಾತುಗಳನ್ನು ಮೀರಿ ನಡೆಯುತ್ತಾನೆ. ಜಾತಿ ಬೆನ್ನು ಹತ್ತಿದ್ದ ಬಸಲಿಂಗನು ತನ್ನ ಒಂದು ಕಣ್ಣನ್ನು ಕಳೆದುಕೊಳ್ಳುತ್ತಾನೆ. ಕಾಕತಾಳೀಯವೆಂಬಂತೆ ಮತ್ತೊಂದು ಕಣ್ಣಿನ ಬೇನೆ ಪ್ರಾರಂಭವಾದಾಗ ತಿಮ್ಮಪ್ಪನನ್ನು ಬಿಟ್ಟು ಉಳಿದ ವೈದ್ಯರ ಬಳಿಗೆ ಔಷೋಧೋಪಚಾರ ಮಾಡಿಸಿಕೊಳ್ಳಲು ಪ್ರಯತ್ನಿಸಿ ಸೋಲುತ್ತಾನೆ. ಅಂತಿಮವಾಗಿ ತಿಮ್ಮಪ್ಪನ ಬಳಿ ಆ ಕಣ್ಣಿಗೆ ಚಿಕಿತ್ಸೆಯನ್ನು ಪಡೆದು ನೋವಿನಿಂದ ಮುಕ್ತನಾಗುತ್ತಾನೆ. ಜಾತಿಯ ಮನಸ್ಥಿತಿಯಿಂದ ಹೊರಬಂದು ತಿಮ್ಮಪ್ಪನ ವೈದಕೀಯ ಸೇವೆಗೆ ಒಳಗಾದ ಪರಿಣಾಮದಿಂದ, ಬಸಲಿಂಗ ದೈಹಿಕ ಹಾಗೂ ಮಾನಸಿಕ ಕಾಯಿಲೆಯಿಂದ ದೂರವಾಗುತ್ತಾನೆ. ದುಡಿಮೆಯ ವ್ಯಕ್ತಿ ಅನಾರೋಗ್ಯ ಪೀಡಿತನಾದರೆ ಆಗುವ ಅನಾಹುತಗಳು ಹೆಚ್ಚಾಗಿರುತ್ತವೆ. ಜಾತಿಯಿಂದ ಮನಷ್ಯನನ್ನು ಅಳೆಯಲು ಹೋದರೆ ತಾವೇ ನಷ್ಟ ಅನುಭವಿಸುವ ಸ್ಥಿತಿ ಈ ಕಥೆಯಲ್ಲಿ ಅನಾವರಣಗೊಂಡಿದೆ.

ಮಾತಿನ ಜಾಣ್ಮೆಯಿರಬಹುದು, ದೈಹಿಕ ಚಟುವಟಿಕೆಗಳ ಕಾಯಕವಾಗಿರಬಹುದು. ವೃತ್ತಿಯ ಬಗ್ಗೆ ಜ್ಞಾನ ಅವಶ್ಯಕವಾಗಿ ಇರಬೇಕು. ಲಂಕೇಶರ ಮತ್ತೊಂದು ಕಥೆಯಾದ 'ಡಿಸೋಜನ ಊವಿನ ವೃತ್ತಿ' ಕಥೆಯಲ್ಲಿ ಡಿಸೋಜನೆಂಬ ವ್ಯಕ್ತಿಯು ಮುಗ್ಧ ಆರ್.ಎಸ್.ಎಸ್‌ನ ದೇಶಪ್ರೇಮಿ. ಕಿತ್ತು ತಿನ್ನುವ ಬಡತನ. ಬದುಕಿನ ನಿರ್ವಹಣೆಗಾಗಿ ಹೂವಿನ ವ್ಯಾಪಾರಿಯಾಗುತ್ತಾನೆ. ಆತನ ವ್ಯಾಪಾರ ನಗರೀಕರಣದ ಪ್ರಭಾವದಿಂದ ಹೂವಿನ ಹೆಸರುಗಳನ್ನು ಶಿಷ್ಟರೂಪದ ಮಾತುಗಾರಿಕೆಯಲ್ಲಿ ವ್ಯಾಪಾರ ಮಾಡಲು ಹೋಗಿ ಸೋಲುತ್ತಾನೆ. ಮುಂದುವರೆದಂತೆ ಇತರರು ಹೂವಿನ ವ್ಯಾಪಾರ ಮಾಡುವ ಅನುಭವ ಡಿಸೋಜನಿಗೆ ಪಾಠ ಕಲಿಸುತ್ತದೆ. ಸಹಜವಾದ 'ಹೂವು' ಮುಂದೆ 'ಊವಾಗಿ' ಮಾರ್ಪಟ್ಟು ವ್ಯಾಪಾರದ ಕೌಶಲ್ಯತೆ ಸಿದ್ಧಿಸುತ್ತದೆ. "ಬದುಕಿನ ಪಯಣಕ್ಕೆ ದುಡಿಮೆಯು ಕೂಡ ಬದಲಾವಣೆಯನ್ನು ಪಡೆಯುತ್ತದೆ ಎಂಬುದು ಕಥೆಗಾರನ ಮಾತು." ಸಾಮಾಜಿಕ ಬದುಕಿನಲ್ಲಿ ವೃತ್ತಿ ಆಧಾರಿತ ಜಾತಿಗಳು ಕೂಡ ಬದಲಾವಣೆಯಾಗುತ್ತವೆ. ಅಕ್ಕಸಾಲಿಗ ರೈತನಾಗುತ್ತಾನೆ. ರೈತನು ವ್ಯಾಪಾರಿಯಾಗುತ್ತಾನೆ. ಅದೇ ರೀತಿ ವ್ಯಾಪಾರಿಯು ತನ್ನ ವೃತ್ತಿಯನ್ನು ಬದಲಾವಣೆ ಮಾಡಿಕೊಂಡು ಕುಶಲ ಕರ್ಮಿಯಾಗುತ್ತಾನೆ. 'ಉದರ ನಿಮಿತ್ತಂ ಬಹುಕೃತ ವೇಷಂ' ಎಂಬಂತೆ ಹಸಿವು ದುಡಿಮೆಯ ಅನಿವಾರ್ಯತೆಯನ್ನು ಕಲಿಸುತ್ತದೆ.

ಅನಂತಮೂರ್ತಿಯವರು ಪಾಶ್ಚಾತ್ಯ ಸಾಹಿತ್ಯವನ್ನಷ್ಟೇ ಓದದೆ ಪಾಶ್ಚಾತ್ಯ ದೇಶದಲ್ಲಿ ಬದುಕನ್ನು ನಡೆಸಿದವರು. ಆದರೂ ಭಾರತೀಯ ಗ್ರಾಮೀಣ ಪ್ರದೇಶದ ಮನಸ್ಥಿತಿಯನ್ನು ಅರಿತವರಾಗಿದ್ದಾರೆ. ಅವರ ಬಹುಪಾಲು ಕಥೆಗಳಲ್ಲಿ ದುಡಿಮೆಯ ವೈವಿಧ್ಯತೆಯನ್ನು ಕಾಣಲಾಗುತ್ತದೆ. ಅವರ ಕಥೆಯಲ್ಲಿ ರೈತರ ದುಡಿಮೆಯ ಸಂಘರ್ಷವನ್ನು, ಅರವತ್ತರ

ದಶಕದಲ್ಲಿಯೇ ರೈತನ ಸಮಸ್ಯೆಗಳನ್ನು ಕುರಿತು ಐದು ಭಾಗವುಳ್ಳ 'ಮೌನಿ' ಕಥೆಯನ್ನು ಬರೆದಿದ್ದಾರೆ.

'ಮೌನಿ' ಕಥೆ ರೈತನ ಬದುಕಿನ ಸಂಘರ್ಷದ ಚಿತ್ರಣವನ್ನು ನೀಡುತ್ತದೆ. ಕಥೆಯಲ್ಲಿರುವ ಭಾವಿಕೆರೆ ಕುಪ್ಪಣ್ಣಭಟ್ಟರಿಗೂ ಮತ್ತು ಸೀಬಿನ ಕೆರೆ ಅಪ್ಪಣ್ಣಭಟ್ಟರಿಗೂ ಅಡಿಕೆಯ ಬೆಳೆಯ ಒಕ್ಕಲುತನ ಮತ್ತು ಮಾರಾಟದ ವಿಷಯಕ್ಕೆ ಸಂಬಂಧಿಸಿದ ಕಥೆಯಾಗಿದೆ.

ಭಾವಿಕೆರೆಯ ಕುಪ್ಪಣ್ಣಭಟ್ಟ ಸೀಬಿನಕೆರೆ ಅಪ್ಪಣ್ಣಭಟ್ಟ ಇಬ್ಬರಿಗೂ ಹಾವು ಮುಂಗುಸಿಯ ಸಂಬಂಧ. ಇವರ ಮನೆಗಳು ದೂರದ ಗುಡ್ಡಗಳ ನಡುವೆ ಇವೆ. ಒಂದು ಕಣಿವೆಯಲ್ಲಿನ ಬೇಲಿಯ ಆಚೆ ಕುಪ್ಪಣ್ಣಭಟ್ಟರ ತೋಟವಾದರೆ, ಈಚೆ ಅಪ್ಪಣ್ಣಭಟ್ಟರ ತೋಟ. ಇಬ್ಬರೂ ಕೂಡ ಶ್ರೀ ಮಠದ ನರಸಿಂಹದೇವರ ಒಕ್ಕಲಿನವರು. ದುಗ್ಗಾಣಿಯಿಲ್ಲದೆ ಅಡಕೆ ತೋಟ ಮಾಡಲು ಬಂದಿರುತ್ತಾರೆ.

ಇಬ್ಬರೂ ಕೂಡ ಗೋಪಾಲ ಕಮ್ತಿಯ ಅಂಗಡಿಯಲ್ಲಿ ಸಾಲ ಮಾಡುತ್ತಿರುತ್ತಾರೆ. ಅಪ್ಪಣ್ಣಭಟ್ಟರು ವರ್ಷದ ಕೊನೆಯಲ್ಲಿ ಕಮ್ತಿಯ ಲೆಖ್ಖದಲ್ಲಿ ಸಾಲ ಉಳಿಯದಂತೆ ಚುಕ್ತ ಮಾಡುತ್ತಾರೆ. ಆದರೆ ಕುಪ್ಪಣ್ಣಭಟ್ಟರ ಸಾಲ ಪ್ರತಿವರ್ಷವೂ ಹೆಚ್ಚುತ್ತಾ ಹೋಗುತ್ತದೆ.

ಕುಪ್ಪಣ್ಣಭಟ್ಟರು ತನ್ನ ಸುತ್ತಮುತ್ತಲಿನ ರೈತರ ಬಳಿ ಅಡಿಕೆಯನ್ನು ಕೊಂಡುಕೊಳ್ಳಲು ತನ್ನ ಹೆಂಡತಿಯ ಒಡವೆಯನ್ನು ಒತ್ತೆ ಇಡುತ್ತಾರೆ. "ನಿತ್ಯ ಚೀಲದಿಂದ ಕವಡೆ ತೆಗೆದು ಸಾಲಾಗಿ ಜೋಡಿಸಿ ನಿಮಿತ್ಯ ನೋಡಿದರು. ಮತ್ತೆ ಪಂಚಾಗದ ಅಂಚಿನಲ್ಲೆಲ್ಲ ಲೆಕ್ಕ ಮಾಡಿದರು. ಉಬ್ಬಸದ ಮದ್ದಿಗೆಂದಾದ ಸಾಲ ಮೂರು ನೂರು; ಈಗ ಬ್ಯಾಂಕಿನಲ್ಲಿ ಅಡವಿಟ್ಟು ಪಡೆದ ಸಾಲದ ಮೇಲೆ ಬಡ್ಡಿ; ಭಾಗೀರತಿಯ ಮದುವೆಯ ಖರ್ಚು, ಎಲ್ಲಕ್ಕಿಂತ ಮೊದಲು ಬಂಗಾರವನ್ನು ಬ್ಯಾಂಕಿನಿಂದ ತಂದುಬಿಡಬೇಕು. ಮುಂದಿನ ವರ್ಷ ಬೇಕಾದರೆ ಮತ್ತೆ ಅಡವಿಟ್ಟು ಹಣ ಪಡೆದರಾಯಿತು.

ಮತ್ತೆ ಲೆಕ್ಕ ಮಾಡುವರು. ಅಡಿಕೆಯ ದರವೇರಿ ಮಣವೊಂದಕ್ಕೆ ಅರವತ್ತು ರೂಪಾಯಿಯಾದರೂ ಸಿಕ್ಕರೆ ಮಣ ಒಂದರ ಹತ್ತು ರೂ. ಲಾಭ. ಒಟ್ಟು ಒಂದು ಸಾವಿರ ಎರಡುನೂರು ರೂಪಾಯನ್ನು ಕಮ್ತಿಗೆ ಕೊಡುವುದು: ಒಂದ್ಯೆವತ್ತನ್ನು ಡಾಕ್ಟರಿಗೆ ಕೊಡುವುದು; ಮಠಕ್ಕೊಂದು ಇನ್ನೂರ ಐವತ್ತು. ಉಳಿದ ಐನೂರು ಬ್ಯಾಂಕಿನಲ್ಲಿಟ್ಟು, ಎರಡು ಸಾವಿರದ ಐನೂರು ಚಿಲ್ಲರೆಯನ್ನು ಕೊಟ್ಟು ಬಂಗಾರವನ್ನು ಹಿಂದಕ್ಕೆ ತಂದು, ಮತ್ತೆ ಮುಂದಿನ ಸಾರಿ ಬಂಗಾರವನ್ನು ತಿರುಗಿ ಅಡವಿಟ್ಟು, ಒಟ್ಟು ಮೂರು ಸಾವಿರದ ಅಸಲಿನಲ್ಲಿ ವ್ಯಾಪಾರ ಮಾಡುವುದು. ಹೀಗೆ ಹತ್ತು ವರ್ಷ ನಡೆದರೆ ಸಾಕು. ಸಾಲವನ್ನೆಲ್ಲ ತೀರಿಸಿ ಬಿಡಬಹುದು."[3] ಹೀಗೆ ಯೋಚಿಸುತ್ತಾರೆ. ಸಾಲ ಪಡೆದ ಹಣದಿಂದ ಅಡಿಕೆಯನ್ನು ಕೊಂಡುಕೊಳ್ಳುತ್ತಾರೆ. ಉತ್ತಮ ಧಾರಣೆಗೆ ಮಾರಲು ಯತ್ನಿಸುತ್ತಾರೆ. ಆದರೆ ಇವರ

ಲಾಭ ನಿರೀಕ್ಷೆಯಷ್ಟು ಬರುವುದಿಲ್ಲ. ಪುನಃ ಸಾಲದ ಸುಳಿಯಲ್ಲಿ ಸಿಲುಕುತ್ತಾರೆ. ಮತ್ತೊಂದು ಕಡೆ ಅಪ್ಪಣ್ಣಭಟ್ಟರು ವ್ಯವಹಾರಿಕ ಪ್ರತಿಸ್ಪರ್ಧೆಯಲ್ಲಿ ಗೆಲುವನ್ನು ಸಾಧಿಸುವುದಿಲ್ಲ. ಭಾಗೀರತಿಯೆಂಬ ಮಗಳ ಮದುವೆಯ ಕನಸು ನನಸಾಗುವುದಿಲ್ಲ.

ಕುಪ್ಪಣ್ಣಭಟ್ಟರು ವ್ಯಾವಹಾರಿಕವಾಗಿ ಸೋಲುತ್ತಾರೆ. ಸಾಲಗಾರರ ಒತ್ತಾಯದಲ್ಲಿ ನರಳುತ್ತಾರೆ. ಮಠದವರು ಹೀಯಾಳಿಸುತ್ತಾ ವ್ಯಾಪರವಾಗದೆ ಇರುವ ಅಡಿಕೆ, ಜಮೀನನ್ನು ತಮ್ಮ ವಶಕ್ಕೆ ಪಡೆಯುತ್ತಾರೆ. ಮತ್ತೊಂದು ಕಡೆ ಅಪ್ಪಣ್ಣಭಟ್ಟರು ತನ್ನ ತಪ್ಪಿನಿಂದ ಕುಪ್ಪಣ್ಣಭಟ್ಟರಿಗೆ ಸಾಂತ್ವನ ಹೇಳಲು ಬಂದರೂ ಯಾರ ಜೊತೆ ಮಾತನಾಡದ ಕುಪ್ಪಣ್ಣಭಟ್ಟರು ಮೌನವಾಗುತ್ತಾರೆ. ಇಲ್ಲಿ ಸಹಜವಾಗಿ ರೈತನ ನೋವುಗಳು ಅನಾವರಣಗೊಳ್ಳುವುದನ್ನು ನೋಡಬಹುದಾಗಿದೆ.

ಸ್ವಾಭಿಮಾನಿ ರೈತನೊಬ್ಬನ ದುರಂತವನ್ನು ಕಥೆಗಾರರು 'ಮೌನಿ' ಕಥೆಯಲ್ಲಿ ತರುತ್ತಾರೆ. ಕುಪ್ಪಣ್ಣಭಟ್ಟ ಮತ್ತು ಅಪ್ಪಣ್ಣಭಟ್ಟರು ಕೇವಲ ಸಾಮಾನ್ಯ ಮನುಷ್ಯರಂತೆ ಕಂಡರೂ ವ್ಯಕ್ತಿಗಳ ಸಿನಿಕತನ, ಸ್ಪರ್ಧೆ, ದ್ವೇಷ, ರೈತನ ಕುಟುಂಬವನ್ನು ನಾಶಪಡಿಸುತ್ತದೆ ಎಂಬುದನ್ನು ತೋರಿಸಿದ್ದಾರೆ. ಕುಪ್ಪಣ್ಣಭಟ್ಟನು ತಾವು ದುಡಿದ ದುಡಿಮೆಯ ಫಲವನ್ನು ಲಾಭದಾಯಕವಾಗಿ ಪರಿವರ್ತಿಸುವಲ್ಲಿ ಸೋಲುತ್ತಾನೆ. ಸಹಜವಾದ ಗ್ರಾಮೀಣ ಭಾಗದ ರೈತನ ಮನಸ್ಥಿತಿಯೂ ಕೂಡ ಇದೆ ಆಗಿರುತ್ತದೆ. ಲಾಭದ ನಿರೀಕ್ಷೆಯಲ್ಲಿ ದವಸ–ಧಾನ್ಯಗಳನ್ನು ಶೇಖರಿಸುತ್ತಾನೆ. ವ್ಯಾಪಾರ ಮಾಡಲು ಬಂದಾಗ ದೀಢಿರ್ ಕುಸಿತದಿಂದ ಕಂಗಲಾಗುತ್ತಾನೆ. ಒಂದು ಕಡೆ ವೆಚ್ಚ ಮತ್ತೊಂದು ಕಡೆ ಸಾಲ ಅಂತಿಮವಾಗಿ ನಿರೀಕ್ಷೆಯ ಲಾಭದಲ್ಲಿ ಏರುಪೇರು ಆಗುವ ಸನ್ನಿವೇಶವನ್ನು ಅನಂತಮೂರ್ತಿಯವರು ಈ ಕಥೆಯಲ್ಲಿ ನಿರೂಪಿಸಿದ್ದಾರೆ.

ಅನಂತಮೂರ್ತಿಯವರು ಜಾತಿಯಲ್ಲಿ ಗುರುತಿಸಿಕೊಂಡ ವ್ಯಕ್ತಿಯ ಮಹತ್ತರವಾದ ಆಸೆ–ಆಕಾಂಕ್ಷೆಗಳು ಸೋಲುತ್ತವೆ ಎಂಬುದನ್ನು 'ಕಾಮರೂಪಿ' ಕಥೆಯಲ್ಲಿ ತೋರಿಸುತ್ತಾರೆ. ಸ್ವತಃ ನಿರೂಪಕರಾಗಿ ಕಥೆಯನ್ನು ಮುಂದುವರಿಸುತ್ತಾರೆ. ಕಥೆಯ ಪ್ರಮುಖ ವ್ಯಕ್ತಿ. ರಾಜಕೀಯವಾಗಿ ಬೆಳೆಯಲು ಇಂಗ್ಲಿಷ್ ಕಲಿಕೆಯ ಆಸಕ್ತಿ ಹೊಂದಿರುತ್ತಾನೆ. ಶಂಕರ್‌ಬಾಬು ಹೇಳಿಕೊಳ್ಳುವಂತೆ ಯೂತ್ ಕಾಂಗ್ರೆಸ್ ಲೀಡರ್. ಹಾಗೂ ಆಲ್ ಇಂಡಿಯಾ ಬ್ಯಾಕ್‌ವರ್ಡ್ ಸೆಲ್‌ಗೆ ಇನ್‌ವೈಟೀ ಆಗಿ ಮಂತ್ರಿಯಿಂದ ನಾಮಿನೇಟ್ ಆಗಿರುತ್ತಾನೆ. ಮುಂದೆ ಪಬ್ಲಿಕ್ ಸರ್ವಿಸ್ ಕಮಿಷನ್ನಿಗೆ ಛೇರ್ಮನ್ ಅಗುವ ಕನಸು ಕಾಣುತ್ತಿರುತ್ತಾನೆ.

ಶಂಕರ್‌ಬಾಬುವಿನ ತಂದೆಯ ಜಾತಿಯ ಕಸುಬು ಮನೆ ಕಟ್ಟುವುದು. ತಾಯಿಯ ಜೊತೆ ಅವನ ದುಡಿಮೆ. ತಂದೆಯು ದುಡಿದ ಹಣವನ್ನೆಲ್ಲಾ ಕುಡಿತಕ್ಕೆ ನೀಡುತ್ತಿದ್ದ. ಆತನ ತಾಯಿಯೇ ಮಕ್ಕಳನ್ನು ಸಾಕುತ್ತಿದ್ದಳು. ಅಕ್ಕ ಸರೋಜ, ಮತ್ತು ತಂಗಿ ಗೀತಾ ಇದ್ದರು.

ಸರೋಜಳನ್ನು ಮಂತ್ರಿಯೇ ತನ್ನ ಆಪ್ತ ಕಾರ್ಯದರ್ಶಿಗೆ ಕೊಟ್ಟು ಮದುವೆ ಮಾಡಿಸಿರುತ್ತಾನೆ. ಆದರೆ ಆಕೆ ಸೂಯಿಸೈಡ್ ಮಾಡಿಕೊಳ್ಳುತ್ತಾಳೆ. ಇದಕ್ಕೆಲ್ಲಾ ಆ ಆಪ್ತಕಾರ್ಯದರ್ಶಿಯೇ ಕಾರಣವೆಂದು ಶಂಕರ್‌ಬಾಬು ಹೇಳುತ್ತಾನೆ. ಕಾಲಕ್ರಮೇಣ ಗೀತಾಳನ್ನು ಮಂತ್ರಿ ತನ್ನ ಆಪ್ತಕಾರ್ಯದರ್ಶಿಗೆ ಕೊಟ್ಟು ವಿವಾಹ ಮಾಡಿಕೊಡುವಂತೆ ಹೇಳಿ, ರಾಜಕೀಯವಾಗಿ ಉನ್ನತವಾಗಿ ಬೆಳೆಸುತ್ತೇನೆಂದು ಶಂಕರ್‌ಬಾಬುವಿಗೆ ಹೇಳುತ್ತಾನೆ. ಶಂಕರ್‌ಬಾಬುವಿಗೆ ರಾಜಕೀಯವಾಗಿ ಮೇಲೆತ್ತರಕ್ಕೆ ಬೆಳೆಯಬೇಕೆಂಬ ಮಹತ್ತರ ಆಸೆ ಇರುತ್ತದೆ. ಆತನೇ ಹೇಳುವಂತೆ" ನನಗೆ ಒಬ್ಬ ವಿದ್ಯಾರಣ್ಯ ಸಿಕ್ಕರೆ ನಾನೊಂದು ರಾಜ್ಯಾನೇ ಕಟ್ತೀನಿ ಸಾರ್. ಹಾಗೆ ನಾನು ಸೋಲೋ ಕುಳ ಅಲ್ಲ"[9] ಎಂದು ಹೇಳುತ್ತಾನೆ.

ಪಾರಂಪರ್ಯವಾಗಿ ಒಬ್ಬ ವ್ಯಕ್ತಿ, ತನ್ನ ವಂಶಿಕವಾಗಿ ಬಂದಿರುವ ವೃತ್ತಿಯನ್ನು ಬಿಟ್ಟು ಮತ್ತೊಂದು ವೃತ್ತಿಯನ್ನು ಪಡೆಯಲು ಹೋರಾಟವನ್ನೆ ಮಾಡುವ ಕಥೆಯಲ್ಲಿ ಶಂಕರ್‌ಬಾಬು ಕಾಣಿಸಿಕೊಳ್ಳುತ್ತಾನೆ. ಶಂಕರ್‌ಬಾಬು ಒಂದು ಪಾತ್ರವಷ್ಟೆ. ವಾಸ್ತವದಲ್ಲಿ ಒಂದು ವೃತ್ತಿಯಿಂದ ತನ್ನದಲ್ಲದ ಮತ್ತೊಂದು ಕ್ಷೇತ್ರದ ವೃತ್ತಿಯನ್ನು ಪಡೆಯಲು ಸಹಜವಾಗಿ ಮನುಷ್ಯನು ಹೋರಾಡುವುದನ್ನು ನೋಡಬಹುದಾಗಿದೆ.

ಕೆಲವೊಮ್ಮೆ ತಂದೆ ತಾಯಂದಿರು ಮಕ್ಕಳ ವೃತ್ತಿಯನ್ನೆ ಬದಲಾಯಿಸಲು ಯತ್ನಿಸುತ್ತಾರೆ. ತಾವು ಅನುಭವಿಸಿದ ಯಾತನೆಗಳು ತಮ್ಮ ಮಕ್ಕಳಿಗೆ ಬಾರದಿರಲಿ ಎಂಬ ಮನಸ್ಥಿತಿಯನ್ನು ಹೊಂದಿರುತ್ತಾರೆ. ಅದರಲ್ಲೂ ವ್ಯವಸಾಯದ ಕಷ್ಟವನ್ನು ಎಂತಹ ತಂದೆತಾಯಂದಿರು ತಮ್ಮ ಮಕ್ಕಳಿಗೆ ಬೇಡ ಎನ್ನುವ ತೀರ್ಮಾನಕ್ಕೆ ಬರುವುದೇ ಹೆಚ್ಚು. ಅನಂತಮೂರ್ತಿಯವರ 'ಪ್ರಕೃತಿ' ಕಥೆಯಲ್ಲಿ ಇಂತಹ ಒಂದು ಸನ್ನಿವೇಶ ಎದುರಾಗುತ್ತದೆ. ಕಥೆಯಲ್ಲಿ ಬರುವ ಶ್ಯಾನುಭೋಗನು ಆ ಊರಿನ ಸಂಕಪ್ಪಯ್ಯನಿಗೆ "ನನ್ನ ಮಗ ಕಿಟ್ಟಿ, ನಿಮ್ಮ ಮಗ ಸೇರಿ ಹೋಟೆಲು ತೆಗೆಯಬೇಕೆಂದಿದ್ದಾರಂತೆ.....ಯಾಕೆ ಹೇಳಬಂದೆ ಎಂದರೆ ಈ ವ್ಯವಸಾಯದಲ್ಲಿ ಏನೂ ನಫೆ ಇಲ್ಲ. ಗುಡ್ಡಕ್ಕೆ ಸುಮ್ಮನೆ ತಲೆ ಚಚ್ಚಿಕೊಳ್ಳುವುದರ ಬದಲು ಹೋಟೆಲ್ಲಿಟ್ಟರೇ ಫಾಯಿದೆ ಹೆಚ್ಚು....."[10] ಎನ್ನುವ ಶ್ಯಾನುಭೋಗನ ಧೋರಣೆ ಬಹುಪಾಲು ಗ್ರಾಮೀಣ ಭಾಗದ ರೈತರ ಮನಸ್ಸಿನಲ್ಲಿರುವುದೇ ಆಗಿದೆ. ಅರ್ಥಾತ್ ಹೋಟೆಲ್ ಉದ್ಯಮಕ್ಕಿಂತ ಇನ್ನಿತರೆ ಉದ್ಯಮಗಳು, ನೌಕರಶಾಹಿ ವರ್ಗದವರಾಗಿ ತಮ್ಮ ಮಕ್ಕಳು ಇರಬೇಕೆಂಬುದಾಗಿರುತ್ತದೆ. ಇದು ಸಹಜವಾದ ಗ್ರಾಮೀಣ ಭಾರತದ ಸಮಸ್ಯೆ ಕೂಡ ಹೌದು. ಬೆಳೆದ ಬೆಳೆಗೆ ಯೋಗ್ಯ ಬೆಲೆ ನಿಗಧಿಯಾಗದಿರುವುದು, ವಾತಾವರಣ ಪೂರಕವಿಲ್ಲದೆ ಅನುಭವಿಸುವ ಬೆಳೆಯ ನಷ್ಟದಿಂದಾಗಿ ರೈತನು ದುಡಿಮೆಯಿಂದ ವಿಮುಖನಾಗಲು ಬಯಸುತ್ತಾನೆ.

ವ್ಯವಸಾಯದ ದುಡಿಮೆಯು ಭೂಮಿಯ ನಡುವಿನ ನಿಕಟ ಸಂಬಂಧವನ್ನು ಇಟ್ಟುಕೊಂಡಿರುತ್ತದೆ. ಒಂದು ವೇಳೆ ಅತಿವೃಷ್ಟಿ ಅನಾವೃಷ್ಟಿಗಳು ಜರುಗಿದರೆ, ರಾಜ್ಯ-

ರಾಷ್ಟ್ರಗಳಲ್ಲಿ ಸಮಸ್ಯೆಗಳ ಸರಮಾಲೆಯನ್ನೆ ಸೃಷ್ಟಿಸುತ್ತವೆ. ಅಧಿಕಾರ, ರಾಜಕೀಯ ಪರಿಸ್ಥಿತಿಗಳು ಅಲ್ಲೋಲ್ಲ ಕಲ್ಲೋಲವಾಗುತ್ತವೆ. ಅನಂತಮೂರ್ತಿಯವರು ಇಂತಹ ಗ್ರಾಮೀಣ ಭಾಗದಲ್ಲಿ ಆಗುವ ಅನಾಹುತಗಳ ಬಗ್ಗೆ 'ಬರ' ಕಥೆಯಲ್ಲಿ ಸ್ಪಷ್ಟವಾಗಿ ನಿರೂಪಿಸುತ್ತಾರೆ.

'ಬರ' ಕಥೆಯಲ್ಲಿ ಬರುವ ಸತೀಶನು ಜಿಲ್ಲಾಧಿಕಾರಿಯಾಗಿದ್ದು, ಆದರ್ಶವನ್ನು ಮೈಗೂಡಿಸಿಕೊಂಡ ಅಧಿಕಾರಿಯಾಗಿರುತ್ತಾನೆ. ಬಡತನದ ಬಗ್ಗೆ ಕಾಳಜಿ ಹೊಂದಿದವನು. ಈತನು ಬರಗಾಲದ ಜಿಲ್ಲೆಗೆ ವರ್ಗಾ ಮಾಡಿಸಿಕೊಂಡು ಬಂದಿರುತ್ತಾನೆ. ಬಾರಿ ಜ್ವರದಂತೆ ಎರಡು ಮೂರು ವರ್ಷಗಳಿಗೊಮ್ಮೆ ಕಾಣಿಸಿಕೊಳ್ಳುವ ಬರಗಾಲವು ಆತನಿಗೆ, ಮನುಷ್ಯನ ಮಿತಿ ಮತ್ತು ಸ್ವಾತಂತ್ರ್ಯಗಳನ್ನು ಅತ್ಯಂತ ಇಕ್ಕಟಿನ ಸನ್ನಿವೇಶದಲ್ಲಿ ಅರ್ಥಮಾಡಿಕೊಳ್ಳಲು ಅವಕಾಶ ಒದಗಿಸಿತ್ತು. ಆತನ ಹೆಂಡತಿ ರೇಖಾ ಇತಿಹಾಸ ಪದವೀಧರೆ. ಮಗ ರಾಹುಲ್. ರೇಖಾಳ ತಂದೆ ಲಕ್ನೋ ವಿಶ್ವವಿದ್ಯಾಲಯದ ಉಪಕುಲಪತಿಗಳು. ಅವಳ ತಂದೆ ಮುಸ್ಲಿಂ, ತಾಯಿ ಹಿಂದೂ. ಸತೀಶನು ಸ್ವತಃ ಎಂದೂ ಬಡತನ ಅನುಭವಿಸದಿದ್ದರೂ ದೇಶದ ಬಡತನದ ಬಗ್ಗೆ ಕಾಳಜಿ ಇತ್ತು. ಈ ದಂಪತಿಗಳು ನಂಬಿದಂತೆ ಬದುಕುವವರು ಆಗಿರುತ್ತಾರೆ. "ಎಲ್ಲರ ಮಕ್ಕಳು ಹೋಗುವ ಶಾಲೆಗೆ ಸತೀಶ ತನ್ನ ಮಗ ರಾಹುಲನನ್ನೂ ಕಳಿಸಿದ. ಸೈನಿಕ ಸ್ಕೂಲಿಗೆ ಕಳಿಸಿರೆಂದು ಏರ್‌ಪೋರ್ಸ್ ಗೆಳೆಯರು ಮಾಡಿದ ಒತ್ತಾಯವನ್ನು ದಂಪತಿಗಳು ಕಿವಿ ಮೇಲೆ ಸಹ ಹಾಕಿಕೊಳ್ಳಲಿಲ್ಲ. ತಲೆಯಲ್ಲಿ ಹೇನು ತುಂಬಿಸಿಕೊಂಡು, ಒರಟಾದ ಮಾತು ಕಲಿತು ಮನೆಗೆ ಬರುತ್ತಿದ್ದ ರಾಹುಲನನ್ನು ಪ್ರತಿ ಕಾಗದದಲ್ಲೂ ದೆಹಲಿ ಗೆಳೆಯರಿಗೆ ವರ್ಣಿಸಿ ರೇಖಾ ಬರೆದಳು. ಇದರಿಂದ ಸತೀಶ ರೇಖಾರ ಇಮೇಜು ದೆಹಲಿಯ ಪ್ರಭಾವಶಾಲೀ ವರ್ತುಲಗಳಲ್ಲಿ ಬೆಳೆಯುತ್ತಾ ಹೋಯಿತು."[೬]

ಬರಗಾಲದ ಹಳ್ಳಿಯ ಬಗ್ಗೆ ಸತೀಶನು ಸರ್ವೇ ಮಾಡಲು ಹೋಗುವಾಗ ಕಥೆ ಪ್ರಾರಂಭವಾಗುತ್ತದೆ. ಸತೀಶನಿಗೆ ಬಾಯಾರಿಕೆಯಾಗಿರುತ್ತದೆ. ಮುದುಕಿಯೊಬ್ಬಳ ಮನೆಯಲ್ಲಿ ಕುಡಿಯಲು ನೀರು ಕೇಳುತ್ತಾನೆ. ಅವಳು ಕೊಡಲು ನಿರಾಕರಿಸುತ್ತಾಳೆ. ಆಕೆಯ ಮೊಮ್ಮಗನು ಅಕ್ಕಿ ಸಾಗಿಸುವ ಕಳ್ಳ ವ್ಯಾಪಾರಿಯಾಗಿರುತ್ತಾನೆ. ಸತೀಶನ ಶಾಸನದಿಂದ ಆ ಮೊಮ್ಮಗ ದಸ್ತಗಿರಿಯಾಗಿರುತ್ತಾನೆ. ಆದ್ದರಿಂದ ಮುದುಕಿ ಮೂರು ದಿನಗಳಿಂದ ಅನ್ನ ನೀರು ನಿರಾಕರಿಸಿರುತ್ತಾಳೆ. ಜೊತೆಗೆ ಸತೀಶನ ಕುಡಿಯುವ ನೀರಿನ ವಿಷಯದಲ್ಲಿ ಕಠಿಣವಾಗಿರುತ್ತಾಳೆ.

ಜಿಲ್ಲಾಧಿಕಾರಿಯು, ಈ ಜಿಲ್ಲೆಯನ್ನು ಕ್ಷಾಮಪೀಡಿತ ಪ್ರದೇಶವೆಂದು ಸರ್ಕಾರದಿಂದ ಘೋಷಿಸಬೇಕೆಂದು ತೀರ್ಮಾನಿಸಿರುತ್ತಾನೆ. ಆದರೆ 'ಬರ'ದ ವಿಷಯಕ್ಕೆ ಸಂಬಂಧಿಸಿದಂತೆ ವಿದೇಶದಲ್ಲಿರುವಂತೆ ಕೆಲವು ಮಾನದಂಡಗಳ ಮೂಲಕ ಈ ಜಿಲ್ಲೆಯನ್ನು ಬರಗಾಲದ ಪ್ರದೇಶವೆಂದು ತೀರ್ಮಾನಿಸುವುದು ಸುಲಭವಲ್ಲವೆಂಬುದನ್ನು ಅರಿತಿರುತ್ತಾನೆ.

ಅಸಹಾಯಕವಾದ ಪರಿಸ್ಥಿತಿಯ ಬಗ್ಗೆ ಈ ಕಥೆಯು ಬೆಳಕು ಚೆಲ್ಲುತ್ತದೆ. ದುಡಿಯುವ ಕೈಗಳಿಗೆ ಕೆಲಸ ಸಿಗಬೇಕಾದರೆ, ಆರ್ಥಿಕವಾಗಿ ಮೂಲಭೂತ ಅಂಶಗಳು ಅತ್ಯಂತ ಅವಶ್ಯಕವಾಗಿರುತ್ತವೆ. ಒಂದು ವೇಳೆ ಬರ–ಕ್ಷಾಮಗಳಂತವುಗಳು ಆವರಿಸಿದರೆ ಬದುಕು ದುಸ್ತರವಾಗುತ್ತದೆ.

ಅಧಿಕಾರಿಶಾಹಿ ಕೇಂದ್ರದಲ್ಲಿನ ಆಡಳಿತದ ಬಗ್ಗೆ ಜನರಿಗೆ ಯಾವಾಗಲೂ ನಂಬಿಕೆ ಇರುವುದಿಲ್ಲ. ಕಾರಣ ಅವರು ಆಡಳಿತ ವರ್ಗದ ರಾಜಕಾರಣಿಗಳ ಕೈಕೆಳಗೆ ಕೆಲಸ ಮಾಡುತ್ತಾರೆಂಬುದು ಜನ ಸಾಮಾನ್ಯರ ಅಭಿಪ್ರಾಯವಾಗಿರುತ್ತದೆ. ಇದಕ್ಕೆ ಹೊರತಾಗಿ ಸತೀಶನು ನಿಲ್ಲಲು ಸಾಧ್ಯವಾಗುವುದಿಲ್ಲ. ಆ ಜಿಲ್ಲೆಯ ಮಿನಿಸ್ಟರ್ ರುದ್ರಪ್ಪನಾಗಿರುತ್ತಾನೆ. ಇವನ ಅಧೀನದಲ್ಲಿರುವ ಶಿಷ್ಯ ರಾಜಕಾರಣಿ ಗಂಗಾಧರಸ್ವಾಮಿ ಎಂಬುವವನು ಅಕ್ರಮವಾಗಿ ಅಕ್ಕಿಯನ್ನು ದಾಸ್ತಾನು ಮಾಡಿರುತ್ತಾನೆ. ಆದರೆ ಸತೀಶನು ಗಂಗಾಧರಸ್ವಾಮಿಯನ್ನು ಮಾಲು ಸಮೇತ ದಸ್ತಗಿರಿ ಮಾಡುವಲ್ಲಿ ವಿಫಲನಾಗಿರುತ್ತಾನೆ. ಅದಕ್ಕೆ ಎಸ್.ಪಿ. ನಾಗರಾಜನು ಕೂಡ ಕಾರಣನಾಗಿರುತ್ತಾನೆ. ಈತನು ಕೂಡ ರುದ್ರಪ್ಪನಿಗೆ ಬೇಕಾದವನಾಗಿರುತ್ತಾನೆ. ಈ ಕಥೆಯಲ್ಲಿ ಬರುವ ಮತ್ತೊಬ್ಬ ವ್ಯಕ್ತಿ ಭೀಮೋಜಿ. ಅಡ್ವೋಕೇಟ್ ಆಗಿರುತ್ತಾನೆ. ಆದರೆ ದರ್ಜಿಯಾಗಿ ಬಟ್ಟೆಯನ್ನು ಹೊಲೆಯುವ ಕಾಯಕ ಹೊಂದಿರುತ್ತಾನೆ. ರೈತ ಸಂಘದ ಅಧ್ಯಕ್ಷ, ಮುನಿಸಿಪಲ್ ಕೆಲಸಗಾರರ ಕಾರ್ಯದರ್ಶಿ. ಚೀಪ್ ಮಿನಿಸ್ಟರಿಂದ ಹಣ ಪಡೆದು ರುದ್ರಪ್ಪನನ್ನು ಸೋಲಿಸಲೆಂದು ಚುನಾವಣೆಯಲ್ಲಿ ಸ್ಪರ್ಧಿಸಿ ಸೋತಿರುತ್ತಾನೆ.

ಭೀಮೋಜಿಯು, ಸತೀಶನ ಕಾರ್ಯವೈಖರಿಯನ್ನು ಅಧಿಕಾರಿಶಾಹಿ ಹಿನ್ನೆಲೆಯಲ್ಲಿ ಟೀಕಿಸಿದರೂ ಅವನ ಬಗ್ಗೆ ಅಭಿಮಾನವಿರುತ್ತದೆ. ಎಸ್.ಪಿಯನ್ನು ಜಿಲ್ಲೆಯಿಂದ ವರ್ಗಾಮಾಡಿಸಲು ಸುಲಭ ಸಾಧ್ಯವಿಲ್ಲವೆಂದು ಹೇಳುತ್ತಾನೆ. ಅದಕ್ಕೆ ಕಾರಣವೂ ಇರುತ್ತದೆ. ರುದ್ರಪ್ಪನ ಕೈಯಲ್ಲಿಯೇ ಪೋಲೀಸ್ ಇಲಾಖೆಯಿರುವುದರಿಂದ, ನಾಗರಾಜನ ವಿಷಯದಲ್ಲಿ ರುದ್ರಪ್ಪ ಯಾವ ತೀರ್ಮಾನವನ್ನು ಕೈಗೊಳ್ಳುವುದಿಲ್ಲ.

ಧರ್ಮ ಯಾವಾಗಲೂ ಮನುಷ್ಯನ ಅಸ್ತಿತ್ವವನ್ನು ಅಲುಗಾಡಿಸುತ್ತಲೇ ಬಂದಿವೆ. ಅನಂತಮೂರ್ತಿಯವರು ಧರ್ಮದ ವಿಷಯದಲ್ಲಿ ಮನುಷ್ಯ ಹೇಗೆ ವರ್ತಿಸುತ್ತಾನೆಂಬು ದನ್ನು ಕಥೆಯಲ್ಲಿ ಬರುವ ಹಿಂದೂ ಮುಸ್ಲಿಂರ ವಿಚಾರದಲ್ಲಿ ತರುತ್ತಾರೆ. ಸತೀಶನು ಒಮ್ಮೆ ಕಾಳಮ್ಮನ ಬೀದಿಯಲ್ಲಿರುವ ಭೀಮೋಜಿಯ ಮನೆಗೆ ಬರುವಾಗ ಕೆಲವೊಂದು ವಿಷಯವನ್ನು ತಿಳಿಯುತ್ತಾನೆ. ಕಾಳಮ್ಮನ ಬೀದಿಯಲ್ಲಿ ಮುಸ್ಲಿಂ ಜನಾಂಗದ ಹೆಚ್ಚು ಕುಟುಂಬಗಳು ಇರುತ್ತವೆ. ಇಲ್ಲಿನ ಒಕ್ಕಲಿಗರಿಗೂ ಮತ್ತು ಮುಸ್ಲಿಂರಿಗೂ ಆಗಾಗ್ಗೆ ಧರ್ಮದ ವಿಷಯವಾಗಿ ಗಲಭೆಗಳು ಆಗುತ್ತಿರುತ್ತವೆ. ಇಲ್ಲಿನ ಕುಟುಂಬಗಳೆಲ್ಲವೂ ಕೂಲಿ ಮಾಡಿ ಕಡುಬಡವರಾಗಿ ಬದುಕುತ್ತಿದ್ದರೂ, ಉರ್ದು–ಕನ್ನಡ ಭಾಷೆಗಳ ವಿಷಯದ

ಬಗ್ಗೆ ತಮ್ಮದೇ ಆದ ನಿಲುವನ್ನು ಹೊಂದಿರುತ್ತಾರೆ. ಈ ರೀತಿ ಇರುವ ಹಳ್ಳಿಯಲ್ಲಿ ಭೀಮೋಜಿಯ ಕುಟುಂಬ ಇರುತ್ತದೆ. ಸತೀಶನು ಭೀಮೋಜಿಯ ಮನೆಗೆ ಬಂದಾಗ, ಯಾವುದೇ ಆಶ್ಚರ್ಯ ತೋರಿಸದೆ ತನ್ನ ಪೂರ್ವಜರ ವಿಷಯ, ತನ್ನ ಹಿಂದಿನ ವೃತ್ತಿ ಎಲ್ಲವನ್ನು ಸತೀಶನ ಬಳಿ ಹೇಳುತ್ತಾನೆ. ಆ ವೇಳೆಗಾಗಲೇ ಮುಗ್ಧ ಆ ಹಳ್ಳಿಯ ಜನರು, ಜಿಲ್ಲಾಧಿಕಾರಿಯು ತಮಗೆ ಸಹಾಯ ಮಾಡುವಂತೆ ದಂಬಾಲು ಬೀಳುತ್ತಾರೆ. ಅಲ್ಲಿಂದ ಅವನು ಹೊರಬರುತ್ತಾನೆ.

ಸತೀಶನಿಗೆ ಪ್ರತಿಯೊಂದು ಬರಗಾಲದ ಹಿನ್ನೆಲೆಯಲ್ಲಿನ ಘಟನೆಗಳು, ಮಿನಿಸ್ಟರ್ ರುದ್ರಪ್ಪನ ನಡವಳಿಕೆಗಳು, ಆತನ ಕಾರ್ಯ ಕ್ಷಮತೆಯನ್ನು ಕುಗ್ಗಿಸುತ್ತಾ ಹೋಗುತ್ತವೆ. ಆಗಲೇ ಆತನು ತನ್ನ ಹುದ್ದೆಗೆ ರಾಜಿನಾಮೆಯನ್ನು ಕೊಡಲು ಆ ಕ್ಷಣದಲ್ಲಿ ತೀರ್ಮಾನಿಸಿದರೂ ಅದು ದೃಢವಾಗಿ ನಿಲ್ಲುವುದಿಲ್ಲವೆಂದು ಆತನಿಗೆ ತಿಳಿಯುತ್ತದೆ. ಆದರೆ ಒಂದೊಂದು ಘಟನೆಗಳು ಆತನನ್ನು ಕಾರ್ಯವಿಮುಖತೆಯ ಕಡೆಗೆ ಕರೆದೊಯ್ಯುತ್ತಿರುತ್ತವೆ.

ಒಂದು ದಿನ ಗೋವಿಂದಪ್ಪನೆಂಬ ವ್ಯಕ್ತಿಯು ಸತೀಶನ ಮನೆಗೆ ಬರುತ್ತಾನೆ. ಆತನು ವೃತ್ತಿಯಲ್ಲಿ ವಾಚಿನ ಅಂಗಡಿಯನ್ನು ಇಟ್ಟುಕೊಂಡಿರುತ್ತಾನೆ. ಜೊತೆಗೆ ಗೋರಕ್ಷಕ ದಳದ ಕಾರ್ಯದರ್ಶಿಯಾಗಿರುತ್ತಾನೆ. ಆತನು ಈ ಬರಗಾಲದಲ್ಲಿ ಗೋವುಗಳನ್ನು ರಕ್ಷಣೆ ಮಾಡಬೇಕೆಂದು ದಂಬಾಲು ಬೀಳುತ್ತಾನೆ. ಈ ಬರಗಾಲದ ಸಂದರ್ಭದಲ್ಲಿ ಅದು ಸಾಧ್ಯವಿಲ್ಲವೆಂದು ತಿಳಿದಾಗ ಕೋಪಗೊಳ್ಳುತ್ತಾನೆ.

ಬರಗಾಲ ಸೃಷ್ಟಿಸುವ ಸಮಸ್ಯೆಗಳಲ್ಲಿ ಹಸಿವಿನ ಹೋರಾಟವೂ ಪ್ರಧಾನವಾಗಿರುತ್ತದೆ. ಅದು ಯಾವುದೇ ಧರ್ಮ, ವ್ಯಕ್ತಿ, ವ್ಯವಸ್ಥೆಯನ್ನು ನೋಡದೆ ಗಲಭೆಯನ್ನು ಸೃಷ್ಟಿ ಮಾಡುತ್ತದೆ. ಭೀಮೋಜಿಯಿಂದ ಪ್ರೇರಿತವಾದ ಗುಂಪೊಂದು ಆಹಾರ ಧಾನ್ಯದ ವಿಷಯವಾಗಿ ಹೋರಾಟಕ್ಕೆ ನಿಲ್ಲುತ್ತದೆ. ಮೊದಮೊದಲು ಶಾಂತವಾಗಿ ಹೋರಾಟ ನಡೆದರೂ ಕ್ರಮೇಣ ಅದು ಸಂಘರ್ಷದ ದಿಕ್ಕಿಗೆ ಬದಲಾಗಿ ಗಂಗಾಧರಸ್ವಾಮಿಯ ಅಂಗಡಿಯ ಎದುರಿನಲ್ಲಿ ಕಲ್ಲು ತೂರಾಟಕ್ಕೆ ಕಾರಣವಾಗುತ್ತದೆ. ಸ್ಮಾರಕಗಳ ಮೇಲೂ, ಜನರ ಧರ್ಮಗಳ ಮೇಲೂ, ತಿರುಗುತ್ತದೆ. ಅಂತಿಮವಾಗಿ ಸತೀಶನ ಸೂಚನೆಯ ಮೇರೆಗೆ, ಪೋಲೀಸರ ಫೈರಿಂಗ್ ಸನ್ನಿವೇಶಕ್ಕೂ ತಿರುಗುತ್ತದೆ. ಈ ಫೈರಿಂಗ್ ಸಂದರ್ಭದಲ್ಲಿ, ಮುಸ್ಲಿಂ ರಿಕ್ಷಾ ಚಾಲಕ ಸತೀಶನ ಮಗ ರಾಹುಲ್‌ನನ್ನು ರಕ್ಷಣೆ ಮಾಡಿರುತ್ತಾನೆ. ಅವನನ್ನು ಎಸ್.ಪಿ. ತಂದು ಸತೀಶನಿಗೆ ಒಪ್ಪಿಸುತ್ತಾನೆ.

ವಿಭಿನ್ನ ಪರಿಕಲ್ಪನೆಯಲ್ಲಿ ನಡೆಯುವ ಈ 'ಬರ' ಕಥೆಯೂ ಸನ್ನಿವೇಶಗಳ ತಲ್ಲಣ, ರಾಜಕೀಯ ವಿಲಕ್ಷಣಗಳು ಮತ್ತು ಪರಿಸ್ಥಿತಿಗಳು ಕೈ ಮೀರಿದಾಗ ಆಗುವ ಘಟನೆಗಳನ್ನು ಹೊಂದಿದೆ. ಪ್ರಾರಂಭದಲ್ಲಿ ಬರುವ ನೋವಿನಿಂದ ಅಸಹಕಾರ ತೋರುವ ಮುದುಕಿ

ಮೌನವಾಗಿಯೇ ವಿರೋಧ ವ್ಯಕ್ತಪಡಿಸುತ್ತಾಳೆ. ಸುಲೇಮಾನ್‌ನಂಥವರು ಬರಗಾಲದಲ್ಲೂ ತಮ್ಮ ವೃತ್ತಿಯಾದ ಗುಡಿ ಕೈಗಾರಿಕೆಯನ್ನು ಬಿಡುವುದಿಲ್ಲ. ಅವರಿಗೆ ಮುಸ್ಲಿಂ, ಹಿಂದೂ ದೇವರಗಳ ಚಿತ್ರಗಳು ಎಂಬ ಬೇಧಭಾವವಿಲ್ಲದೆ ಚಿತ್ರಗಳನ್ನು ರೂಪಿಸುತ್ತಿರುತ್ತಾರೆ. ಬರಗಾಲದ ಹೋರಾಟಕ್ಕೆ ರುದ್ರಪ್ಪನು ರಾಜೀನಾಮೆ ಕೊಡುತ್ತಾನೆ. ಸತೀಶನು ತನ್ನ ಹುದ್ದೆಯಿಂದ ಹೊರ ಬಂದು ದೆಹಲಿಯಲ್ಲಿ ಪ್ರೊಫೆಸರ್ ಆಗುತ್ತಾನೆ. ಭೀಮೋಜಿ ಹೋರಾಟದ ವ್ಯಕ್ತಿಯಾಗುತ್ತಾನೆ. ನಾಗರಾಜ ಎಸ್.ಪಿಯಾಗಿಯೇ ಮುಂದುವರೆಯುತ್ತಾನೆ. ಗಂಗಾಧರಸ್ವಾಮಿ ಶೇಕರಿಸಿದ್ದ ಕಳ್ಳ ದಾಸ್ತಾನನ್ನು ಜನರು ಲೂಟಿ ಮಾಡುತ್ತಾರೆ. ಬರಗಾಲವು ಎಲ್ಲಾ ರೀತಿಯ ಸಮಸ್ಯೆಗಳನ್ನು ಸೃಷ್ಟಿಸಿ ಕೊನೆಗೆ ಅದಕ್ಕೆ ತಾನೇ ಪರಿಹಾರವನ್ನು ಕಂಡುಕೊಳ್ಳುವ ಸ್ಥಿತಿ ಬರುತ್ತದೆ. ಬರಗಾಲದ ಸುಳಿಗೆ ಸಿಕ್ಕ ಸಾಮಾನ್ಯನ ಬದುಕು ದುರಂತದ ಸರಮಾಲೆಯನ್ನು ಸೃಷ್ಟಿಸುತ್ತದೆ. ಆರ್ಥಿಕ ಭದ್ರತೆಗೆ ಅನಿವಾರ್ಯವಾಗಿ ದುಡಿಮೆಯಿಂದ ವಿಮುಖನಾದರೆ ಆ ವ್ಯಕ್ತಿ ಹೋರಾಡುತ್ತಾನೆ. ಸಾಧ್ಯವಾಗದಿದ್ದರೆ ಅಸಹಾಯಕನಾಗಿ ಸಾಯುತ್ತಾನೆ. ಇಂತಹ ಘಟನೆಗಳು ಕೇವಲ ಸಾಮಾನ್ಯನಿಗೆ ಸೀಮಿತವಾಗಿರದೆ, ಅಧಿಕಾರವುಳ್ಳ ವ್ಯಕ್ತಿಗಳ ಸ್ಥಾನಪಲ್ಲಟವಾಗುತ್ತದೆ ಅಥವಾ ಆತನು ಆ ಜವಬ್ದಾರಿಯಿಂದ ವಿಮುಖನಾಗುತ್ತಾನೆ. ಹಾಗೆಯೇ ರಾಜಕೀಯ ಏರಿಳಿತಗಳು ಹೆಚ್ಚಾಗಿ ಅವ್ಯವಸ್ಥೆಗೆ ಕಾರಣೀಭೂತವಾಗಿ ಸ್ಥಾನಗಳು ಪಲ್ಲಟಗೊಳ್ಳುವುದನ್ನು ಈ ಕಥೆಯಲ್ಲಿ ಕಾಣಬಹುದಾಗಿದೆ.

### ೩.೨. ನಂಬಿಕೆಗಳು ಮತ್ತು ಆಚರಣೆಗಳು

ಗ್ರಾಮೀಣ ಜನತೆಯ ಬಹುಪಾಲು ಬದುಕು ನಂಬಿಕೆ ಮತ್ತು ಆಚರಣೆಗಳಿಂದ ಕೂಡಿರುತ್ತದೆ. ವಿಜ್ಞಾನವು ನೂರಾರು ವೈಜ್ಞಾನಿಕ ಸತ್ಯಗಳನ್ನು ಹೊರಗೆಡವಿದರೂ ಮನುಷ್ಯನಲ್ಲಿ ಹುದುಗಿರುವ ಸಾಂಪ್ರದಾಯಿಕ ನಂಬಿಕೆಗಳನ್ನು ಸಂಪೂರ್ಣವಾಗಿ ಹೋಗಲಾಡಿಸಲು ಸಾಧ್ಯವಾಗಲಿಲ್ಲ. ನಂಬಿಕೆಗಳು ಎಂಬ ವಿಚಾರಕ್ಕೆ ಸಂಬಂಧಿಸಿದಂತೆ, ದೇ.ಜವರೇಗೌಡರು 'ಜಾನಪದ ಅಧ್ಯಯನ' ಕೃತಿಯಲ್ಲಿ "ಮಾನವನ ವೈಜ್ಞಾನಿಕ ಮತಿ ಪ್ರಖರವಾದಂತೆಲ್ಲ ಮೂಢ ನಂಬಿಕೆಗಳು ಕಡಿಮೆಯಾಗುವುದು ಸಹಜವೇ. ಆದರೆ ಅವುಗಳಲ್ಲಿ ಎಲ್ಲವೂ ಮಾಯವಾಗುವುದಿಲ್ಲ. ಕೆಲವು ವಿಸ್ಮೃತಿಯ ಗರ್ಭದಲ್ಲಿ ಮರೆಯಾಗುತ್ತವೆ; ಹಲವು ಉಡ ಹಿಡಿತದಂತೆ ಸಮಾಜಕ್ಕೆ ಅಂಟಿಕೊಂಡಿರುತ್ತವೆ; ಜತೆಗೆ ಹೊಸವು ಬಂದು ಸೇರಿಕೊಳ್ಳುತ್ತವೆ. ವಿಜ್ಞಾನ ಯುಗದಲ್ಲಿ ಹೊಸ ಸಟೆ ನಂಬಿಕೆಗಳಿಗೆ ಅವಕಾಶವಿದೆಯೇ ಎಂದು ಪ್ರಶ್ನಿಸಬಹುದು. ಅವಕಾಶವಿದೆಯೆಂದು ಖಚಿತವಾಗಿ ಹೇಳಬಹುದು. ಸೃಷ್ಟಿಯ ಸಕಲ ರಹಸ್ಯಗಳು ಮಾನವ ಮತಿಯ ಹಿಡಿತಕ್ಕೆ ಸಿಕ್ಕಿಲ್ಲ. ವೈಜ್ಞಾನಿಕ ಪ್ರಯೋಗಗಳಿಗೆ ಅವು ನಿಲುಕುವ ತನಕ ಮಾನವ ಅವುಗಳ ಬಗೆಗೆ ಆಶ್ಚರ್ಯ ವ್ಯಕ್ತಪಡಿಸುತ್ತಾನೆ. ತನಗೆ ತೋರಿದಂತೆ ವಿವರಣೆ ನೀಡುತ್ತಾನೆ. ಅಷ್ಟೇ ಅಲ್ಲ ದಿಟನಂಬಿಕೆ ಯಾವುದು ಸಟೆನಂಬಿಕೆ ಯಾವುದು ಎನ್ನುವುದರ ಬಗೆಗೂ ಈಗ ಇದಮಿತ್ಥಂ ಎನ್ನುವಂತಿಲ್ಲ. ತಾರ್ಕಿಕವಾಗಿ ವೈಜ್ಞಾನಿಕ ಮತಿ ಸಂಶೋಧನೆ ನಡೆಸಿದ್ದಾದರೆ ಕೆಲವು ಮೂಢನಂಬಿಕೆಗಳು ದಿಟದ ನಂಬಿಕೆಗಳಾಗಿ ಪರಿಣಮಿಸುವ ಸಂಭವವುಂಟು. ಯುಗಾದಿಯಲ್ಲಿ ಬೇವು-ಬೆಲ್ಲ ತಿನ್ನುವುದರ ಹಿಂದಿನ ಭಾವನೆ ಏನೇ ಇರಲಿ, ಅದು ಆರೋಗ್ಯಕರವೆನ್ನುವುದಂತು ಸತ್ಯ. ವಿಜ್ಞಾನ ಅದ್ಭುತವಾಗಿ ಬೆಳೆದಿರುವ ಪಾಶ್ಚಾತ್ಯ ಸಮಾಜದಲ್ಲಿಯೇ ಭೂತಪ್ರೇತಗಳ ಬಗ್ಗೆ, ಭವಿಷ್ಯವಾದಿಗಳ ಬಗ್ಗೆ ವಿಶ್ವಾಸವುಂಟು".[೭] ಎಂದು ನಂಬಿಕೆಗಳ ಬಗ್ಗೆ ಇರುವ ಜನರ ಮನಸ್ಥಿತಿಯನ್ನು ಗುರುತಿಸುತ್ತಾರೆ. ಮನುಷ್ಯನ ಹುಟ್ಟೇ ದೈವಿ ಸ್ವರೂಪದ ಪ್ರತಿಫಲವೆಂದು ಇಂದಿಗೂ ನಂಬುವ ಜನಾಂಗ ಸಮಾಜದಲ್ಲಿದೆ. ಅದು ಸರಿಯೋ ತಪ್ಪೋ ಚರ್ಚೆಗೆ ನಾನು ಒಳಪಡಿಸುವುದಿಲ್ಲ.

ಕಥೆಗಾರರು ತಮ್ಮ ಕಥೆಗಳಲ್ಲಿ ವ್ಯಕ್ತಿಯಲ್ಲಿರುವ ನಂಬಿಕೆ ಮತ್ತು ಆಚರಣೆಗಳನ್ನು ಸಹಜವಾಗಿ ನಿರೂಪಿಸಿದ್ದಾರೆ. ಕಥೆಯ ಬೆಳವಣಿಗೆಗೆ ಅದು ಅನಿವಾರ್ಯವೂ ಹೌದು. ವಾಸ್ತವಿಕ ಸತ್ಯಗಳು ಕೂಡ ನಿಜವಾಗಿರುತ್ತವೆ.

ತೇಜಸ್ವಿಯವರ 'ಲಿಂಗ ಬಂದ' ಬಂದ ಕಥೆಯಲ್ಲಿ ಬಾಲ್ಯದಲ್ಲಿನ ಮಕ್ಕಳ ಮೇಲೆ ಭಯ ಮತ್ತು ಆತಂಕ ಉಂಟುಮಾಡುವ ರಾಕ್ಷಸನ ವಿಚಾರಗಳನ್ನು ತರುತ್ತಾರೆ. ಇಲ್ಲಿ ರಾಕ್ಷಸ ಒಂದು ಸಂಕೇತ ಮಾತ್ರ. ಆ ಹಿನ್ನೆಲೆಯಲ್ಲಿ ಮಕ್ಕಳ ಮನಸ್ಸು ಜಾಗೃತವಾಗುತ್ತದೆ. ಅವರು ಬೆಳೆದಂತೆ ಭಯವು ಮುಂದುವರೆದು 'ರಾಕ್ಷಸನ ಸಂಕೇತ'ವು ನಶಿಸಿದರೂ

ಭಯ ಮಾತ್ರ ಹಾಗೆಯೇ ಉಳಿಯುತ್ತದೆ. ಹುಟ್ಟು-ಸಾವುಗಳು ಸಹಜವಾಗಿ ಮನುಷ್ಯನಿಗೆ ಆಶ್ಚರ್ಯವಾಗಿ ಕಂಡುಬರುವ ಅಂಶಗಳಾಗಿರುತ್ತವೆ. ಈ ಅಂಶಗಳ ನಡುವೆ ಸಾವಿನ ಆಕಸ್ಮಿಕವೂ ಕೂಡ ಭಯವನ್ನು ತಂದೊಡ್ಡುತ್ತದೆ.

ನಂಬಿಕೆಗಳು ಮತ್ತು ಆಚರಣೆಗಳು ಸಹಜವಾಗಿ ವ್ಯಕ್ತಿಗಳಿಗೆ ಅನುಕೂಲಕರವಾಗಿರುತ್ತವೆ. ಅವುಗಳನ್ನು ತಮಗೆ ಬೇಕಾದ ರೀತಿಯಲ್ಲಿ ಬಳಸಿಕೊಳ್ಳುತ್ತಾರೆ. 'ಕಿರಗೂರಿನ ಗಯ್ಯಾಳಿಗಳು' ಕಥೆಯಲ್ಲಿ ಶಂಕ್ರಪ್ಪನು ಮಾರ ಮತ್ತು ಸಿದ್ದರು ಹೆಬ್ಬಲಸಿನ ಮರವನ್ನು ಕುಯ್ಯುವ ಬಳಿ ಬಂದು, ಮಾತಿನ ಮೂಲಕ ಭಯವನ್ನು ಉಂಟುಮಾಡುವ ಕೆಲಸಕ್ಕೆ ನಿಲ್ಲುತ್ತಾನೆ. ಶಂಕ್ರಪ್ಪನು "ಕುಯ್ಯೋ ಮರ ಯಾವಾಗ್ಲೂ ಕದ್ದಿಂಗಳಲ್ಲೇ ಕುಯ್ಯಬೇಕೂಂತ ಗೊತ್ತಿಲ್ವಾ" ಎಂದು ತನ್ನ ಅತಾರ್ಕಿಕ ಮಾತುಗಳನ್ನು ಹೇಳುತ್ತಾನೆ. ಅದಕ್ಕೆ ಮಾರನು 'ಜಾತಕ ನೋಡದೆ ಮದುವೆ ಮಾಡುವಾಗ, ಪಂಚಾಂಗ ನೋಡಿ ಮರ ಕಡಿಯೋದು ಎಷ್ಟರ ಮಟ್ಟಿಗೆ ಸರಿ' ಎಂಬ ತನ್ನ ಸ್ಪಷ್ಟವಾದ ನಿಲುವನ್ನು ಹೇಳುತ್ತಾನೆ. ಆದರೆ ಶಂಕ್ರಪ್ಪನು 'ಪಿಶಾಚಿ'ಗಳ ಅಂಶವನ್ನು ಸೇರಿಸಿ ಅವರಿಗೆ ಭಯವನ್ನು ಉಂಟುಮಾಡಲು 'ಕದ್ದಿಂಗಳಲ್ಲಿ ಮರದ ಮೇಲಿನ ಪಿಶಾಚಿಗಳು ಸಂಚಾರ ಹೋಗಿರುತ್ತವೆ. ಆದರೆ ಬೆಳ್ದಿಂಗಳಲ್ಲಿ ಪಿಶಾಚಿಗಳು ಮರದಲ್ಲೇ ಇದ್ದು, ಒಂದು ವೇಳೆ ಆ ಮರವನ್ನು ಕಡಿದರೆ ಕೋಪಗೊಂಡು ಆ ಮರದಲ್ಲಿ ಮಾಡಿದ ಮುಟ್ಟುಗಳಿಗೆಲ್ಲಾ ಕುಟ್ಟೆ ಹಿಡಿಸಿ ಸೂರು ಬಿದ್ದು ಮನೆಯೇ ನಾಶವಾಗುತ್ತದಂತೆ.' ಈ ಮಾತಿನಿಂದ ಆರಂಭವಾದ ಅವರ ದೆವ್ವದ ವೃತ್ತಾಂತಗಳು ಮುಗಿಯುವ ಹೊತ್ತಿಗೆ ಸರಿಯಾಗಿ ಮಾರ ಸಿದ್ದ ಎಳೆದಾಡುತ್ತಿದ್ದ ಗರಗಸ ಯಾಕೋ ಬಿಗಿಯಾಗತೊಡಗಿತು.

ಮಾರ 'ಏಯ್ ಗರಗಸ ಎಳೆಯಬೇಕದರೆ ಯಾಕೆ ಬಿಗಿ ಹಿಡೀತೀಯೋ? ಸ್ವಲ್ಪ ಸಡ್ಲ ಕೊಡೋ. ಯಾಕೆ, ಕೈ ಸೋಲು ಬಂತೇನು?' ಎಂದು ಸಿದದನ ಕಡೆ ತಿರುಗಿ ಗದರಿದ.

'ಮಾರಾಯ ಇದೆ ಮಾತು ನಿನಗೆ ಹೇಳ್ಬೇಕಂತ ಮಾಡಿದ್ದೆ. ಗರಗಸ ಯಾಕೋ ಬಿಗಿ ಬರ್ತಿದೆ ಕಣೋ. ಹೆಬ್ಬಲಿಸಿನ ಮ್ಯಾಣ ಗರಗಸಕ್ಕೆ ಹಿಡಿದಿದೇಂತ ಕಾಣ್ತದೆ' ಎಂದು ಸಿದ್ದ ಹೇಳಿದ.

ಇಬ್ಬರೂ ಗರಗಸ ಹೊರತೆಗೆದು ಭೈರಪ್ಪನ ಮನೆಯಿಂದ ಸೀಮೆ ಎಣ್ಣೆ ತಂದು ಗರಗಸಕ್ಕೆ ತಿಕ್ಕಿದರು. ಅಂಟಿದ ಹಲಸಿನ ಮೇಣ ಎಲ್ಲ ಹೋದಮೇಲೆ ಮತ್ತೆ ಕುಯ್ಯಲು ಶುರುಮಾಡಿದರು. ಆದರೆ ನಾಲ್ಕು ಸಾರಿ ಕುಯ್ಯುವುದರೊಳಗೆ ಗರಗಸ ಬಿಗಿಯಾಗತೊಡಗಿತು.

'ತುತ್, ಇದ್ರ ಮನೆ ಹಾಳಾಗ. ರಟ್ಟೆ ಎಲ್ಲ ಸೇದಿ ಬಂತು. ಇದರ ಒಳಗೆ ಯಾವುದೋ ದೆಯ್ಯ ಹೊಕ್ಕೊಂಡಿದೇಂತ ಕಾಣ್ತದೆ' ಎಂದು ಗಟ್ಟಿಯಾಗಿ ಯೋಚಿಸುತ್ತ ಗರಗಸ ಎಳೆದಾಡುವುದನ್ನು ನಿಲ್ಲಿಸಿ,

'ಶಂಕ್ರಪ್ಪಾ ಇಳಿಯೋ ಅಲ್ಲಿಂದ ನೀನು. ಒಂದು ಕಡೆ ವಜನ್ ಬೀಳ್ತಿದೆ' ಎಂದು ಜೋರು ಮಾಡಿ ಶಂಕ್ರಪ್ಪನನ್ನು ಮರದ ಮೇಲಿಂದ ಇಳಿಸಿದರು. ಅವನಿಂದ ಒಂದೊಂದು ಬೀಡಿ ತೆಗೆದುಕೊಂಡು ಧಮ್ಮು ಎಳೆದು ಸುಧಾರಿಸಿಕೊಂಡು ಮತ್ತ ಗರಗಸ ಎಳೆದಾಡಲು ಆರಂಭಿಸಿದರು. ನಾಲ್ಕಾರು ಸಾರಿ ಎಳೆಯುವುದರೊಳಗೇ ಗರಗಸ ತುಂಬಾ ಬಿಗಿಯಾಗಹತ್ತಿತ್ತು..... ಅಂತಿಮವಾಗಿ ಭೈರಪ್ಪನಿಗೆ ಮರದ ವಿಚಾರಕ್ಕೆ ಆದ ಅಚಾತುರ್ಯಕ್ಕೆ ವಿವರಣೆ ಎನ್ನುವಂತೆ ದೆವ್ವದ ಕಾಟ ಇದು"[೮] ಎಂದು ಮಾರ, ಸಿದ್ದ ಹೇಳುತ್ತಾರೆ. ಇಂಥ ದೆವ್ವದ ವಿಚಾರಗಳು ಭಯವನ್ನು ಉಂಟುಮಾಡುವ ಕಾರಣಗಳಿಗೆ ಉದಾಹರಣೆಯಾಗಿ ಕಾಣುತ್ತವೆ. ಮರದ ಕೊಯ್ಯುವ ಕೆಲಸ ಪೂರ್ಣವಾಗದ ಕಾರಣಕ್ಕೆ ಮಾರ ಮತ್ತು ಸಿದ್ಧ, ಶಂಕ್ರಪ್ಪನು ಹೇಳಿದ್ದ 'ದೆವ್ವ'ದ ವಿಚಾರವನ್ನು ಭೈರಪ್ಪನಿಗೆ ಹೇಳುತ್ತಾರೆ.

ಗ್ರಾಮೀಣ ಭಾರತದ ಬಹುಪಾಲು ಜನರ ದೈವವೂ ಪ್ರಕೃತಿಯಾಗಿದೆ. ಪ್ರಕೃತಿಯ ಗಿಡ–ಮರ, ನದಿ–ಸಮುದ್ರ, ಪ್ರಾಣಿ–ಪಕ್ಷಿಗಳು ಕೂಡ ದೇವರ ಸ್ವರೂಪವೆಂದು ನಂಬಿರುತ್ತಾರೆ. ಕೆಲವರು ಇಂಥ ದೈವ ಸ್ವರೂಪಕ್ಕೆ ತಮ್ಮದೆ ಆದ ಮೌಢ್ಯತೆಯನ್ನು ಅನ್ಯರ ಮೇಲೆ ಬಿತ್ತಿ ಲಾಭವನ್ನು ಮಾಡಿಕೊಳ್ಳುತ್ತಾರೆ. ಕಥೆಗಾರರು ಕೂಡ ಇಂಥ ಅಂಶವನ್ನು ತಮ್ಮ ಕಥೆಗಳ ಚೌಕಟ್ಟಿನಲ್ಲಿ ತರುತ್ತಾರೆ. 'ಹುಲಿಯೂರಿನ ಸರಹದ್ದು' ಕಥೆಯಲ್ಲಿನ ರಂಗಪ್ಪಗೌಡನು, "ಈ ತಾಯ್ಗಂಡ ಮುಂಡೇವಕ್ಕೆಲ್ಲಾ ದೇವರಂತೆ. ದನಾ ತಿನ್ನೋರಿಗೆ ಗೊಬ್ಬರದಾಣೆ. ಯಾವುದೇ ಜಾತಿ ಹುಡುಗೀನ ಮದುವೆಯಾದೇನು ಅಂತ ಜಾತಿ ಕುಲ ತೊರೆದೋರಿಗೆ ಇನ್ನು ದೇವ್ರು ದಿಂಡ್ರು. ಎಂದು ಗರುಡ ದೇವರನ್ನು ಹೊಡೆಯಬಾರದು"[೯] ಎಂದು ಮಗನಾದ ಸೋಮುವಿಗೆ ಗರುಡ ದೈವದ ಸ್ವರೂಪವೆಂದು, ಅದನ್ನು ಹೊಡೆಯಬಾರದು ಎಂಬ ವಿಚಾರಕ್ಕೆ ಸಂಬಂಧಿಸಿದಂತೆ ನಂಬಿಸುವ ರಂಗಪ್ಪಗೌಡನ ಮಾತುಗಳು ಸೋಮುವಿಗೆ ವಿಚಿತ್ರವಾಗಿ ಕಾಣುತ್ತವೆ. ದೇವರ ನಂಬಿಕೆಗಳು ಅನ್ಯ ಜಾತಿಯವರನ್ನು ಮದುವೆಯಾಗುವ ವಿಚಾರಕ್ಕೂ ಸಂಬಂಧ ಇರುವುದಿಲ್ಲ. ದೇವರ ನಂಬಿಕೆಯ ವಿಚಾರವನ್ನು ತರುವ ಮೂಲಕ ಜಾತಿಯ ಬಗ್ಗೆ ತಾತ್ಸರ ಮಾಡುವ ಸನ್ನಿವೇಶಗಳು ಗ್ರಾಮೀಣ ಭಾಗದಲ್ಲಿ ಹೆಚ್ಚಾಗಿರುತ್ತವೆ. ರಂಗಪ್ಪಗೌಡನ ದೈವದ ಮಾತುಗಳಿಗೆ ಸೋಮು ತನ್ನದೇ ಆದ ರೀತಿಯಲ್ಲಿ ಯೋಚಿಸುತ್ತಾನೆ. ತನ್ನ ಪ್ರೀತಿಗೂ ದೈವಕ್ಕೂ ಯಾವ ಸಂಬಂಧವಿದೆ ಎಂಬ ತಾರ್ಕಿಕ ಯೋಚನೆ ಮಾಡುತ್ತಾನೆ. ಪ್ರೀತಿಯ ಮುಂದೆ ತಂದೆಯ ಮಾತುಗಳಿಗೆ ತನ್ನದೆ ಆದ ವಿಭಿನ್ನವಾದ ನಿಲುವನ್ನು ತಾಳುತ್ತಾನೆ.

"ಬೇಕಾದರೆ ಅಪ್ಪ ಸಾಕಿದ ಕೋಳೀಮರಿಗಳನ್ನೆಲ್ಲ ಹೊತ್ತೊಯ್ಯಲಿ. ಈ ಮನೆ ಮಠವನ್ನೆಲ್ಲಾ ಎತ್ತಿ ಎಸೆಯಲಿ. ಅಪ್ಪ ಅಮ್ಮನನ್ನೂ ಹೊತ್ತುಕೊಂಡು ಹೋಗಲಿ. ನಾನು ಈ ರಾಜಗರುಡನನ್ನು ಕೊಲ್ಲುವದೇ ಇಲ್ಲ. ಇದನ್ನು ಕೊಂದು ನಾನು ಯಾವ ನರಕಕ್ಕೆ

ಹೋಗಲಿ! ಈ ವಿಷ್ಣು ವಾಹನವನ್ನು ಕೊಂದರೆ ಮೊನ್ನೆ ಸಿಬ್ಬಲುಗುಡ್ಡೆ ಭಟ್ಟ ಹೇಳಿದಂತೆ ರಣಬಿಸಿಲಿನಲ್ಲಿ ನರಕಕ್ಕೆ ನಡೆದೇ ಹೋಗಬೇಕಾದಿತು..."[೧೦] ಎಂದು ಸೋಮು ತನ್ನದೆ ಆದ ರೀತಿಯಲ್ಲಿ ಯೋಚಿಸುತ್ತಾನೆ.

ಸೋಮು ಲಿಂಗನಿಗೆ ಗರುಡ ದೇವರ ಬಗ್ಗೆ, ಸಿಬ್ಬಲು ಗುಡ್ಡೆ ಭಟ್ಟ ಕೊಟ್ಟ ಮೌಢ್ಯದ ವಿಚಾರವನ್ನು ಮುಂದುವರೆಸುತ್ತಾ ತನ್ನದೆ ಆದ ವ್ಯಾಖ್ಯಾನ ನೀಡುತ್ತಾನೆ. " 'ಲೋ, ಮುಂಡೇದೆ, ಕೇಳು ಸತ್ತಮೇಲೆ ನಮ್ಮ ಆತ್ಮಗಳನ್ನು ಹೊತ್ತು ಸ್ವರ್ಗ ಸೇರಿಸೋರು ಯಾರು? ಗರುಡ ದೇವರೇ–ಗರುಡನನ್ನು ಕೊಂದ ಪಾಪಕ್ಕೆ ಪ್ರಾಯಶ್ಚಿತ್ತ. ರಣ ಬಿಸಿಲಲ್ಲಿ ನಡಕೊಂಡು ನರಕಕ್ಕೆ ಹೋಗಬೇಕೋ, ಮೇಲೆ ರಣ ರಣ ಬಿಸಿಲು, ಕೆಳಗೆ ಕೆಂಡ ಮರಳು, ಕುಡಿಯೋಕೊಂದು ತೊಟ್ಟು ನೀರೂ ಇರಲ್ಲೋ' ಸಿಬ್ಬಲು ಗುಡ್ಡೆ ಭಟ್ಟ ಕೊಟ್ಟ ಮೌಢ್ಯಕ್ಕೆ ಇನ್ನೊಂದು ಚೂರು ಉಪ್ಪು ಖಾರ ಸೇರಿಸಿ ಲಿಂಗನ ತಲೆಗೆ ಯಥಾವತ್ತಾಗಿ, ಅಪ್ಪನಿಗೆ ಕೇಳಿದರೂ ಕೇಳಲೆಂದು, ಘಟ್ಟಿಯಾಗೇ ಹೇಳಿ ಇಳಿಸಿದ. ಆದರೆ ಏಕೋ, ಲಿಂಗನ ಮುಖ ಪೆಚ್ಚಾಯ್ತು. ಗೌಡರು ಎಲ್ಲೋ ನೋಡಿಬಿಟ್ಟರೇನೋ ಎಂದು ಸೋಮು ತಿಳಿದರೂ ಅದರ ಕಾರಣ ಅದಾಗಿರಲಿಲ್ಲ.

ಮೊನ್ನೆ ಮೊನ್ನೆ ದನವನ್ನು ಹೋರಿಗೆ ತೀರ್ಥಹಳ್ಳಿಗೆ ಅಟ್ಟಿಕೊಂಡು ಹೋದಾಗ, ಸಣ್ಣ ಗರುಡಮರಿ ಆಸ್ಪತ್ರೆ ಮಾಡಿನಿಂದ ಸೊಯ್ಯನೆ ಹಾರಿ ರೆಕ್ಕೆ ಸೋತು ಕೊಚ್ಚೆಯಲ್ಲಿ ಕೂತಿತ್ತು. ಅದ್ಯಾಕೆ ಲಿಂಗನಿಗೆ ಆ ಬುದ್ಧಿ ಬಂತೋ ಏನೋ, ಕಲ್ಲೆತ್ತಿಕೊಂಡು ಧಾವಿಸಿದ. ಕರಿಯ ದೊಡ್ಡ ಕಾಗೆಯಂತೆ ಕಲ್ಲೆತ್ತಿ ಕೊಂಡು ಬಂದ ಲಿಂಗನನ್ನು ನೋಡಿ ಮರಿ ತನ್ನ ಕೆಂಗುಲಾಬಿ ಮೊಗ್ಗಿನಂತ ಬಾಯನ್ನು ತೆರೆದು 'ಚೀವ್, ಚೀವ್' ಎಂದಿತು. ಆವೇಶದಲ್ಲಿ ನಿಷ್ಕರಣಿಯಾದ ಲಿಂಗ ಕಲ್ಲಿನಿಂದ ಅದರ ಬೆನ್ನಿಗೇ ಗುರಿ ಇಟ್ಟು ಹೊಡೆದ. 'ಚೀವ್' ಎಂದು ಇನ್ನೊಮ್ಮೆ ಕೂಗಿ ಆ ಮರಿ ಹಾಗೇ ಮಲಗಿತು. ಕೊಚ್ಚೆಯ ತಣ್ಣಗಿನ ನೀರು ಅದರ ತಲೆಯನ್ನು ನೇವರಿಸಿ ಹರಿಯ ತೊಡಗಿತು."[೧೧] ಈ ಸನ್ನಿವೇಶದಿಂದ ಲಿಂಗನು, ಲಿಂಗನು, ಸೋಮು ಹೇಳಿದ ಮಾತಿನಿಂದ ಆತಂಕಗೊಳ್ಳುತ್ತಾನೆ. ಹಿಂದೆ ಒಮ್ಮೆ ಗರುಡ ಪಕ್ಷಿ ಮರಿಯನ್ನು ಕಲ್ಲಿನಿಂದ ಹೊಡೆದ ಕಾರಣ ತನಗೆ ಮುಂದೆ ತೊಂದರೆಯಾಗುತ್ತದೆ ಎಂದು ಭಯಗೊಂಡಿರುತ್ತಾನೆ.

ಸೋಮು ಬಿತ್ತಿದ್ದ ಗರುಡದ ಬಗೆಗಿನ ಮೌಢ್ಯತೆಯ ಮಾತುಗಳು, ಆತನಿಗೆ ತಿರುಗುಬಾಣವಾಗುತ್ತದೆ. ಗರುಡ ಪಕ್ಷಿಯು ಕೋಳಿ ಮರಿಯನ್ನು ಹೊತ್ತುಕೊಂಡು ಹೋಗುವ ಸಂದರ್ಭದಲ್ಲಿ ಅದರ ಕಾಲಿನ ಉಗುರು ಸೋಮುವಿಗೆ ಚುಚ್ಚಿಕೊಳ್ಳುತ್ತದೆ. ಅದರಿಂದ ಹೇಗಾದರೂ ಮಾಡಿ ಬಿಡಿಸಿಕೊಳ್ಳುವ ಸಂದರ್ಭದಲ್ಲಿ, ಅದನ್ನು ಹೊಡೆಯುತ್ತಾನೆ. ಇದನ್ನು ಗಮನಿಸಿದ ಲಿಂಗನು ಅದೇ ಮುಗ್ಧತೆಯಿಂದ "ಹಂಗಾರೆ, ನೀವೂ ಬಿಸ್ಲಲ್ಲಿ ನಡೀಬೇಕು,"[೧೨] ಎಂದು ಹೇಳುತ್ತಾನೆ.

ಇದರ ಪರಿಣಾಮವನ್ನು ನೆನೆದ ಸೋಮು ಗರುಡ ಪಕ್ಷಿಯಿಂದ ತನಗಾದ ನೋವಿನಿಂದ ನಿಜವನ್ನೆ ಹೇಳಲು ಮುಂದಾಗುತ್ತಾನೆ. "ಹೋಗೋ, ಹೋಗೋ, ಅದೆಲ್ಲ ಬ್ರಾಂಬ್ರ ಬೊಗಳೆ ಅಲ್ಲೇನೋ. ಅವರ ಕುಲ ನಾಶನಾಗ, ಸ್ವರ್ಗ ಅಂತೆ. ನರಕ ಅಂತೆ, ಶುದ್ಧ ಬೊಗಳೆ, ಥತ್‌ತೇರಿ,"[೧೩] ಎಂದು ಹೇಳುತ್ತಾನೆ. ಕಥೆಗಳನ್ನು ರೋಚಕವಾಗಿ ಭಯಾನಕವಾಗಿ ಹುಟ್ಟುಹಾಕುವ ಕಥೆಗಾರರು ಹಾಸ್ಯಮಿಶ್ರಿತ ಸನ್ನಿವೇಶದಲ್ಲಿ ಮೌಢ್ಯತೆಯ ಗಾಂಭೀರ್ಯತೆಯನ್ನು ತಂದಿದ್ದಾರೆ.

ರಾಕ್ಷಸ, ದೆವ್ವ, ದೇವರುಗಳ ಭಯ ಉಂಟುಮಾಡುವ ಜನ ಸಮೂಹವನ್ನು ಕಥೆಗಾರರು ತೋರಿಸುತ್ತಾರೆ. ಮುಂದುವರೆದಂತೆ ದೇವರುಗಳೆ ಮನುಷ್ಯನ ಮೈಮೇಲೆ ಬಂದು ಸರಿತಪ್ಪುಗಳನ್ನು ವಿಚಾರಿಸುವುದು, ದಂಡಿಸುವುದು, ಎಂಬ ಅತಾರ್ಕಿಕ ವಿಷಯಗಳು ಬದುಕಿನ ಅವಿಭಾಜ್ಯ ಸಂಗತಿಗಳೆಂದು ಇಂದಿಗೂ ನಂಬುವ ಸ್ಥಿತಿಯಿದೆ. 'ಕಿರಗೂರಿನ ಗಯ್ಯಾಳಿಗಳು' ಕಥೆಯಲ್ಲಿ 'ಅಣ್ಣಪ್ಪ ದೇವರು' ಹೆಗ್ಡೆಯ ಮೈಮೇಲೆ ಬಂದಿದೆ ಎಂದು ನಂಬುತ್ತಾ, ನಾಗಮ್ಮ ತಪ್ಪು ಮಾಡಿರುವುದೋ ಸರಿಯೋ–ತಪ್ಪೋ ಎಂದು ಕೇಳುವ ಅಸಂಬದ್ಧ ಮಾತುಗಳು, ಮಾನವನ ಅನಾಗರಿಕ ವರ್ತನೆಯನ್ನು ತೋರಿಸುತ್ತವೆ.

ಆಹಾರಕ್ಕಾಗಿ, ಪ್ರಾಣಿ–ಪಕ್ಷಿಗಳ ಬೇಟೆಯಾಡುವುದು ಮಾನವನ ಸಹಜವಾದ ಕ್ರಿಯೆ. ಆಧುನಿಕ ಜಗತ್ತಿನಲ್ಲಿ ಮನುಷ್ಯನು ಬದಲಾವಣೆ ಪಡೆದರೂ ಸಹಜವಾದ ಕಸುಬಿನಿಂದ ಹೊರಬರುವುದಿಲ್ಲ. ಒಬ್ಬನ, ಒಂದು ಜಾತಿಯ ಬೇಟೆಗಳ ಮೇಲಿನ ನಂಬಿಕೆಗಳು ಮತ್ತೊಬ್ಬರಿಗೆ ಸಮಸ್ಯೆಗಳನ್ನು, ಅಸಹ್ಯಗಳನ್ನು ಹುಟ್ಟುಹಾಕಬಹುದು. ಕೆಲವೊಮ್ಮೆ ಸಸ್ಯಹಾರಿಗಳಿಗೆ ಮಾಂಸಾಹಾರಿಗಳ ಆಹಾರದ ನಂಬಿಕೆಗಳು ಕೆಡುಕಾಗಿ ಕಾಣಿಸುತ್ತವೆ. ಅವರವರ ನಂಬಿಕೆಗಳಿಂದ ಆಹಾರ ಪದ್ಧತಿಗಳು ಕೂಡ ಭಿನ್ನವಾಗಿರುತ್ತವೆ. ಬದುಕಿನ ರೀತಿನೀತಿಗಳು ಭಿನ್ನವಾಗಿರುತ್ತವೆ. ಸತ್ತ ಹೆಣವನ್ನು ಕೆಲವರು ಬಿಸಾಡುತ್ತಾರೆ. ಕೆಲವರೂ ಹೂಳುತ್ತಾರೆ, ಇನ್ನೂ ಕೆಲವರು ಬೆಂಕಿಗೆ ಹಾಕುತ್ತಾರೆ. ತೇಜಸ್ವಿಯವರು ಇಂಥ ಅಂಶಗಳನ್ನು ಬಹಳ ಸೂಕ್ಷ್ಮವಾಗಿ ಓದುಗರಿಗೆ ನೀಡುತ್ತಾರೆ. 'ನಿಗೂಢ ಮನುಷ್ಯರು' ಕಥೆಯಲ್ಲಿ ತಮ್ಮ ಜಾತಿ ಪದ್ಧತಿ, ನಂಬಿಕೆಗಳ ಅಡಿಯಲ್ಲಿ ತರುತ್ತಾರೆ. ಕಥೆಯಲ್ಲಿನ ಗೋಪಾಲಯ್ಯನ ಕೂಲಿಗಾರರಲ್ಲಿ ಒಬ್ಬನಾದ ಕಾಂಪ್ರನು, ಮತ್ತೊಬ್ಬ ಕೂಲಿಕಾರನಾದ ಮರಸನ ನಡವಳಿಕೆಗಳ ಬಗ್ಗೆ ದೂರುತ್ತಾನೆ. "ಅಯ್ಯಾ ನೋಡಿ, ಇಲ್ಲೆಲ್ಲಾ ಈ ಸೂಳೇಮಗನ ಅನಾಚಾರಾನ! ಮನಸನ ತಲೆ ಹಂಗೆ ಕಾಣ್ತದಲ್ಲ ಅದು ಮುಸಿಯನ ತಲೆ. ಓ ಅವೆಲ್ಲಾ ಮಂಗನ ತಲೆಗಳು!" ಎಂದು ಹಲ್ಲು ಚಿಲಿದುಕೊಂಡು ಬಿದ್ದಿದ್ದ ಮಂಗನ ತಲೆಬುರುಡೆಗಳನ್ನು ತೋರಿಸಿದ.

"ಒಂದು ದಿನ ಒಂದು ದೊಡ್ಡ ಮಂಗನ್ನ ಹೊಡೆದು ಚಿಕ್ಕ ಮಕ್ಕಳನ್ನು ಸೊಂಟದ ಮೇಲೆ ಎತ್ತಿಕೊಂಡು ಬರುವಂತೆ ಹೊತ್ತು ತಂದು ಸುಟ್ಟನಯ್ಯಾ. ಮೂರು ಹೊತ್ತು

ನಮಗೆ ರೇಜಿಗೆ, ಅಸಯ್ಯಾ, ತಿಂದ ಅನ್ನಾ ಹೊಟ್ಟೀಗೆ ಇಳಿಯೂದಿಲ್ಲ!" ಕಾಂಪ್ರ ನಡೆಯುತ್ತಾ ತನ್ನ ದೂರನ್ನು ಮುಂದುವರೆಸಿದ. "ನೋಡಿ, ಅಲ್ಲಿ ಓ ಆ ಮರದ ಪಕ್ಕದಲ್ಲಿ ಆ ಮಗೀನ ಹೆಣ ಎಸೆದಿದ್ದಾನೆ"[೧೪] ಎಂದು ತೋರಿಸಿದ. ಕಾಂಪ್ರನ ಮಾತುಗಳಲ್ಲಿ ಮರಸನ ರೀತಿರಿವಾಜುಗಳ ಮೇಲೆ ಆಕ್ಷೇಪವಿದೆ. ಹಾಗೆಯೇ ಮರಸನ ವಿಚಾರದಲ್ಲಿಯೂ ತಮ್ಮ ಜಾತಿ ಪ್ರಕಾರ ತಾನು ನಡೆದುಕೊಳ್ಳುತ್ತಿರುವುದು ಸರಿ ಎಂಬ ಅಭಿಪ್ರಾಯವೂ ಇದೆ. ಕಥೆಗಾರನು ಓದುಗನ ಯೋಚನೆಗೆ ಈ ಅಂಶವನ್ನು ಬಿಡುತ್ತಾನೆ. ಒಂದು ಆಹಾರ ಪದ್ಧತಿಯ ವಿಚಾರ, ಜಾತಿಯ ನಡವಳಿಕೆಯ ವಿಚಾರಗಳು, ಮತ್ತೊಬ್ಬ ವ್ಯಕ್ತಿಯ ನಡವಳಿಕೆಗೆ ವಿರುದ್ಧವಾಗಿರುತ್ತವೆ. ಅವು ಪೂರಕವಾದ ಅಂಶವನ್ನು ತಂದರೆ ಸಮಸ್ಯೆಗಳು ಕಾಣುವುದಿಲ್ಲ. ಒಂದು ವೇಳೆ ವ್ಯತಿರಿಕ್ತವಾದರೆ ಅವು ಸಮಸ್ಯೆಗಳಾಗಿಯೆ ಕಾಣುತ್ತವೆ. ಮುಂದವರೆದಂತೆ ಸಂಘರ್ಷಗಳಿಗೂ ಎಡೆ ಮಾಡಿಕೊಡುತ್ತವೆ.

ಮನುಷ್ಯನ ಮನೋಧರ್ಮಗಳಿಗೆ ಗಡಿ ಇರುವುದಿಲ್ಲ. ಧರ್ಮದ ವಿಚಾರವಾಗಿ ಯೋಚಿಸುವ ವ್ಯಕ್ತಿಗಳು ತಾವು ನಂಬಿರುವ ಧರ್ಮದ ವಿಚಾರಗಳು ಶ್ರೇಷ್ಠವೆಂದು ತೀರ್ಮಾನಿಸುತ್ತಾರೆ. ತೇಜಸ್ವಿಯವರು ಹೇಳಿದಂತೆ "ಒಂದು ಕೂದಲನ್ನು, ಒಂದು ಕಲ್ಲನ್ನು, ಒಂದು ಗುಹೆಯನ್ನು ನೋಡಿ ಬರಲು ನೂರಾರು ಮೈಲಿ ಹೋಗುತ್ತಾರೆ"...... ಇಂಥವರಿಗೆ ತಮ್ಮ ಮನೆಯ ಸುತ್ತಮುತ್ತ ಅಂಥ ಪವಿತ್ರ ಪ್ರೇಕ್ಷಣೀಯ ವಸ್ತುಗಳು ಕಸದಲ್ಲಿ ಬಿದ್ದು ಹೊರಳಾಡುವುದನ್ನು ಕಾಣಲಾಗುವುದಿಲ್ಲವೆ?"[೧೫] ಎಂದು ಅಭಿಪ್ರಾಯ ಪಡುತ್ತಾರೆ. ಪ್ರಯೋಗಶೀಲರಾದ ಕಥೆಗಾರರು, 'ಮೂಡಿಗೆರೆ' ಎಂಬ ಊರಿನ ಹೆಸರಿನ ಹಿಂದಿನ ಮರ್ಮವನ್ನು ತಿಳಿಯುತ್ತಾರೆ. ಹಾಗೆಯೇ ವಾಣಿಜ್ಯೀಕರಣದಿಂದ ಊರಿಗೆ ಆದ ಬದಲಾವಣೆಗಳನ್ನು ಹೇಳುತ್ತಾರೆ. ಪ್ರೇಕ್ಷಣೀಯ ಸ್ಥಳಗಳ ಹಿಂದೆ ವಾಣಿಜ್ಯೀಕರಣದ ಉದ್ದೇಶವೂ ಕೂಡ ಇರುತ್ತದೆ. ಬದಲಾದ ಕಾಲಕ್ಕೆ ವಾಣಿಜ್ಯದ ಸ್ವರೂಪ ಬದಲಾವಣೆಯನ್ನು ಪಡೆಯುತ್ತಾ ಬಂದಿತು. ಇದರ ಹಿಂದೆ ಇದ್ದ ವಿಷಯಗಳು ಕೂಡ ವಾಣಿಜ್ಯ ಸ್ವರೂಪವನ್ನು ಪಡೆದವು ಎಂಬುದಾಗಿದೆ.

ಸಾಕಲಾರದ ಪ್ರಾಣಿಗಳನ್ನು ದೈವದ ಸ್ವರೂಪವನ್ನು ಸೃಷ್ಟಿಸಿ ಭಕ್ತಿಯ ಮೂಲಕ ಲಾಭ ಮಾಡಿಕೊಳ್ಳುವ ಸಮಾಜದ ಮನಸ್ಸನ್ನು 'ದನಗಳು' ಕಥೆಯಲ್ಲಿ ಕಾಣಬಹುದು. ಪ್ರಯೋಗಶೀಲ ಕಥೆಗಾರರಾದ ತೇಜಸ್ವಿಯವರು ಊರಿನಲ್ಲಿ ಸಾಯುವ ಸ್ಥಿತಿಯಲ್ಲಿದ್ದ ಭಟ್ಟರ ಮುದಿ "ಗೋಮಾತೆ ಮುನೇಶ್ವರನ ಮರದ ಹತ್ತಿರ ಉಪವಾಸ ಮಾಡುತ್ತಿದೆಯಂತೆ ಎಂದು ಊರಿನ ಜನ ಮಾತನಾಡುತ್ತಿದ್ದಾರೆಂದೂ ಭಟ್ಟರ ವಿಧವೆ ಅಕ್ಕ ಬಂದು ಅದಕ್ಕೆ ಪೂಜೆ ಮಾಡಿ ಮತ್ತಷ್ಟು ಅರಿಶಿನ ಕುಂಕುಮ ಇಟ್ಟುಹೋಗುತ್ತಾಳೆ......ಆ ಮುನೇಶ್ವರನ ಮರದ ಬಳಿ ಅದು ಸತ್ತರೆ ಇನ್ನು ಅದಕ್ಕೆ ಪೂಜೆ ಪುರಸ್ಕಾರ ಅದಕ್ಕೆ ಸ್ಮಾರಕ ವರ್ಷಾವರ್ಷಾ

ಅದಕ್ಕೆ ಭಟ್ಟರ ಕೈಯಿಂದ ವ್ರತಾರಾಧನೆಗಳು ಎಲ್ಲಾ ಇನ್ನು ತೋಟದೊಳಗಡೆ ಆರಂಭವಾಗುತ್ತದಲ್ಲಾ ಎಂದು ಭಯವಾಗತೊಡಗಿತು."[೧೬] ಆದರೆ ಕರುಣಾಜನಕ ಸ್ಥಿತಿಯಲ್ಲಿದ್ದ ದನದ ಸ್ಥಿತಿಯನ್ನು ನೋಡಲಾರದೆ ತಾವೇ ಸಾಯಿಸಲು ಮುಂದಾಗುತ್ತಾರೆ. ಅದರ ಹಿಂದಿನ ಜನರ ನಂಬಿಕೆಗಳ ಮಾತುಗಳಿಂದ ಹಿಂದೆ ಸರಿಯುತ್ತಾರೆ. ಅತಾರ್ಕಿಕ ನಂಬಿಕೆಗಳ ಹಿಂದೆ ಬಿದ್ದ ಜನರ ಮನಸ್ಥಿತಿಗಳನ್ನು ಬದಲಾಯಿಸುವುದು ಸುಲಭಸಾಧ್ಯವಿಲ್ಲ ಎಂಬುವುದು ಕಥೆಗಾರರಾದ ತೇಜಸ್ವಿಯವರಿಗೆ ಸ್ವತಃ ಅರಿವಾಗುತ್ತದೆ.

ಲಂಕೇಶರ ಕಥೆಗಳಲ್ಲೂ ದೆವ್ವ–ದೇವರ ಪರಿಕಲ್ಪನೆಯನ್ನು ನೋಡಬಹುದು. "ಮನುಷ್ಯನು ಸದಾ ಅನುಕೂಲ ಸಿಂಧು." ತನ್ನ ಅನುಕೂಲಕ್ಕಾಗಿ ದೇವರು–ದೆವ್ವವನ್ನು ಸೃಷ್ಟಿಸುತ್ತಾನೆ. ನಂಬುತ್ತಾನೆ, ನಂಬಿಸುತ್ತಾನೆ ಕೊನೆಗೆ ಅವೆಲ್ಲಾ ಸುಳ್ಳು ಎಂಬ ವಿಚಾರವನ್ನು ಸಮಾಜಕ್ಕೆ ತಿಳಿಸುತ್ತಾನೆ. "ಮಾರಲಾಗದ ನೆಲ" ಕಥೆಯಲ್ಲಿ ಭರಮಪ್ಪನ ಮಗ ವಿಶ್ವನಾಥನು ಭೂಮಿಯನ್ನು ಮಾರಲು ಹಳ್ಳಿಗೆ ಹೋಗುತ್ತಾನೆ. ವಿಶ್ವನ ಭೂಮಿಯಲ್ಲಿ ದೆವ್ವ–ಭೂತಗಳಿವೆ ಎಂದು ಹಳ್ಳಿಯವರು ನಂಬಿರುತ್ತಾರೆ. ಊರಿನ ಪೂಜಾರಿಯ ಮೈಮೇಲೆ ಆಂಜನೇಯ ದೇವರನ್ನು ತರಿಸಿ, ಆ ಮೂಲಕ ದೆವ್ವ–ಭೂತ ಏನೂ ಇಲ್ಲವೆಂದು ಊರಿನ ಜನರನ್ನು ನಂಬಿಸುತ್ತಾರೆ. ಹಳ್ಳಿಯವರು ದೆವ್ವ–ಭೂತದ ಕಲ್ಪನೆಯೇ ಸುಳ್ಳು. ಆ ಸುಳ್ಳಿಗೆ ದೇವರು ಮೈಮೇಲೆ ಬಂದು ಏನೂ ಇಲ್ಲವೆಂದು ಹೇಳುವ ಮತ್ತೊಂದು ಸುಳ್ಳು. ಹಳ್ಳಿಯ ಜನರ ಮೂಢನಂಬಿಕೆಗಳ ಜೊತೆಯಲ್ಲಿಯೇ ಒಂದು ಸುಳ್ಳಿನ ಹೇಳಿಕೆಗೆ ಮತ್ತೊಂದು ಸುಳ್ಳು ಹೇಳಿಸಿ ನಂಬಿಸುವ ಕೆಲಸ ನಡೆಯುತ್ತದೆ. ವ್ಯಕ್ತಿಗಳಿಗೆ ನಂಬಿಕೆಗಳು–ಆಚರಣೆಗಳಿಂದ ಆಗುವ ಲಾಭ–ನಷ್ಟಗಳನ್ನು ಈ ಕಥೆಯಲ್ಲಿ ನೀಡುತ್ತಾರೆ.

ನಂಬಿಕೆ ಮತ್ತು ಆಚರಣೆಗಳ ನಡುವೆ ಸಿಲುಕಿ ನರಳುವ ಹೆಣ್ಣೊಬ್ಬಳ ಜೀವನವನ್ನು ಕುರಿತಂತೆ ಅನಂತಮೂರ್ತಿಯವರ 'ಘಟಶ್ರಾದ್ಧ' ಕಥೆ ಹೆಚ್ಚಿನ ಮಹತ್ವವನ್ನು ಪಡೆಯುತ್ತದೆ. ಯಮುನಾಳಿಗೆ ಚಿಕ್ಕವಯಸ್ಸಿನಲ್ಲಿಯೇ ಗಂಡನನ್ನು ಕಳೆದುಕೊಂಡು ವೈಧವ್ಯ ಪ್ರಾಪ್ತಿಯಾಗುತ್ತದೆ. ಆಕೆಯೂ ಬೆಳೆದಂತೆ ಪುರುಷ ಸಮಾಜದ ಜನ ಅವಳ ದೈಹಿಕ ಭಾವನೆಗಳಿಗಿಂತ ಆಚರಣೆ–ನಂಬಿಕೆಗಳಿಗೆ ಜೋತುಬೀಳುತ್ತಾರೆ. ಸಹಜ ವಯಸ್ಸಿನ ದೈಹಿಕ ಕಾಮನೆಯಲ್ಲಿ ಸಿಲುಕಿದ ಹೆಣ್ಣನ್ನು ಪುರುಷ ಸಮಾಜದ ರೀತಿರಿವಾಜುಗಳ ಅಡಿಯಲ್ಲಿ ಸಿಲುಕಿಸಿ 'ಜಾತಿಯಿಂದ ಹೊರಗೆ ಹಾಕುತ್ತಾರೆ' ಆದರೆ ಅದೆ ಸಮಾಜ ಹೆಂಡತಿಯನ್ನು ಕಳೆದುಕೊಂಡ ಉಡುಪರಿಗೆ ಇನ್ನೊಂದು ಮದುವೆಯಾಗಲು ಅವಕಾಶ ಮಾಡಿಕೊಡುತ್ತದೆ. ಈ ರೀತಿಯ ಅವೈಜ್ಞಾನಿಕ ಕ್ರಮಗಳು ಹಿಂದಿನಿಂದಲೂ ನಡೆದು ಬಂದಿವೆಂಬುವುದಕ್ಕೆ ಈ ಕಥೆಯೂ ಉದಾಹರಣೆಯಾಗುತ್ತದೆ.

ಅನಂತಮೂರ್ತಿಯವರ 'ಅಕ್ಕಯ್ಯ' ಕಥೆಯಲ್ಲಿ ಬರುವ ಪಾತ್ರಧಾರಿ ಶ್ರೀನಿವಾಸನು ತನ್ನ ಅಕ್ಕಯ್ಯಳ ಬಗ್ಗೆ ಯೋಚಿಸುತ್ತಿರುವಾಗ, ಹಿಂದೂ ಸಂಸ್ಕೃತಿಯ ಗೊಡ್ಡು ನಂಬಿಕೆಗಳ

ಬಗ್ಗೆ ಅವನು ನಿಷ್ಠುರವಾದ ವ್ಯಕ್ತಿಯಾಗಿರುತ್ತಾನೆ. ಈ ಹಿನ್ನೆಲೆಯಲ್ಲಿ ನಿರೂಪಕರಿಗೆ ಒಂದು 'ಅಬ್ಸರ್ಡ್' ಕಥೆಯನ್ನು ಬರೆಯುವಂತೆ ಹೇಳುತ್ತಾನೆ. ಆ ಕಥೆಯಲ್ಲಿ "ಶಿವಮೊಗ್ಗದ ಪ್ರಸಿದ್ಧ ಗೋಪಿ ಹೋಟೇಲಿನ ಮುಂಭಾಗದಲ್ಲಿ ಬೀಡ ಸಿಗರೇಟುಗಳ ಅಂಗಡಿ ಇಟ್ಟುಕೊಂಡವನೊಬ್ಬ ಅಕ್ಕಯ್ಯನಿಗೆ ಬರೆಹಾಕಿ ಅಟ್ಟಿದ ಗಂಡನೆಂಬುದು ಶ್ರೀನಿವಾಸನ ಅಣ್ಣನಿಗೆ ಹೇಗೋ ಗೊತ್ತಾಗಿಬಿಟ್ಟಿತು. ಅವನು ಪೊಲೀಸರ ಸಹಾಯದಿಂದ ಅವನನ್ನು ಹಿಡಿಸಿ, ಠಾಣೆಗೆ ಕರೆಸಿದ್ದ. ಅಲ್ಲಿ ಅಕ್ಕಯ್ಯನ ಗಂಡ ತುಟಿ ಪಿಟಕ್ಕೆನ್ನದೆ ಅಕ್ಕಯ್ಯನನ್ನು ತನ್ನ ಹೆಂಡತಿಯೆಂದು ಒಪ್ಪಿಕೊಂಡು, ತನ್ನ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಸಿಕೊಳ್ಳಲು ರೆಡಿಯಾಗಿ ಹೊರಟುಬಿಟ್ಟನು. ಈ ಪ್ರಾಯಶ್ಚಿತ್ತಕ್ಕೆ ಕಾರಣ ಅವರ ಪಾಪದ ಭಾವನೆಯಾಗಿರಲಿಲ್ಲ. ಪ್ರಸ್ತ ಮಾಡಿಕೊಳ್ಳದಂತೆ ಹೆಂಡತಿಯನ್ನು ಬಿಟ್ಟವ ತಾನಾದ್ದರಿಂದಲೂ, ಬ್ರಾಹ್ಮಣನಾಗಿ ತನಗೆ ಸಲ್ಲಬೇಕಾದ ದಾನ ದಕ್ಷಿಣೆಯನ್ನು ಸ್ವೀಕರಿಸಿಲು ಹಕ್ಕಿಲ್ಲದವನಾಗಿ ಬಿಟ್ಟಿದ್ದರಿಂದಲೂ, ಅವನಿಗೆ ಆ ಶಾಸ್ತ್ರಗಳ ಪ್ರಕಾರ ಆಗಬೇಕಾದ್ದೆಲ್ಲ ಸಾಂಗವಾಗಿ ಆಗಬೇಕಾಗಿತ್ತು. ಅಷ್ಟೆ. ಅಕ್ಕಯ್ಯ ಮುಟ್ಟು ನಿಂತವಳು, ಅವಳ ಈ ಬಿಕನಾಸಿ ಗಂಡ ಹಲ್ಲು ಕಳೆದುಕೊಂಡವ, ಬೀಡಿ ಸೇದುತ್ತ ಕೆಮ್ಮುವವ, ಪ್ರತೀ ಸಂಜೆ ಒಂದು ಬಾಟಲಿಯಾದರೂ ಸಾರಾಯಿ ಕುಡಿದು ಮುಖ ಊದಿಸಿಕೊಂಡವ. ಆದರೂ ಪರವಾಯಿರಲಿಲ್ಲ. ಶಾಸ್ತ್ರದ ಪ್ರಕಾರ ಆಗಿಬೇಕಾದ ಪ್ರಸ್ತ ಆಗಬೇಕಾಗಿತ್ತು.

ಈ ಸುಡುಗಾಡು ಬ್ರಾಹ್ಮಣ ಕಾರು ಹತ್ತಿ ಮನೆಗೆ ಬರುವಾಗ ದಾರಿಯಲ್ಲಿ ಕೊಡಬೇಕಾದ ಬಂಗಾರ ಕೊಡಲಿಲ್ಲವೆಂದು ತನ್ನ ಗತಿಸಿದ 'ಮಾವಯ್ಯ'ನನ್ನು ನಿಂದಿಸಿದ. ದೇವಸ್ಥಾನದಲ್ಲಿ ತಟ್ಟೆಯಲ್ಲಿ ಎಣ್ಣೆಯಿಟ್ಟು ಹೆಂಡತಿಯ ಮುಖ ನೋಡಿದ್ದ. ಮತ್ತೆ ಜರಿಪೇಟವನ್ನೂ ಬಾಸಿಂಗವನ್ನು ತೊಟ್ಟು, ಅಗ್ನಿಸಾಕ್ಷಿಯಾಗಿ ಅಕ್ಕಯ್ಯನ ಜೊತೆ ಪ್ರಸ್ತ ಮಾಡಿಸಿಕೊಂಡ ರಾತ್ರಿ ಹೆಂಡತಿಯ ಪಕ್ಕದಲ್ಲೂ ಮಲಗಿದ್ದ. ಆದರೆ ಅವಳು ಒದ್ದುಕೊಂಡು ಎದ್ದುಬಿಟ್ಟಿದ್ದಳು. ತನ್ನ ತಮ್ಮಂದಿರ ಎದುರು ಸೆರಗಿನಿಂದ ಬಾಯಿ ಮುಚ್ಚಿಕೊಂಡು ನಾಚುತ್ತ 'ಅವರು ಎಲ್ಲೆಲ್ಲೋ ಮುಟ್ಟಲು ಬಂದರು. ಹೇಸಿಗೆಯಾಗಿ ಬಿಟ್ಟಿತು' ಎಂದಿದ್ದಳು."[೯೭] 'ಬ್ರಾಹ್ಮಣತನದ ಸಂಪ್ರದಾಯಗಳು ಆ ಜನಾಂಗದ ಬ್ರಾಹ್ಮಣ್ಯವನ್ನು ಆಚರಣೆಗಳೆಂಬ ಹೆಸರಿನಲ್ಲಿ ವೃತ್ತಿ ಮಾಡುವ ವ್ಯಕ್ತಿಗಳ ಲಾಭಕ್ಕೆ ಮಾಡಿಕೊಂಡತೆ ಕಾಣುತ್ತವೆ. ಅನಂತಮೂರ್ತಿಯವರ ಮತ್ತೊಂದು ಕಥೆ 'ಪ್ರಸ್ತ' ದಲ್ಲಿ ಪುಂಡರೀಕನ ಹೆಂಡತಿ ನೇತ್ರಾವತಿಯು ಗಂಡನು ಬಿಟ್ಟಿರುವ ಕೂದಲಿನ ಬಗ್ಗೆ ಆಕ್ಷೇಪ ವ್ಯಕ್ತಪಡಿಸುತ್ತಾಳೆ. ಪ್ರತ್ಯುತ್ತರವಾಗಿ,

" 'ಸೋಮವಾರ ಮಾಡಿಸಿಕೊಳ್ಳುತ್ತೇನೆಯೇ' ಎಂದು ಪುಂಡರೀಕ ನೇತ್ರಾವತಿಯನ್ನು ಎಳೆದು ತಬ್ಬಿಕೊಂಡ.

'ಮೈಲಿಗೆ ಮುಟ್ಟಿಸಿಕೊಳ್ಳುವಾಗ ನಿಮ್ಮ ಆ ಹಾಳು ಜುಟ್ಟನ್ನ ಕತ್ತರಿಸಿ ಹಾಕಿ. ಸಂಪೂರ್ಣ ಕ್ರಾಪು ಬಿಡಿ'.

‘ಅಮ್ಮನಿಗೆಂದು ಒಂದು ಚೂರು ಇರಲಿ ನೇತ್ರಾ, ಇವತ್ತೊ ನಾಳೆಯೊ ಅವಳು ಸಾಯುತ್ತಾಳೆ. ಅವಳನ್ನು ಯಾಕೆ ನೋಯಿಸಬೇಕು?’

‘ನನ್ನನ್ನು ಮಾತ್ರ ಅವು ಊರಿಸಬಹುದಲ್ಲ?’

‘ಸಂಪೂರ್ಣ ಕ್ರಾಪು ಮಾಡಿಸಿದರೆ ಹೊಟ್ಟೆಪಾಡು ಹೊರೆಯೋದು ಹೇಗೆ ನೇತ್ರಾ? ಜುಟ್ಟು ಬಿಟ್ಟಿದ್ದರೆ ಮಾತ್ರ ಬ್ರಾಹ್ಮಣಾರ್ಥ ಪೌರೋಹಿತ್ಯ ಸಿಗೋದು, ಸಂಭಾವನೆಗೆ ಹೋದರೆ ಅಡಿಕೆ ಸಿಗೋದು’ ”[೧೮] ಎಂದು ತನ್ನ ಸಂಪಾದನೆಯ ಒಳಮರ್ಮವನ್ನು ತಿಳಿಸುತ್ತಾನೆ. ಮನುಷ್ಯನಲ್ಲಿ ನಂಬಿಕೆ ಮತ್ತು ಆಚಾರಗಳನ್ನು ಹುಟ್ಟು ಹಾಕಿ ಲಾಭ ಮಾಡಿಕೊಳ್ಳುವ ವ್ಯಕ್ತಿಗಳು ಸಮಾಜದಲ್ಲಿ ಕಾಣಸಿಗುತ್ತಾರೆ ಎಂಬುದಕ್ಕೆ ಕೆಲವು ಉದಾಹರಣೆಗಳಷ್ಟೆ.

ಅನುಕೂಲಕ್ಕಾಗಿ ಹುಟ್ಟಿಕೊಂಡ ಆಚರಣೆಗಳು ಮತ್ತು ನಂಬಿಕೆಗಳು, ಸಂಪ್ರದಾಯಗಳೆಂಬ ಹೆಸರಿನಲ್ಲಿ ವ್ಯಕ್ತಿಗಳ ಶೋಷಣೆಯ ಕೇಂದ್ರಗಳಾದವು. ಇವು ಅನಾದಿ ಕಾಲದಿಂದಲೂ ಬದಲಾವಣೆ ಪಡೆಯುತ್ತಿವೆ. ಆದರೆ ಶಾಶ್ವತವಾಗಿ ಉಳಿದಿವೆ. ಆಧುನಿಕ ಮನಸ್ಥಿತಿಯ ಕಥೆಗಾರರು ಈ ಅಂಶಗಳು ಸಮಾಜದಲ್ಲಿ ಜೀವಂತವಾಗಿರುವುದನ್ನು ತಮ್ಮ ಕಥೆಗಳ ಮೂಲಕ ನಿರೂಪಿಸಿದ್ದಾರೆ.

### ೩.೩. ವೈಚಾರಿಕತೆಯ ಸವಾಲುಗಳು.

ವ್ಯಕ್ತಿಗಳ ನಡವಳಿಕೆಗಳು, ಸಮಾಜದ ರೀತಿರಿವಾಜುಗಳನ್ನು ವಸ್ತುಗಳನ್ನಾಗಿರಿಸಿ ಕಥೆಗಾರರು ತಮ್ಮ ಕಥೆಗಳನ್ನು ಕಟ್ಟಿಕೊಟ್ಟಿದ್ದಾರೆ. ಇಂಥಹ ಕಥೆಗಳಲ್ಲಿ ವೈಚಾರಿಕ ಚಿಂತನೆಗಳು ಸಹಜವಾದ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸಿದಾಗ ನಾಗರಿಕ ಸಮಾಜದಲ್ಲಿನ ವೈಚಾರಿಕತೆಯ ಸವಾಲುಗಳು ಕಂಡುಬರುತ್ತವೆ.

ತೇಜಸ್ವಿಯವರ 'ಅವನತಿ' ಕಥೆಯಲ್ಲಿ, ಇಸ್ಲಾಪುರದ ಸೂರಾಚಾರಿ ಮತ್ತು ಇತ್ತಾವರದ ಸುಬ್ಬಯ್ಯನ ಹೆಂಡತಿ ಗೌರಿಯ ಪ್ರಧಾನ ಪಾತ್ರಗಳ ಹಿನ್ನೆಲೆಯಲ್ಲಿ ಕಥೆ ರೂಪುಗೊಳ್ಳುತ್ತದೆ. ಸೂರಾಚಾರಿಯು ಕೆತ್ತನೆಯ ಕೆಲಸದಲ್ಲಿ ತೊಡಗಿಸಿಕೊಂಡವನಷ್ಟೆ ಅಲ್ಲದೆ ವ್ಯಾಪರ ದಲ್ಲಾಳಿಯೂ ಆಗಿರುತ್ತಾನೆ. ಒಮ್ಮೆ ವ್ಯಾಪರದ ನಿಮಿತ್ತ ಸುಬ್ಬಯ್ಯನನ್ನು ಭೇಟಿಯಾಗುವಾಗ ಗೌರಿಯ ವಿಚಾರವೂ ಪ್ರಸ್ತಾಪವಾಗುತ್ತದೆ. ಗೌರಿ ಸೌಂದರ್ಯವತಿ. ಅವಳ ಸೌಂದರ್ಯ ಬಿಲ್ಲೋರ ಜಾತಿಯಲ್ಲಿ ವಿಶಿಷ್ಟವಾಗಿರುತ್ತದೆ. ಇಂಥವಳು ಮದುವೆಯಾಗಿ ನಾಲ್ಕು ವರ್ಷ ಕಳೆಯುವುದರ ಒಳಗಾಗಿ ಹುಟ್ಟಿದ ಮೂರು ಮಕ್ಕಳು ಸ್ವಲ್ಪ ಕಾಲದಲ್ಲಿಯೇ ಸತ್ತು ಹೋಗುತ್ತಿರುತ್ತವೆ. ಇಂಥ ಘಟನೆಯನ್ನು ಸುಬ್ಬಯ್ಯನು ಸೂರಾಚಾರಿಯ ಬಳಿ ಪ್ರಸ್ತಾಪ ಮಾಡುತ್ತಾನೆ. " 'ಸೂರಾಚಾರ್ರೆ, ನನ್ನದು ಒಂದು ಕತೆಯಾಗಿ ಹೋಗಿದೆ ಮಾರಾಯರೆ! ಹಡೆದವು ಒಂದು ಉಳಿಯಾದಿಲ್ಲಲ್ಲ ನನ್ನ ಹೆಂಗ್ಸಿಗೆ! ಏನು ಮಾಡು ಹೇಳಿ?' ಎಂದು ಸುಬ್ಬಯ್ಯನು ಸೂರಾಚಾರಿಯನ್ನು ಕೇಳಿದ. ಬೇಕೆಂದೆ ಅವನು ಈರೇಗೌಡನ ಎದುರು ಈ ವಿಷಯ ಎತ್ತಿದ್ದ. ಏಕೆಂದರೆ 'ನನಗೆ ಒಳರೋಗ ಅಂದನಲ್ಲ ಸೂರಾಚಾರ್ರೆ ಹೇಳಲಿ' ಎಂದು ಒಳಗೇ ಅಂದುಕೊಂಡ.

ಸೂರಾಚಾರ್ರು ಸುಮಾರು ಹೊತ್ತು ಯೋಚಿಸಿ 'ಹುಟ್ಟಿದ ಕೂಡಲೇ ಸಾಯ್ತಾವೋ ನಾಲ್ಕು ದಿನ ಇದ್ದು ಸಾಯ್ತವೋ' ಎಂದರು.

'ನಾಕು ದಿನ ಇರ್ತವೆ, ವೈನಾಗಿರ್ತವೆ, ಹಾಲು ಕುಡಿದು ಅತ್ತು ನಕ್ಕು. ಎಲ್ಲ ಒಂದು ತಿಂಗಳ ಮಟ್ಟಿಗೆ. ಕೊನೆಗೆ ಏನಾರೂ ಒಂದಾಗಿ ಸಾಯ್ತವೆ! ಒಂದಲ್ಲಾ ಎರಡಲ್ಲಾ ನನ್ನವು ಮೂರು ಮಕ್ಕಳೂ ಹ್ವಾದ್ವು.'

'ಇನ್ನೇನಿಲ್ಲಾ ಏನಾರೂ ಮಲೆಗಿಲೆ ದೋಸಾನಾ! ಅಂತ' ಎಂದು ಯೋಚಿಸುತ್ತಾ ಸ್ವಗತದ ಧಾಟಿಯಲ್ಲಿ ಸೂರಾಚಾರ್ರು ಗೊಣಗಿದರು.

'ಹ್ನಾ, ನೋಡಿ ನಾನೂ ಅದೇ ಯೋಚ್ನೇ ಮಾಡ್ತಿದ್ದೆ ಮನಸ್ಸಿನ ಒಳಗೇ' ಎಂದು ಖುಷಿಯಿಂದ ಹೇಳಿದ ಸುಬ್ಬಯ್ಯ. ಅವನಿಗೆ 'ಒಳರೋಗ' ಎಂದು ಸೂರಾಚಾರ್ರು ಹೇಳದಿದ್ದುದು ಸಂತೋಷ ತಂದಿತ್ತು. ಅಷ್ಟಲ್ಲದೆ ಅವನೂ ಅದನ್ನೇ ಗುಮಾನಿಸುತ್ತಿದ್ದುದರಿಂದ ವೈದ್ಯರಾದ ಸೂರಾಚಾರಿಯೂ ಅದೇ ನಿರ್ಣಯಕ್ಕೆ ಬರುವಂತೆ ರೋಗೆ ಚಿಹ್ನೆಗಳನ್ನು ಹೇಳಿದ್ದ.

'ಸೈ ಬಿಡು ಇದು ಮಲೆ ದೋಸಾನೆ. ನೀ ಬೇರೆ ಯೋಚನೆ ಮಾಡೋದೆ ಬ್ಯಾಡ. ಮಲೇಲಿ ಮೇಲುಗಡೆ ಒಂದು ನೀಲಿ ನರ ಇರ್ತದೆ. ಅದರೊಳಗಿರ್ತದೆ ನೋಡು ಹುಳ. ಅರಿಶಿನದ ಕೊಂಬಿನ ಕೆಂಡಾ ಮಾಡಿ ಅದನ್ನು ಸುಟ್ಟು ತಗೀಬೇಕು. ಇಲ್ಲದಿದ್ದರೆ ಒಂದಲ್ಲಾ ಮೂರಲ್ಲಾ ನೂರು ಮಕ್ಕಳಾದರೂ ಒಂದು ಉಳಿಯಕ್ಕಿಲ್ಲ"೧೯ ಎಂದು ಹೇಳುವ ಮೂಲಕ ಯಾವ ವೈದ್ಯಕೀಯ ಜ್ಞಾನವಿಲ್ಲದಿದ್ದರೂ ಸೂರಾಚಾರಿ ವೈದ್ಯನ ರೀತಿಯಲ್ಲಿ 'ಮಕ್ಕಳ ಸಾವಿಗೆ' ತನ್ನದೆ ಆದ ರೀತಿಯಲ್ಲಿ ಪರಿಹಾರವನ್ನು ಸೂಚಿಸುವ ಮಾತನಾಡುತ್ತಾನೆ. ಗ್ರಾಮೀಣ ಭಾಗದ ಜನರ ನಾಟಿ ವೈದ್ಯ ಪದ್ಧತಿ ಪ್ರಯೋಗಗಳು, ವೈದ್ಯಕೀಯ ಜ್ಞಾನವಿಲ್ಲದ ವ್ಯಕ್ತಿಗಳ ಮೂಲಕ ಬಳಕೆಯಾದರೆ ಅದರಿಂದಾಗುವ ಅಪಾಯದ ಬಗ್ಗೆ ಈ ಕಥೆ ಬೆಳಕು ಚೆಲ್ಲುತ್ತದೆ.

ಸೂರಾಚಾರಿಯೂ ಸುಬ್ಬಯ್ಯನ ಹೆಂಡತಿ ಗೌರಿಯ ಸೌಂದರ್ಯದ ಗುರುತು ಸ್ತನವಾಗಿರುತ್ತದೆ. ಅದನ್ನು ಹಾಳುಮಾಡುವ ವಿಕಾರ ಮನಸ್ಸಿನ ವ್ಯಕ್ತಿಯಾಗಿ ಕಥೆಯಲ್ಲಿ ಕಾಣಿಸಿಕೊಳ್ಳುತ್ತಾನೆ. ಕಥೆಯೂ ಕೂಡ ವ್ಯಕ್ತಿಗಳ ಅವನತಿಯ ಸ್ಥಿತಿಗೆ ತೆಗೆದುಕೊಂಡು ಹೋಗುವ ಕೆಲಸ ಮಾಡುತ್ತದೆ. ಯಾವುದೇ ವೈದ್ಯಕೀಯ ಜ್ಞಾನವಿಲ್ಲದ ಸೂರಾಚಾರಿಯ ಮಾತನ್ನು ನಂಬುವ ಸುಬ್ಬಯ್ಯನಂತಹ ಮನಸ್ಸಿನ ವ್ಯಕ್ತಿಗಳು ಸಮಾಜದಲ್ಲಿ ಸಹಜವಾಗಿ ಅವಿವೇಕತನಕ್ಕೆ ಬಲಿಯಾಗುವುದನ್ನು ತೇಜಸ್ವಿಯವರು ಗುರ್ತಿಸುತ್ತಾರೆ. ಮಾಟ ಮಂತ್ರದ ರೂಪದಲ್ಲಿ ಗೊಂಬೆಗಳನ್ನು ತಯಾರಿಸಿ ವಿಕೃತ ವ್ಯಕ್ತಿಯಾಗಿ ಕಾಣಿಸಿಕೊಳ್ಳುವ ಸೂರಾಚಾರಿಯಂಥ ಅವಿವೇಕಿಗಳು ತಾವು ಪ್ರಯೋಗಿಸುವ ಮೂರ್ಖತನದ ವಿಚಾರಗಳಿಗೆ ಅಮಾಯಕರು ಬಲಿಯಾಗುವುದನ್ನು ಓದುಗರು ಕಾಣಬಹುದು.

ವೈಚಾರಿಕ ನೆಲೆಗಟ್ಟಿನಲ್ಲಿ ಬೆಳೆಯುವ ವ್ಯಕ್ತಿಗಳನ್ನು, ಅವರ ಕಾರ್ಯಗಳನ್ನು, ಅತಿಮಾನುಷರನ್ನಾಗಿ ಅವರ ಕಾರ್ಯಗಳನ್ನು ಅತಿಮಾನೀಕರಿಸಿ ನಂಬುವ ಮೌಢ್ಯತೆಯುಳ್ಳ ಜನರ ಮನಸ್ಥಿತಿಗಳನ್ನು ಸಮಾಜದಲ್ಲಿ ಸಹಜವಾಗಿ ಕಾಣಬಹುದಾಗಿದೆ. ತೇಜಸ್ವಿಯವರ 'ಕುಬಿ ಮತ್ತು ಇಯಾಲ' ಕಥೆಯೂ ಈ ನಿಟ್ಟಿನಲ್ಲಿ ರೂಪುಗೊಂಡಿದೆ.

ಕುಬಿಯ ಪೂರ್ತಿ ಹೆಸರು ಡಾಕ್ಟರ್ ವಿ.ಎಸ್.ಕುಬೇರನಾಥ. ಈತನು ಅತಿ ಹಿಂದುಳಿದ ಭೈರಾಪುರದಲ್ಲಿ ಸರ್ಕಾರಿ ಆಸ್ಪತ್ರೆಯ ವೈದ್ಯನಾಗಿರುತ್ತಾನೆ. ಇವನ ಹೆಸರು ಹಂತಹಂತವಾಗಿ ಊರಿನಲ್ಲಿ ಹೆಸರನ್ನು ಪಡೆಯುತ್ತದೆ. ಆದರೆ ಬರಬರುತ್ತಾ ಆ ಊರಿನ ಜನರು ಅವನನ್ನು ಅತಿಮಾನುಷ ವ್ಯಕ್ತಿಯಾಗಿ ನೋಡತೊಡಗುತ್ತಾರೆ. ಸಹಜವಾಗಿ ಇಂಥ ಮೂಢ ನಂಬಿಕೆಗಳನ್ನು ಹೊಂದಿರುವ ವ್ಯಕ್ತಿಗಳ ಬಗ್ಗೆ ಕುಬಿಯು ವಿರೋಧವನ್ನು ವ್ಯಕ್ತಪಡಿಸುತ್ತಿರುತ್ತಾನೆ. ಆದರೂ ಅಲ್ಲಿನ ಜನರು ಅವನನ್ನು ಸಾಕ್ಷಾತ್ ದೇವರೆಂದು ನಂಬುತ್ತಾರೆ.

ಕುಬೇರನ ವೈಜ್ಞಾನಿಕ ಯೋಚನೆಗಳು ಹಾಗೂ ಹಳ್ಳಿಯ ಸಾಮಾನ್ಯ ಜನರ ಮೌಢ್ಯತೆಗಳು ಜೊತೆಜೊತೆಯಲ್ಲಿಯೇ ಸಾಗುತ್ತವೆ. ಸ್ವತಃ ಸರ್ಕಾರಿ ಆಸ್ಪತ್ರೆ ಕಾಂಪೌಂಡರ್ ರಾಮರಾಯನಿಗೆ ಆದ ರೋಗ ವಾಸಿ ಮಾಡಿದ ಡಾಕ್ಟರ್ ಕುಬಿಯನ್ನು 'ಸಾಕ್ಷಾತ್ ಕೃಷ್ಣ ಪರಮಾತ್ಮನೆಂದು' ನಂಬುತ್ತಾನೆ. ಆತನು " ತಾನು ಅರ್ಧಪ್ರಜ್ಞಾವಸ್ಥೆಯಲ್ಲಿದ್ದಾಗ ಆರೈಕೆ ಮಾಡುತ್ತಿದ್ದ ಕುಬೇರನ ಕೈಯಲ್ಲಿ ಸಾಕ್ಷಾತ್ ಕೃಷ್ಣ ಪರಮಾತ್ಮನೇ ಇದ್ದುದನ್ನು ಕಂಡೆನೆಂದು ರಾಮರಾಯ ಊರು ತುಂಬಾ ಪ್ರಚಾರ ಮಾಡುತೊಡಗಿದ್ದನು. ಕುಬೇರ ಗದರಿದಾಗ ತಾನು ಸುಳ್ಳು ಹೇಳುತ್ತಿಲ್ಲವೆಂದೂ ಖಂಡಿತವಾಗಿಯೂ ಕಂಡನೆಂದೂ, ಇಲ್ಲದಿದ್ದರೆ ಎರಡು ಹಗಲು ಎರಡು ರಾತ್ರಿ ನಿರ್ಜೀವವಾಗಿ ಬಿದ್ದಿದ್ದ ತನ್ನನ್ನು ಸಾಮಾನ್ಯರಿಗೆ ಬದುಕಿಸಲು ಸಾಧ್ಯವಿಲ್ಲವೆಂದೂ ಹೇಳಿದ. ಕೊನೆಗೆ 'ನೀವು ಏನು ಬೇಕಾದರೂ ಹೇಳಿ ಸಾರ್, ನನಗೆ ಸತ್ಯ ಏನೆಂದು ಗೊತ್ತಿರುವಾಗ ಏಕೆ ನನಗೆ ಚಿಂತೆ!' ಎಂದು ಬಿಟ್ಟ.

ಈ ರೀತಿಯ ಮೂಢ ವಾರ್ತೆಗಳು ಯಾವ ತರಹ ಇದ್ದವೆಂದರೆ ಅನೇಕ ಬಾರಿ ಕುಬೇರನಿಗೆ ರೋಗ ವಾಸಿಯಾದುದು ತನ್ನ ಔಷಧಿಯಿಂದಲೋ ಅವರ ನಂಬುಗೆಯಿಂದಲೋ ಎಂದು ಗುಮಾನಿಯಾಗುತ್ತಿತ್ತು. ಸಾಮಾನ್ಯ ವೈದ್ಯನಾಗಿದ್ದರೆ ನಿಜವಾಗಿಯೂ ಕಂಗೆಡುತ್ತಿದ್ದರು. ಕುಬಿ ವೈದ್ಯ ವಿಜ್ಞಾನಕ್ಕೆ ದ್ರೋಹ ಬಗೆಯದೆ ಕಾರ್ಯಕಾರಣಬದ್ಧ ಭೌತ ಪ್ರಪಂಚ ಒಂದೇ ವಾಸ್ತವವೆಂದು ನಿಷ್ಠೆಯಿಂದಿದ್ದನು."[೨೦]

ದುರಾದೃಷ್ಟವಶಾತ್ ಕುಬಿಯ ವೈದ್ಯಕೀಯ ವೃತ್ತಿಯ ನಿಷ್ಠೆಯಿಂದ ಅವನ ಕೀರ್ತಿ ಗೌರವಗಳು ಬೆಳೆದಂತೆ ರೋಗ ರುಜಿನಗಳು ಕಡಿಮೆಯಾಗುತ್ತವೆ. ಆದರೆ ಅವನ ವೈದ್ಯಕೀಯ ಚಿಕಿತ್ಸೆ ಬಗ್ಗೆ ಇದ್ದ ಮೂಢ ನಂಬಿಕೆಗಳು ಹೆಚ್ಚಾಗುತ್ತವೆ. ಇದು ಒಂದು ಘಟನೆಯಾದರೆ. ಕಥೆಯ ಶೀರ್ಷಿಕೆಯಲ್ಲಿ ಬರುವ ಇಯಾಲ ಕ್ರಿಸ್ತ ಜನಾಂಗದ ಹುಡುಗಿ. ಆ ಊರಿನ ಲೋರಿ ಎಂಬುವನು 'ಮೇಹ ರೋಗ'ಕ್ಕೆ ಮೈನೆರೆಯದ ಕನ್ಯೆಯನ್ನು ಸಂಭೋಗಿಸದರೆ ತನ್ನ ಕಾಯಿಲೆ ವಾಸಿಯಾಗುತ್ತದೆ ಎಂಬ ನಂಬಿಕೆಯಿಂದ ಇಯಾಲಳನ್ನು ಅತ್ಯಚಾರ ಮಾಡಿ ಕೊಲ್ಲುತ್ತಾನೆ. ಪೊಲೀಸ್ ಇಲಾಖೆಗೆ ಕಗ್ಗಂಟಾದ ಇಯಾಲಳ ಕೊಲೆಗೆ ಸಂಬಂಧಿಸಿದ ತನಿಖೆ, ಆಕಸ್ಮಾತ್ ಲೋರಿಗೆ ಆದ ತೊಂದರೆಯಿಂದ ಆಸ್ಪತ್ರೆಗೆ ದಾಖಲಾದಾಗ ಬಗೆಹರಿಯುತ್ತದೆ. ಇಯಾಲಳನ್ನು ಲೋರಿಯೆ ಕೊಂದಿದ್ದು ಎಂಬ ಸತ್ಯವನ್ನು ಅವನಿಂದ ತಿಳಿಯುತ್ತಾನೆ. ಇಂಥ ಘಟನೆಯಿಂದ "ಕುಬಿ ತಾನು ಯಾವುದನ್ನು ನಂಬದೆ ವಿರೋಧಿಸಿ ತಿರಸ್ಕರಿಸಿದ್ದನೋ ಅದನ್ನೇ ಗೂಢವಾಗಿ ಇನ್ನೊಂದು ಕಡೆಯಿಂದ ಪ್ರತಿಪಾದಿಸುತ್ತಲೂ ಬಂದುದು ಕಾಲಪುರುಷನ ಅಪಹಾಸ್ಯ. ಇತಿಹಾಸದ ವ್ಯಂಗ್ಯ."[೨೧]

ಕುಬಿಯ ವೈದ್ಯ ವೃತ್ತಿಯಲ್ಲಿನ ಕಾರ್ಯಗಳನ್ನು, ಮೂಢನಂಬಿಕೆಗೆ ಒಳಗಾದ ಅಲ್ಲಿನ ಗ್ರಾಮೀಣ ಜನರು ಅತಿಮಾನುಷದ ರೂಪದಲ್ಲಿ ನೋಡುವ ಮನಸ್ಥಿತಿಯನ್ನು

ಬೆಳೆಸಿಕೊಳ್ಳುತ್ತಾರೆ. ವೈಚಾರಿಕ ಹಿನ್ನೆಲೆಯಲ್ಲಿ ಜನರನ್ನು ಬೆಳೆಸಲು ಹೋಗಿ ಕುಬಿಯೇ ಅದರ ಒಂದು ಭಾಗವಾಗಿ ಹೋಗುವುದನ್ನು ಕಥೆಗಾರರು ಓದುಗನಿಗೆ ನೀಡುತ್ತಾರೆ.

'ಹುಲಿಯೂರಿನ ಸರಹದ್ದು' ಕಥೆಯಲ್ಲಿ, ಒಂದು ಜನಾಂಗವೂ ಸೃಷ್ಟಿಸುವ ನಂಬಿಕೆಗಳನ್ನು ಒರೆಹಚ್ಚಿ ನೋಡುವಾಗ ಸುಳ್ಳು ತೀರ್ಮಾನಿಸುವ ರೀತಿಯನ್ನು ಕಥೆಗಾರರು ತರುತ್ತಾರೆ. ಕಥೆಯಲ್ಲಿನ ಸೋಮುವಿಗೆ ಗರುಡನ ಕಾಲು ಚುಚ್ಚಿದಾಗ ಅದರಿಂದ ಬಿಡಿಸಿಕೊಳ್ಳಲು ಹೋಗುತ್ತಾನೆ. ಆ ಸಂದರ್ಭದಲ್ಲಿ ಮನೆಯ ಆಳು ಲಿಂಗನು ಅಮಾಯಕನಂತೆ 'ಗರುಡಕ್ಕೆ ಏನೂ ತೊಂದರೆ ಮಾಡಬಾರದೆಂದು' ಈ ಹಿಂದೆ ಸೋಮುವಿನ ಹೇಳಿದ್ದ ಮಾತನ್ನು ಪುನರುಚ್ಚರಿಸಿದಾಗ ಬ್ರಾಹ್ಮಣರ ಸ್ವರ್ಗ-ನರಕಗಳ ಪರಿಕಲ್ಪನೆಗಳು ಶುದ್ಧ ಮಾತುಗಳೆಂದು ಹೇಳುತ್ತಾನೆ. ಆತಂಕ ಮತ್ತು ಭಯವನ್ನು ಸೃಷ್ಟಿ ಮಾಡುವ ವ್ಯಕ್ತಿಗೆ ಆಗುವ ಅನುಭವಗಳಿಂದ ಮಾತ್ರದಿಂದ ಆತನು ವೈಚಾರಿಕತೆಯ ಕಡೆ ಇರುವ ವಿಚಾರಗಳನ್ನು ಹೊರತರುತ್ತಾನೆ. ಇಲ್ಲದೆ ಹೋದಲ್ಲಿ ತಾನು ಸೃಷ್ಟಿಸುವ, ಕೇಳುವ ಮೌಢ್ಯತೆಗಳನ್ನು ಜನಸಾಮಾನ್ಯನಲ್ಲಿ ಬಿತ್ತುತ್ತಾನೆ ಎಂಬ ಅಂಶವನ್ನು ಈ ಕಥೆಯಲ್ಲಿ ಕಾಣಬಹುದಾಗಿದೆ.

ಹಳ್ಳಿಗಳಲ್ಲಿ ತೋಟಕ್ಕೆ ಕಳ್ಳರ ಕಾಟವನ್ನು ತಪ್ಪಿಸಬೇಕೆಂದು ಸೃಷ್ಟಿಸುವ ಭೂತ-ಪ್ರೇತಗಳು, ಮುಂದೆ ಮನುಷ್ಯನ ಮೌಢ್ಯತೆಯನ್ನು, ಬಂಡವಾಳ ಮಾಡಿಕೊಳ್ಳುವ ಪೂಜಾರಿಗಳು ಮತ್ತು ಮಂತ್ರವಾದಿಗಳು ಹುಟ್ಟಿಕೊಳ್ಳಲು ಕಾರಣರಾಗುತ್ತಾರೆ. ಅವು ಮುಂದುವರೆದಂತೆ ತಮಗೆ ಬರುವ ಕಾಯಿಲೆಗಳಿಗೆ ಆಸ್ಪತ್ರೆಯಲ್ಲಿ ಲಸಿಕೆ ತೆಗೆದುಕೊಳ್ಳುವ ಬದಲು ದೇವರಿಗೆ ಹರಕೆಯನ್ನು ಹೊರುತ್ತಾರೆ. ಜನರಲ್ಲಿ ಆವರಿಸುವ ಮೂಢನಂಬಿಕೆಗಳನ್ನು ಹೋಗಲಾಡಿಸಲು ಸರ್ಕಾರಗಳು ಎಷ್ಟೇ ಕಾರ್ಯಕ್ರಮಗಳನ್ನು ಹಾಕಿಕೊಂಡರೂ ಕೆಲವೊಮ್ಮೆ ಸೋಲಾಗುತ್ತವೆ. ಜನರ ನಡುವಿನ ವಿಚಾರಗಳು ಹೊರಬರದ ಹೊರತು ಈ ಮೂಢನಂಬಿಕೆಗಳಿಂದ ಹೊರಬರಲಾರರು. ಮೂಢನಂಬಿಕೆಗಳ ಹರಡುವಿಕೆಗೆ ಸಂಬಂಧಿಸಿದಂತೆ ದೇ.ಜವರೇಗೌಡರು ಹೇಳುವಂತೆ "ಒಂದು ಕಡೆ ಮೂಢನಂಬಿಕೆ ಮೂಡಿತೆಂದರೆ ಅದು ಸಾಂಕ್ರಾಮಿಕ ರೋಗದಂತೆ ಕ್ಷಿಪ್ರವಾಗಿ ಊರಿಂದೂರಿಗೆ, ದೇಶದಿಂದ ದೇಶಕ್ಕೆ ಹರಡುತ್ತದೆ. ಅವು ಜಾತಿವರ್ಣಗಳನ್ನು, ಸಾಮಾಜಿಕ ವ್ಯವಸ್ಥೆಗಳನ್ನು, ಮತಭಾಷೆಗಳ ಕೋಟೆಗಳನ್ನು, ರಾಜಕೀಯ ಹಾಗೂ ಭೌಗೋಳಿಕ ಗಡಿಗಳನ್ನು, ವೈಜ್ಞಾನಿಕ ಪ್ರಯೋಗಶಾಲೆಗಳನ್ನು ಭೇದಿಸಿಕೊಂಡು ಮುನ್ನುಗ್ಗುತ್ತವೆ. ಅಂಟುಜಾಡ್ಯಗಳನ್ನು ತಡೆಯುವ ಹುನ್ನಾರಗಳು ಈಗ ಗೊತ್ತಿದೆ. ಹಿಂದೆ ಇವನ್ನು ತಡೆಗಟ್ಟುವ ಉಪಾಯ ಯಾರಿಗೂ ಗೊತ್ತಿರಲಿಲ್ಲ. ಬುದ್ಧಿಯನ್ನು ಮಾರಿಕೊಂಡ ಅಥವಾ ಅಲಸ್ಯ ಬುದ್ಧಿಯ ಜನರ ಸಮೂಹದಲ್ಲಂತು ಅವು ಬಹುಬೇಗನೆ ಹಬ್ಬುತ್ತವೆ."[೨೨] ಇಂಥ ವಿಚಾರವುಳ್ಳ ತೇಜಸ್ವಿಯವರ 'ಸ್ವರೂಪ' ಕಥೆಯಲ್ಲಿ "ಭೂತ ಪ್ರೇತಗಳನ್ನೆಲ್ಲಾ ಪೂಜೆ ಮಾಡಿದರೆ ಜನಕ್ಕೆ ಅದರ ಹೆದರಿಕೆ

ಉಳಿಯುತ್ತದೆಂದೂ, ತೋಟದ ಕಳ್ಳತನಕ್ಕೆ ಯಾರೂ ಬರುವುದಿಲ್ಲೆಂದು ಹಾಗೆ ಮಾಡುತ್ತಾರೆಂದೂ ತಿಳಿದೆ. ಜಿಪುಣರಿಗೆ ಶೋಷಕರಿಗೆ ಸಹಾಯ ಮಾಡುವುವು ಈ ಕೆಪಿಟಲಿಸ್ಟ್ ಭೂತಗಳೂ. ಈರಪ್ಪನವರು ಕುರಿ ಕೊಡುವುದು ಕೆಲಸಗಾರರನ್ನೂ ಊರವರನ್ನೂ ನಂಬಿಸಲು ಅವರು ನಡೆಸುವ ನಾಟಕದಂಥ ಆಟವಾಗಿ ಕಂಡಿತು. ಆದರೆ ಆ ನಂಬಿಕೆ ಬಹುಕಾಲ ಉಳಿಯಲಿಲ್ಲ.

ಒಂದು ಸಾರಿ ಬಯಲುಸೀಮೆಯ ಕಡೆ ಸಿಡುಬು ಕಾಣಿಸಿಕೊಂಡಾಗ ಸರಕಾರದವರು ಸಿಡುಬು ನಿರ್ಮೂಲನ ಸಪ್ತಾಹ ಮಾಡಿದರು ನೋಡು ಆಗ ಇಲ್ಲಿಗೂ ದಾಕು ಹಾಕುವವರು ಬಂದಿದ್ದರು. ಅವರಿಗೆ ಎಲ್ಲರಿಗೂ ದಾಕು ಹಾಕಬೇಕೆಂದು ಆಜ್ಞೆಯಾಗಿದ್ದರಿಂದ ಈರಪ್ಪನವರನ್ನೂ ಬಿಡಲಿಲ್ಲ. ಅವರು 'ಅಯ್ಯೋ ಅಮ್ಮನಿಗೊಂದು ಕುರಿ ಕೊಟ್ಟರೆ ಈ ಪಂಚಾಯ್ತಿಯೇ ಇರುತ್ತಿರಲಿಲ್ಲ' ಎಂದು ದಾಕು ಹಾಕಿಸಿಕೊಳ್ಳಲು ಬಹಳ ಹಿಂದು ಮುಂದು ನೋಡಿದರು. ಕೊನೆಗೆ ಬಲತ್ಕಾರಕ್ಕೆ ಮಣಿದು ಅಂಗಿಯ ತೋಳನ್ನು ಮಡಿಚಿದರು.. ಆಗ ನಾನು ಚಕಿತನಾದೆ! ಅವರು ತೋಳಿಗೆ ನಾನಾ ತರದ ಇಪ್ಪತ್ತು ತಾಯಿತಗಳನ್ನು ಕಟ್ಟಿಕೊಂಡಿದ್ದರು ಆ ದಾರಗಳು ಎಷ್ಟೊಂದು ಹಿಂದೆ ಕಟ್ಟಿದ್ದವೋ ಏನೋ! ಚರ್ಮ ಹರಿದು ಮಾಂಸ ಗೋಚರವಾಗುತ್ತಿತ್ತು. ಅನೇಕ ಕಡೆ. ನಾನು ಅದನ್ನು ನೋಡಿದ್ದನ್ನು ಈರಪ್ಪನವರು ನೋಡಲಿಲ್ಲ. ಕ್ರಮೇಣ ಕ್ರಮೇಣ ಆ ಬಗ್ಗೆ ಆಲೋಚಿಸಿದಂತೆ ಅವರ ಚಿತ್ರಸ್ಥಿತಿ ನಿಧಾನಕ್ಕೆ ಅರ್ಥವಾಗುತ್ತಾ ಬಂದಿತು. ಅವರ ನಂಬಿಕೆ ಬಟ್ಟೆಯ ಒಳಗೆ ಅಂತರಾಳದಲ್ಲಿ, ಕುಳಿತಾಗ ಎದ್ದಾಗ ಕೊರೆಯುವ ದಾರದ ನೋವನ್ನು ಸಹಿಸುವ ನಿಷ್ಠೆಯಾದಾಗ ಅದನ್ನು ಹೇಗೆ ಲೇವಡಿ ಮಾಡಲಿ? ಹಾಗೆಂದು ದೆವ್ವದ ಬಗ್ಗೆ ನಂಬಿಕೆ ಬಂದಿತೆಂದಲ್ಲ. ನಂಬಿಕೆ ತರ್ಕಾತೀತವಾದದ್ದು. ಆದರೆ ಹೇಗೆ ನಿಧಾನವಾಗಿ ಲೌಕಿಕದ ಧನದ ಬಗ್ಗೆಯ ನಂಬಿಕೆ ದೆವ್ವದ ಬಗ್ಗೆಯ ಶ್ರದ್ದೆಯಾಗಿ ಪರಿಣಮಿಸುತ್ತದೆ ಎಂಬುದು ಗೋಚರಿಸಿತು. ನಿಧಾನವಾಗಿ ನಿಧಾನವಾಗಿ ದುಡ್ಡು ಸೇರಿದಂತೆ ಹಿಗ್ಗುತ್ತಾ ಅದಕ್ಕೊಂದು ಅರ್ಥವನ್ನು ಆರೋಪಿಸಲು ಲಕ್ಷ್ಮಿ ಇತ್ಯಾದಿಗಳ ಪೋಟೋವನ್ನು ನೇತು ಹಾಕಿ ಪೂಜಿಸುತ್ತಾ, ಕೊನೆಗೆ ಸತ್ಯ ಯಾವ ನಂಬಿಗೆ ಸಮರ್ಥ ಲಾಭಕರ ಅನ್ನುವುದನ್ನೇ ಅವಲಂಬಿಸಿ ಭೂತ ಪ್ರೇತ ಪಿಶಾಚಿಗಳು ದೇವರಷ್ಟೇ ಗಾಢವಾದ ನಂಬಿಕೆಗೆ ಪಾತ್ರವಾಗುತ್ತವೆ."[೨೨] ಕಥೆಯಲ್ಲಿನ ಈ ಘಟನೆ ವ್ಯಕ್ತಿಯೊಬ್ಬನು ತಾನು ನಂಬಿರುವ ದೈವದ-ಭೂತದ ಪರಿಕಲ್ಪನೆಯನ್ನು ಸುಲಭವಾಗಿ ಬಿಟ್ಟಿಕೊಡಲು ಸಿದ್ಧನಾಗುವುದಿಲ್ಲ. ಸರ್ಕಾರ ಮತ್ತು ಲೌಕಿಕ ಜ್ಞಾನವಿರುವ ವ್ಯಕ್ತಿಗಳ ಮಾತುಗಳು ಅನಿವಾರ್ಯವಾಗುವ ರೀತಿಯಲ್ಲಿ ತಿಳಿಯ ಪಡಿಸಿದಾಗ ಮಾತ್ರ ಅದನ್ನು ಒಪ್ಪಿಕೊಳ್ಳಲು ಮುಂದಾಗುವುದನ್ನು ನೋಡಬಹುದಾಗಿದೆ. ಗ್ರಾಮೀಣರ ಸಹಜವಾದ ನಂಬಿಕೆಗಳಿಗೆ ವೈಚಾರಿಕ ವಿಚಾರಗಳು ಆಶ್ಚರ್ಯ ಮತ್ತು ಒಪ್ಪಿಕೊಳ್ಳುವ ಅನಿವಾರ್ಯತೆ ಸೃಷ್ಟಿಸುವುದನ್ನು ಕಾಣಬಹುದಾಗಿದೆ.

ಕಥೆಯಲ್ಲಿ ಮುಂದುವರೆದಂತೆ ಗೋಪಾಲ ಭಟ್ಟನ ಹೆಂಡತಿ "ಈಗ ಮದ್ದಿಟ್ಟು ಕೊಂದರೆ ಮುಂದಿನ ಜನ್ಮದಲ್ಲಿ ಒಳ್ಳೆಯ ಮಗ ಹುಟ್ಟುತ್ತಾನೆಂದು" ನಂಬಿರುತ್ತಾಳೆ. "ಒಂದು ದಿನ ನಾನು ಶಿಕಾರಿಗೆ ಬರುತ್ತಾ ದಾರಿಯಲ್ಲಿ ಯಾರೋ ನಿಂತಂತೆ ಕಂಡಿತು. ಹಾಗೆ ಹಣಿಕಿ ನೋಡಿದೆ. ನೋಡಿದರೆ ಭಟ್ಟರ ಹೆಂಡತಿ ನಿಂತಿದ್ದಾಳೆ. ನಾನು ಕಾಣುತ್ತಲೂ ಸೌದೆ ಹುಡುಕುವವರಂತೆ ನಟಿಸುತ್ತಾ ಅಲ್ಲಿಂದ ಸಾಗಿಹೋದರು. ಆದರೆ ನನಗೆ ಅನುಮಾನ. ಹಾಗೇ ಅವರು ಬುಡದಲ್ಲಿ ನಿಂತಿದ್ದ ಗಿಡವನ್ನು ಪರೀಕ್ಷಿಸಿದೆ. ನೋಡುತ್ತೇನೆ ತುದಿಯ ಕೊಂಬೆಯೊಂದರಲ್ಲಿ ಒಂದು ಅಸಹ್ಯವಾದ ಗೋಸುಂಬೆ. ಅದನ್ನು ಹೊಡೆದು ತಲೆ ಕೆಳಗುಮಾಡಿ ನೇತು ಹಾಕುತ್ತಾರಂತೆ. ಮೂರುದಿನದ ತರುವಾಯದರ ಬಾಯಿಂದ ರಕ್ತ ಬೀಳುತ್ತದಂತೆ. ಅದರಲ್ಲಿ ಅಕ್ಕಿ ಕಾಳನ್ನು ನೆನೆಸಿ ಬಂದವರಿಗೆ ಪಾಯಸದಲ್ಲೋ ಅನ್ನದಲ್ಲೊ ಹಾಕಿ ಕೊಡುತ್ತಾರಂತೆ. ಹೆದರಬೇಡ. ನೀನು ಕೊಂಚ ಎಚ್ಚರಿಕೆಯಿಂದ ಇರು. ಅಷ್ಟಕ್ಕೂ ನೀನು ಈವತ್ತೇ ಹೊರಟು ಹೋಗುತ್ತೇನೆಂದಿದ್ದಿಯಲ್ಲ. ಮುಖ್ಯವಾಗಿ ನನಗೆ ಆ ಮದ್ದು ಹೊಟ್ಟೆಯಲ್ಲೇ ಬೆಳೆದು ಕೊಲ್ಲುತ್ತದೆ ಎನ್ನುವುದರಲ್ಲಿಯೇ ನಂಬಿಕೆ ಇಲ್ಲ. ಅಂತೂ ಭಟ್ಟರ ಹೆಂಡತಿಗೆ ಜನ್ಮಾಂತರದಲ್ಲಿ ಅಚಲಶ್ರದ್ಧೆ ಇದೆ ಎಂದು ಗೊತ್ತಾಗುತ್ತದೆ. ಆದರೆ ಅದರ ಅಂತಿಮ ಪರೀಕ್ಷೆ ತಮ್ಮ ಸಾವಿಗೇ ಬಂದಾಗ ಎಂದಿಟ್ಟುಕೋ! ಮಕ್ಕಳಾಗದಿದ್ದರೆ ಬೇರೊಬ್ಬನಿಂದ ಮಕ್ಕಳನ್ನು ಪಡೆಯಬಹುದೆಂದು ಶಾಸ್ತ್ರದಲ್ಲೇ ಹೇಳಿದೆಯಪ್ಪಾ. ಏಕೆ ಅವಳು ಈ ಜನ್ಮದಲ್ಲೇ ಮುಂದಿನ ಜನ್ಮದ ಫಲ ಅನುಭವಿಸಬಾರದೋ? ಶ್ರದ್ಧೆ ಫಲಕ್ಕಿಂತ ಮುಖ್ಯ ಎಂದು ಕಾಣುತ್ತದೆ ಅವರಿಗೆ."[೨೪] ಅವರಿಗೆ ಕಾರಣಗಳಿಗೆ ಪರಿಹಾರಗಳು ಇದ್ದರೂ ಅದನ್ನು ಯೋಚಿಸದೆ ಕಾಡಿನಲ್ಲಿ ಗೋಸುಂಬೆಯನ್ನು ಹೊಡೆದು ಅದರ ರಕ್ತಕ್ಕೆ ಅಕ್ಕಿ ಕಾಳನ್ನು ನೆನೆಸಿ ಬಂದವರಿಗೆ ಪಾಯಸದಲ್ಲೋ, ಅನ್ನದಲ್ಲೊ ಹಾಕಿ ಕೊಡುವ ಕೆಲಸಕ್ಕೆ ಮುಂದಾಗುತ್ತಾರೆ. ಈಕೆಯ ಮನಸ್ಥಿತಿ ಗ್ರಾಮೀಣ ಭಾಗದ ಮಹಿಳೆಯೊಬ್ಬಳ ಮನಸ್ಥಿತಿ ಉಲ್ಲೇಖವಾಗಿದೆ.

ಹುಟ್ಟು-ಸಾವು, ಜನ್ಮಾಂತರಗಳ ಮೇಲಿನ ಜನರ ಮೂಢನಂಬಿಕೆಗಳಿಗೆ ವೈಚಾರಿಕತೆಯೇ ಮದ್ದು. ಆದರೆ ಅದು ಸವಾಲಿನ ಪ್ರಶ್ನೆಯಂತೆ ಕಾಣಿಸುತ್ತದೆ. ಗೋಪಾಲ ಭಟ್ಟನ ಹೆಂಡತಿ ಗೋಸುಂಬೆಯನ್ನು ಹೊಡೆದು ಅದರ ರಕ್ತದಿಂದ ಮತ್ತೊಬ್ಬ ವ್ಯಕ್ತಿಯ ದುರಂತವನ್ನು ನೋಡುವ ವಿಕೃತ ಮನಸ್ಸಿನ ಸ್ಥಿತಿಗಳ ಬಗ್ಗೆ ತೇಜಸ್ವಿಯವರು ಸ್ಪಷ್ಟಪಡಿಸುತ್ತಾರೆ.

ವ್ಯಕ್ತಿಯ ಮೈಮೇಲೆ ದೇವರು ಬಂದರೆ ಭೂತ-ಭವಿಷ್ಯ-ವರ್ತಮಾನವನ್ನು ಹೇಳುತ್ತಾನೆಂಬುದು ಜನರ ನಂಬಿಕೆ. ಆ ನಂಬಿಕೆಗಳಿಂದ ಜನರ ಬದುಕು ಬಹುಪಾಲು ಸಾಗುತ್ತದೆ. ಇಂಥ ಒಂದು ಸನ್ನಿವೇಶವನ್ನು ಲಂಕೇಶರವರ 'ಮಾರಲಾಗದ ನೆಲ' ಕಥೆಯಲ್ಲಿ ಕಾಣಬಹುದಾಗಿದೆ. ಪಿತ್ರಾರ್ಜಿತವಾಗಿ ಬಂದ ಗದ್ದೆಯನ್ನು ವಿಶ್ವನಾಥನು ಮಾರಲು

ನಗರದಿಂದ ಹಳ್ಳಿಗೆ ಬರುತ್ತಾನೆ. ಆ ವೇಳೆಗಾಗಲೆ ಆತನ ಗದ್ದೆಯಲ್ಲಿ ದೆವ್ವ-ಭೂತ ಇವೆ ಎಂದು ಆ ಊರಿನ ಜನರು ಮಾತನಾಡಿಕೊಳ್ಳುತ್ತಾರೆ. ಇದು ಸುಳ್ಳು ಎಂದು ಹೇಳಿಸಲು ದೇವರ ಮೊರೆ ಹೋಗುತ್ತಾನೆ. ಜನರು ನಿಜ ಸಂಗತಿಗಳನ್ನು ಒಪ್ಪಿಕೊಳ್ಳುವುದಕ್ಕಿಂತ ಹೆಚ್ಚಾಗಿ ದೇವರ ಮೊರೆ ಹೋಗುತ್ತಾರೆ. ಪೂಜಾರಿಯ ಮೈ ಮೇಲೆ ಬಂದ ದೇವರಿಂದ ವಿಶ್ವನ ಗದ್ದೆಯಲ್ಲಿ ದೆವ್ವ ಇದೆಯ? ಇಲ್ಲವೇ? ಎಂಬ ಪ್ರಶ್ನೆಯನ್ನು ಊರಿನ ಮಹಾದೇವಪ್ಪನು ವಿಶ್ವನ ಪರವಾಗಿ ಕೇಳುತ್ತಾನೆ. ಆಗ ಪ್ರತ್ಯುತ್ತರವಾಗಿ 'ಹೌದು' ಎಂದು ಹೇಳುತ್ತದೆ. ಜನರಲ್ಲಿ ಗೊಂದಲ ಉಂಟಾಗುತ್ತದೆ. ಆದರೆ ಮಹಾದೇವಪ್ಪನು 'ದೆವ್ವ ಗದ್ದೆಯಲ್ಲಿ ಇಲ್ವಂತೆ' ಎಂದು ಜೋರಾಗಿ ಹೇಳುತ್ತಾನೆ. ವ್ಯಕ್ತಿ ತನ್ನ ಹಿತಾಸಕ್ತಿಯ ಈಡೇರಿಕೆಗಾಗಿ ದೆವ್ವವನ್ನು ಸೃಷ್ಟಿಸುತ್ತಾನೆ. ದೇವರನ್ನು ಸೃಷ್ಟಿಸುತ್ತಾನೆ. ಅಂತಿಮವಾಗಿ ದೇವರ ರೂಪದಲ್ಲಿಯೇ ಪರಿಹಾರವನ್ನು ಸೂಚಿಸುವ ಜಾಣ್ಮೆಯ ವ್ಯಕ್ತಿಯಾಗುತ್ತಾನೆ.

ಮೂಢನಂಬಿಕೆಗಳು, ಮೌಢ್ಯತೆಗಳು ಸದಾ ಜಾಗೃತವಾಗುವ ಮನುಷ್ಯರಲ್ಲಿ ಸುಲಭವಾಗಿ ವೈಚಾರಿಕತೆಯ ಯೋಚನೆಗಳು ಹುಟ್ಟಿಕೊಳ್ಳಲು ಸಾಧ್ಯವಾಗದು ಎಂಬ ವಿಚಾರವನ್ನು ಕಥೆಗಾರರು ತಮ್ಮ ಕಥೆಗಳಲ್ಲಿ ಚಿತ್ರಿಸಿದ್ದಾರೆ.

**ಕೊನೆ ಟಿಪ್ಪಣಿ:**


೧. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೬೮, ೨೦೧೫.

೨. ಲಂಕೇಶ್ ಪಿ. ಕೆರೆಯ ನೀರನು ಕೆರೆಗೆ ಚೆಲ್ಲಿ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೪೦, ೨೦೧೧.

೩. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೨೪೭, ೨೦೦೧.

೪. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೪೨೨, ೨೦೦೧.

೫. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೯೯, ೨೦೦೧.

೬. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೩೪೧, ೨೦೦೧.

೭. ಜವರೇಗೌಡ. ದೇ., ಜಾನಪದ ಅಧ್ಯಯನ,(ಮಹಾ ಸಂಪುಟದ ಒಂದು ಭಾಗ), ಡಿ.ವಿ.ಕೆ. ಮೂರ್ತಿ ಪ್ರಕಾಶನ, ಪುಟ- ೩೨೯, ೨೦೧೫.

೮. ಪೂರ್ಣಚಂದ್ರ ತೇಜಸ್ವಿ, ಕಿರಗೂರಿನ ಗಯ್ಯಾಳಿಗಳು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೧೩,೧೪, ೨೦೦೫.

೯. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೩೫, ೨೦೧೬.

೧೦. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೩೬, ೨೦೧೬.

೧೧. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೪೦, ೨೦೧೬.

೧೨. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೪೪, ೨೦೧೬.

೧೩. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೪೪, ೨೦೧೬.

೧೪. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೧೦೮, ೨೦೧೬.

೧೫. ಪೂರ್ಣಚಂದ್ರ ತೇಜಸ್ವಿ, ಪಾಕ ಕ್ರಾಂತಿ, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೧೦೦, ೨೦೧೬.

೧೬. ಪೂರ್ಣಚಂದ್ರ ತೇಜಸ್ವಿ, ಪಾಕ ಕ್ರಾಂತಿ, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೧೦೭, ೨೦೧೬.

೧೭. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೪೨೬,೨೦೦೧.

೧೮. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೭೭, ೨೦೦೧.

೧೯. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೩೭, ೧೯೭೩.

೨೦. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೪೭, ೨೦೧೫.

೨೧. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೬೬, ೨೦೧೫.

೨೨. ಜವರೇಗೌಡ. ದೇ., ಜಾನಪದ ಅಧ್ಯಯನ,(ಮಹಾ ಸಂಪುಟದ ಒಂದು ಭಾಗ), ಡಿ.ವಿ.ಕೆ. ಮೂರ್ತಿ ಪ್ರಕಾಶನ, ಪುಟ-೩೩೧, ೨೦೧೫.

೨೩. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೫೯,೬೦, ೨೦೧೬.

೨೪. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೭೪, ೨೦೧೬.

******

## ಅಧ್ಯಾಯ- ೪

# ವಿಭಿನ್ನ ನೆಲೆಗಟ್ಟುಗಳ ಜೀವನ ಸ್ವರೂಪ

---

೪.೧. ಗ್ರಾಮೀಣ-ನಗರ ಪ್ರದೇಶದ ಜನ ಜೀವನದ ಮುಖಾಮುಖಿ

೪.೨. ಭಾರತೀಯ - ಪಾಶ್ಚಿಮಾತ್ಯ ಜನ ಜೀವನದ ಮುಖಾಮುಖಿ

## ಅಧ್ಯಾಯ - ೪

# ವಿಭಿನ್ನ ನೆಲೆಗಟ್ಟುಗಳ ಜೀವನ ಸ್ವರೂಪ

ಗ್ರಾಮೀಣ ಮತ್ತು ನಗರ ಪ್ರದೇಶದ ಜನ ಜೀವನ ಕ್ರಮ ಭಾರತೀಯ ಸಮಾಜದ ಜೀವಾಳವಾಗಿದೆ. ಅವರ ಬದುಕಿನ ರೀತಿನೀತಿಗಳು, ಅವರ ಜೀವನ ಕ್ರಮಗಳು ಕೆಲವೊಂದು ಸಾಮ್ಯತೆಯನ್ನು ಹೊಂದಿದ್ದರೂ ಬಹು ಪಾಲು ಭಿನ್ನತೆಯಿಂದ ಕೂಡಿರುತ್ತವೆ. ಹಾಗೆಯೇ ಭಾರತೀಯ ಮತ್ತು ಪಾಶ್ಚಿಮಾತ್ಯ ಜನ ಜೀವನವು ಸಾಂಸ್ಕೃತಿಕವಾಗಿ ಭಿನ್ನವಾಗಿರುತ್ತದೆ.

ನಗರ ಪ್ರದೇಶದ ಆರ್ಥಿಕ ಬೆಳವಣಿಗೆಗಳು ಗ್ರಾಮೀಣ ಭಾಗದ ಭೌಗೋಳಿಕ ಪರಿಸರದ ಮೇಲೆ ವ್ಯತಿರಿಕ್ತ ಪರಿಣಾಮಗಳನ್ನು ಬೀರುತ್ತವೆ. ಗ್ರಾಮೀಣ ಭಾಗದ ಜನತೆಯು ಮೂಲಭೂತ ಸೌಕರ್ಯಗಳ ವಿಷಯಗಳಿಗೆ ಸಂಬಂಧಿಸಿದಂತೆ ಇನ್ನೂ ವಂಚಿತವಾಗಿರುವುದು ಕಂಡುಬರುತ್ತದೆ. ರಸ್ತೆ, ನೀರು, ವಿದ್ಯುತ್‌ಗಳಂಥ ವಿಚಾರಗಳು ಗ್ರಾಮೀಣ ಭಾಗದ ಜನತೆಗೆ ಪ್ರಮುಖ ವಿಚಾರಗಳಾಗಿ ಕಾಣುತ್ತವೆ. ನಗರ ಪ್ರದೇಶಗಳಲ್ಲಿ ಆರ್ಥಿಕ ಬೆಳವಣಿಗೆಯೇ ಪ್ರಮುಖ ವಿಚಾರಗಳಾಗಿರುತ್ತದೆ. ಆದರೂ ನಗರದ ಕೃತಕ ಬದುಕಿನಿಂದ ವಿಮುಖರಾಗಿ ಗ್ರಾಮೀಣ ಭಾಗದಲ್ಲಿ ನೆಲೆಯನ್ನು ಕಂಡುಕೊಳ್ಳುವ ತವಕಗಳನ್ನು ಹೊಂದಿರುತ್ತಾರೆ.

ವಿದೇಶಕ್ಕೆ ಹೋಗಬೇಕೆನ್ನುವ ಭಾರತೀಯ ಮನಸ್ಸುಗಳು ಪಾಶ್ಚಿಮಾತ್ಯ ನೆಲೆಯಲ್ಲಿ ಬದುಕನ್ನು ಕಟ್ಟಿಕೊಳ್ಳಲು ಯತ್ನಿಸುತ್ತವೆ. ಸಾಂಸ್ಕೃತಿಕವಾಗಿ ಪಾಶ್ಚಿಮಾತ್ಯ ರಾಷ್ಟ್ರಗಳು ಭಾರತಕ್ಕಿಂತ ಭಿನ್ನವಾಗಿ ಯೋಚಿಸುತ್ತಿರುತ್ತವೆ. ಭಾರತದಂತಹ ದೇಶದಲ್ಲಿ ಆರ್ಥಿಕ ಮತ್ತು ಸಾಮಾಜಿಕವಾಗಿ ಜಾತಿ ಮತ್ತು ಲಿಂಗಧಾರಿತ ವಿಚಾರಗಳು ಪ್ರಧಾನವಾಗಿ ಕಾಣುತ್ತವೆ. ಪಾಶ್ಚಾತ್ಯ ರಾಷ್ಟ್ರಗಳು ಸೃಷ್ಟಿಸುವ ಬಂಡವಾಳ ಜಗತ್ತಿನಲ್ಲಿ ವ್ಯಕ್ತಿಯ ಅಸ್ತಿತ್ವ, ಪ್ರತಿಷ್ಠೆಗಳು ಪ್ರಧಾನವಾಗಿರುತ್ತದೆ. ಅಂತಹ ವಿಚಾರಗಳ ಕುರಿತು ಕಥೆಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಲಾಗಿದೆ.

### ೪.೧. ಗ್ರಾಮೀಣ-ನಗರ ಪ್ರದೇಶದವ ಜನ ಜೀವನದ ಮುಖಾಮುಖಿ

ಭಾರತದ ಭೌಗೋಳಿಕ ವಾತಾವರಣದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಗಳ ಜೀವನ ಅತಿ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿವೆ. ಆರ್ಥಿಕ ಮತ್ತು ಸಾಮಾಜಿಕ ಕಂದಕಗಳನ್ನು ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಜನರ ಜೀವನವನ್ನು ಕಥೆಯ ಮೂಲಕ ಅಧ್ಯಯನ ಮಾಡಿದಾಗ ಸಾಕಷ್ಟು ವ್ಯತ್ಯಾಸಗಳನ್ನು ನೋಡಬಹುದಾಗಿದೆ.

ಗೋಪಾಲಕೃಷ್ಣ ಅಡಿಗರು 'ಎಂದೆಂದೂ ಮುಗಿಯದ ಕಥೆಯ' ಕಥಾ ಸಂಕಲನದಲ್ಲಿ "ಮಾನವ ಸಮಸ್ಯೆಗಳು ಎಲ್ಲ ಕಾಲದಲ್ಲೂ ತಾತ್ವಿಕವಾಗಿ ಒಂದೇ ಆಗಿರುತ್ತವೆ ನಿಜ.

ಆದರೆ ಅಕ್ಷರಶಃ ಅಲ್ಲ. ಯಾವ ರೀತಿ ಒಂದು ಸಲ ಹುಟ್ಟಿ ಬಂದ ಜೀವಿ ಅದೇ ರೂಪದಲ್ಲಿ ಮತ್ತೆ ಹುಟ್ಟಿ ಬರುವುದಿಲ್ಲವೋ, ಒಂದು ಸಲ ಅಭಿವ್ಯಕ್ತಿಗೊಂಡ ವ್ಯಕ್ತಿತ್ವ ಮತ್ತೆ ಯಥಾವತ್ತಾಗಿ ಪುನರ್ಜನ್ಮ ಪಡೆಯುವುದಿಲ್ಲವೋ ಅದೇ ರೀತಿ ಒಂದು ಸಮಸ್ಯೆಯೂ ಕೂಡಾ ಕಾಲಕಾಲಕ್ಕೆ ಭಿನ್ನ ಭಿನ್ನವಾದ ರೀತಿಯಲ್ಲೇ ನಮ್ಮನ್ನು ಎದುರಿಸುವುದಲ್ಲದೆ ಯಥಾಪ್ರತಿ ಅಲ್ಲ. ಆದಕಾರಣವೇ ಭೂತಕಾಲದ ಯಾವ ವ್ಯವಸ್ಥೆಯೂ ಈಗ ಇಂದು ಯಥಾವತ್ತಾಗಿ ಮತ್ತೆ ಮರುಕಳಿಸಲು ಸಾಧ್ಯವಿಲ್ಲ."[೧]

"ಶತ ಶತಮಾನಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಚದುರಿ ಬಿದ್ದಿದ್ದ ಈ ಮಾನವ ಜನಾಂಗಗಳು ಈಗ ಇಪ್ಪತ್ತನೆಯ ಶತಮಾನದಲ್ಲಿ ಹತ್ತಿರ ಹತ್ತಿರ ಬಂದು ಪ್ರಪಂಚ ಸಂಸ್ಥೆಯೊಂದನ್ನು ಎಲ್ಲರ ಹಿತಕ್ಕಾಗಿ ಕಟ್ಟಿಕೊಳ್ಳುವಷ್ಟರ ಮಟ್ಟಿಗಾದರೂ ಲೋಕಹಿತ ಮತ್ತು ಜನಾಂಗಹಿತ ಒಂದೇ ಎಂದು ತಿಳಿದದ್ದು ಒಂದು ಪವಾಡವೇ ಸರಿ. ಒಂದು ಕಾಲದಲ್ಲಿ ಋಷಿಮುನಿಗಳು ಸಾಧುಸಂತರು ಕವಿ ಕಲೆಗಾರರು ಕಂಡ ಈ 'ಮಾನವ ಕುಲ ಒಂದೇ' ಎಂಬ ಕನಸು ಈಗ ಆಕಾರ ತಳೆಯುತ್ತಿದೆ. ವಿವಿಧ ಜನಾಂಗಗಳ ಈ ಸಂಪರ್ಕ ವಿಭಿನ್ನವಾಗಿ ನಿಲ್ಲುತ್ತದೆ."[೨] ಎಂದು ಅಭಿಪ್ರಾಯ ಪಡುತ್ತಾರೆ.

ನಗರ ಪ್ರದೇಶಗಳಲ್ಲಿ ಸಿಗುವ ಸವಲತ್ತುಗಳನ್ನು ಬಳಸಿಕೊಂಡ ಜನರ ಬದುಕಿನ ರೀತಿ ಮತ್ತು ಆರ್ಥಿಕ ಸ್ಥಿತಿಗತಿಗಳು ಗ್ರಾಮೀಣ ಭಾಗದಲ್ಲಿನ ಜನ ಜೀವನದ ಶೈಲಿಗೆ ಸಾಕಷ್ಟು ವ್ಯತ್ಯಾಸಗಳನ್ನು ಕಾಣಬಹುದಾಗಿದೆ.

ಗ್ರಾಮೀಣ ಭಾಗದಲ್ಲಿರುವ ಆಚರಣೆಗಳು ಮತ್ತು ಸಂಪ್ರದಾಯಗಳು ಅವರ ಬದುಕಿನ ಜೀವಾಳವಾಗಿರುತ್ತವೆ. ಇವುಗಳನ್ನು ಸುಲಭವಾಗಿ ಬದಲಾವಣೆ ಮಾಡಲು ಸಾಧ್ಯವಾಗದಿದ್ದರೂ ನಗರ ಪ್ರದೇಶದ ಜನಜೀವನದ ಕ್ರಮ ಪ್ರಭಾವವನ್ನು ಬೀರುತ್ತದೆ. ಆದರೆ ಈ ನಗರ ಪ್ರದೇಶದ ಜನಜೀವನಕ್ಕೆ ಪ್ರೇರಣೆಯಾದ ಆಧುನಿಕತೆಯು ನೇರವಾಗಿ ಅಥವಾ ಪರೋಕ್ಷವಾಗಿ ಪಾಶ್ಚಾತ್ಯ ಸಂಸ್ಕೃತಿಯನ್ನು ಅನುಸರಿಸುವ ಕೆಲಸ ಮಾಡುತ್ತಿರುತ್ತದೆ.

ವ್ಯವಸಾಯ ತಿಳಿಯುವ ಮುನ್ನ ಆದಿ ಮಾನವ ತನ್ನ ಪರಿವಾರದೊಂದಿಗೆ ಅಲೆದಾಟ ಮಾಡುತ್ತಾ ಗೆಡ್ಡೆಗೆಣಸುಗಳನ್ನು ತಿನ್ನುತ್ತಾ ಜೀವನ ನಡೆಸುತ್ತಿದ್ದನು. ಕಾಲಕ್ರಮೇಣ ಒಂದೆಡೆ ನಿಂತು ವ್ಯವಸಾಯವನ್ನು ತನ್ನ ಆಹಾರ ಉತ್ಪಾದನೆಯ ಕಸುಬನ್ನಾಗಿ ಮಾಡಿಕೊಂಡು ಜೀವನ ನಡೆಸುತ್ತಿದ್ದಾನೆ. ಭಾರತದಂತಹ ದೇಶದಲ್ಲಿ ರೈತನನ್ನು ದೇಶದ ಬೆನ್ನೆಲುಬು ಎಂದು ಹೇಳಿ, ಗ್ರಾಮೀಣ ಭಾಗದ ಹಳ್ಳಿಗಳನ್ನು ಭಾರತದ ಜೀವನಾಡಿಗಳೆಂದು ಕರೆಯಲಾಗಿದೆ. ಆದರೆ ಇಲ್ಲಿನ ಜನರು ಸಮಸ್ಯೆಗಳಿಂದ ಹೊರಬರಲು ಸಾಧ್ಯವಾಗಲಿಲ್ಲ. ಜೀವನದ ನಿರ್ವಹಣೆಗಾಗಿ ಅವರುಗಳು ತಮ್ಮದೆ ಆದ ಶೈಲಿಯನ್ನು ರೂಢಿಸಿಕೊಂಡಿದ್ದಾರೆ. ಅದು ದುಡಿಮೆಯಾಗಿರಬಹುದು, ಅವರ ಸಾಂಸ್ಕೃತಿಕ ಬದುಕು ಆಗಿರಬಹುದು. ಒಟ್ಟಾರೆ

ಅವರ ಬದುಕಿನಲ್ಲಿರುವ ಧೋರಣೆಗಳನ್ನ ಕಥೆಗಾರರು ತಮ್ಮದೆ ಆದ ರೀತಿಯಲ್ಲಿ ಅರ್ಥೈಸುವ ಪ್ರಯತ್ನ ಮಾಡಿರುವುದನ್ನು ಅವರ ಕಥೆಗಳಿಂದ ತಿಳಿಯಬಹುದು.

ನಗರಗಳ ಆರ್ಥಿಕ ಚಟುವಟಿಕೆಗಳು, ಸಾಮಾಜಿಕ ಅಂತಸ್ತುಗಳು, ಭೌಗೋಳಿಕ ನೆಲೆಗಟ್ಟುಗಳು ಹೆಚ್ಚಿನ ಪ್ರಭಾವವನ್ನು ಗ್ರಾಮೀಣ ಭಾಗದಲ್ಲಿ ಬೀರುತ್ತಿರುವುದನ್ನು ನೋಡಬಹುದಾಗಿದೆ. ಒಂದೊಂದು ಅಂಶಗಳ ಹಿನ್ನೆಲೆಯಲ್ಲಿ ಗ್ರಾಮೀಣ ಬದುಕಿನಲ್ಲಿ ಹಾಸು ಹೊಕ್ಕಾಗಿರುವ ಯಜಮಾನ್ಯ ಸಂಸ್ಕೃತಿಯನ್ನು ಒಳಗೊಂಡಂತೆ ಇರುವ ಕಥೆಗಳನ್ನು ಕಥೆಗಾರರು ರಚಿಸಿದ್ದಾರೆ.

ತೇಜಸ್ವಿಯವರ 'ಲಿಂಗ ಬಂದ,' 'ಗುಡುಗು ಹೇಳಿದ್ದೇನು?' 'ಹುಲಿಯೂರಿನ ಸರಹದ್ದು,' 'ನಿಗೂಢ ಮನುಷ್ಯರು' 'ಅಬಚೂರಿನ ಪೋಸ್ಟಾಫೀಸು' 'ಕುಬಿ ಮತ್ತು ಇಯಾಲ' 'ಕಿರಗೂರಿನ ಗಯ್ಯಾಳಿಗಳು' ಕಥೆಗಳು ಯಜಮಾನಿಕೆಯ ಸಂಸ್ಕೃತಿಯ ಅಂಶಗಳನ್ನು ಗ್ರಾಮೀಣ ನೆಲೆಗಟ್ಟಿನಲ್ಲಿ ಕಾಣಿಸುತ್ತದೆ. ಇಲ್ಲಿ ಆರ್ಥಿಕ ಸ್ಥಿತಿಗತಿಗಳು, ಬದುಕಿನ ಏರಿಳಿತಗಳನ್ನು ಓದುಗನಿಗೆ ನೀಡುತ್ತಾರೆ. ಮನುಷ್ಯನು ಇಂತಹ ಎಲ್ಲಾ ಹಿಡಿತಗಳಿಂದ ಹೊರಬರಬೇಕೆಂದು ಬಯಸಿದರೂ ಅದು ಸಾಧ್ಯವಾಗುವುದಿಲ್ಲ ಎಂಬುದನ್ನು ಸ್ವತಃ ತೇಜಸ್ವಿಯವರೆ ತಿಳಿದುಕೊಳ್ಳುವ ಅಂಶವನ್ನು ಕಾಣಬಹುದು. ಭೂಮಿಯ ಮೂಲಕ ದುಡಿದು ಬದುಕನ್ನು ಕಟ್ಟಿಕೊಳ್ಳಬೇಕೆಂದು ನಿರ್ಧರಿಸಿದ ತೇಜಸ್ವಿಯವರು ನಾಡಿನಿಂದ ಕಾಡಿಗೆ ಪಯಣಿಸಿದರು. ಆದರೆ ಗ್ರಾಮೀಣ ಬದುಕಿನ ಸ್ವರೂಪವೇ ಬೇರೆ ಎಂಬುದನ್ನು ಅವರ ಬಹುಪಾಲು ಕಥೆಗಳಲ್ಲಿ ಮನವರಿಕೆ ಮಾಡಿಕೊಟ್ಟಿದ್ದಾರೆ.

ಗ್ರಾಮೀಣ ಭಾಗದಲ್ಲಿ ಯಜಮಾನಿಕೆಯ ಹಿಡಿತವನ್ನು ಸಹಜವಾಗಿ ಒಪ್ಪಿಕೊಂಡು ಹೋಗುವ ವ್ಯಕ್ತಿಯಾಗಿ ಲಿಂಗನನ್ನು 'ಲಿಂಗ ಬಂದ' ಕಥೆಯಲ್ಲಿ ತೇಜಸ್ವಿಯವರು ತರುತ್ತಾರೆ. ಹತ್ತು ವರ್ಷದ ಹುಡುಗ ಕಿಟ್ಟಿ ಮನೆಯ ಕೆಲಸದವನಾದ ಲಿಂಗನ ಜೊತೆ ಮಾತನಾಡುವಾಗ ಅವನ ಮಾತಿನ ರೀತಿಯನ್ನು ಸಹಜವಾಗಿ ಸ್ವೀಕರಿಸುವ ಲಿಂಗನು, ತನ್ನ ಪ್ರತಿಭಟನೆಯನ್ನು ಕಥೆಯ ಮೂಲಕ ಹೇಳಿ ಕಿಟ್ಟುವಿಗೆ ಭಯವನ್ನು ತರುವ ಕೆಲಸ ಮಾಡುತ್ತಾನೆ. ಜೋರಾದ ಮಳೆಯ ಸಂದರ್ಭದಲ್ಲಿ "ಲಿಂಗ ಬೆಚ್ಚಗೆ ಇಹಪರಗಳ ಪರಿವೆಯಿಲ್ಲದೆ ಬೆಂಕಿಯನ್ನೇ ನೋಡುತ್ತ ಕುಳಿತಿದ್ದ. ಅವನ ತೆರೆದ ಎರಡು ಕಣ್ಣುಗಳಲ್ಲಿಯೂ ಒಲೆಯ ಬೆಂಕಿ ಪ್ರತಿಬಿಂಬವಾಗಿ ಎರಡು ಚಿಕ್ಕ ಬೆಂಕಿಗಳು ಉರಿಯುತ್ತಿದ್ದವು. ಅವು ಒಲೆಯ ಬೆಂಕಿ ಓಲಾಡಿದಾಗ, ಧಗಧಗಿಸಿದಾಗ ಧಗಧಗಿಸಿ ಕಿಡಿಕಾರಿದಾಗ ಕಿಡಿಗಾರುತ್ತಿದ್ದವು. ಕಿಟ್ಟಿ ಹೋಗಿ ಅವನ ಪಕ್ಕದಲ್ಲೇ ಕುಳಿತು,

'ಏ ಒತ್ತೋ' ಎಂದ.

ಲಿಂಗ ಕೊಂಚ ಸರಿದ.

'ಏ ಇನ್ನೂ ಒತ್ಕೋ' ಎಂದ

ಲಿಂಗ ಇನ್ನೂ ಕೊಂಚ ಸರಿದ.

'ಏ ಇನ್ನೂ ಜಾಗ ಬೇಕು. ಒತ್ಕೋ' ಎಂದ

ಲಿಂಗ ಇನ್ನೂ ಸರಿದಿದ್ದರೆ ಬಾಗಿಲಿನಿಂದ ಮಳೆ ಇರಿಚಲು ಅವನ ಮೇಲೆ ನೇರವಾಗಿ ಬೀಳುತ್ತಿತ್ತು. ಆದ್ದರಿಂದ ಅವನು ಒತ್ತಲಿಲ್ಲ. ಅದರ ಬದಲು ಕಿಟ್ಟಿಯ ಕಡೆಗೆ ತಿರುಗಿ,

'ಹಂಗನ್ಬಾರದ್ರಣ್ಣ ಎಂದ."[೪]

ಮುಂದುವರೆದಂತೆ ಲಿಂಗನು ತನಗೆ ಆಗುತ್ತಿರುವ ತೊಂದರೆಯನ್ನು ಹಿಂದೆ ಕಿಟ್ಟುವಿಗೆ ಹೇಳಿದ ಕಥೆಯನ್ನು ನೆನಪಿಸಿ, ಕಿಟ್ಟುವಿನ ಆಕ್ರಮಣದ ಮನಸ್ಥಿತಿಗೆ ಕಡಿವಾಣ ಹಾಕುವ ಕೆಲಸವನ್ನು ಮಾಡುತ್ತಾನೆ. ನೇರವಾಗಿ ಲಿಂಗನು ತನಗೆ ಆಗುವ ಅನ್ಯಾಯವನ್ನು ಕಥೆಯ ಮೂಲಕ ಪ್ರತಿಭಟಿಸುತ್ತಾನೆ.

ಬಡತನವು ವ್ಯಕ್ತಿ ವ್ಯಕ್ತಿಯ ಜೀವನದ ಹಿನ್ನೆಲೆಯಲ್ಲಿ ನಿರ್ಧರಿಸುವುದಾದರೂ ಎಲ್ಲ ಕಾಲಕ್ಕೂ ಅದು ಸ್ಥಿರವಾಗಿ ಇರುತ್ತದೆ. ವ್ಯಕ್ತಿಯ ಅಸ್ಥಿತ್ವವನ್ನು ಬಡತನವು ನಿರ್ಧರಿಸುತ್ತದೆ. ಕೊಳ್ಳುಬಾಕ ಜಗತ್ತಿನಲ್ಲಿ ಶ್ರೀಮಂತಿಕೆಯು ಪ್ರಧಾನವಾದ ಸಾಮಾಜಿಕ ಅಂತಸ್ತಾಗಿರುತ್ತದೆ. ಇಲ್ಲಿ ಮಾನವೀಯ ಮೌಲ್ಯಗಳಿಗೆ ಬೆಲೆಯೇ ಇರುವುದಿಲ್ಲ. ಗ್ರಾಮೀಣ ಬದುಕನ್ನು ಹಸನಾಗಿಸುವಲ್ಲಿ ಆರ್ಥಿಕ ವಿಚಾರಗಳು ಅತಿ ಮುಖ್ಯವೆನಿಸುತ್ತವೆ. ತೇಜಸ್ವಿಯವರು 'ಗುಡುಗು ಹೇಳಿದ್ದೇನು' ಕಥೆಯಲ್ಲಿ ಲಕ್ಕ ಸೋಮರು ಮುದುಕಿಯನ್ನು ಕಡಿಕಲ್ಲಿನಲ್ಲಿಗೆ ಕರೆದು ಕೊಂಡು ಹೋಗುವ ಸಂದರ್ಭದಲ್ಲಿ ಲಕ್ಕನು ಗುಡಿಸಿಲಿನ ಬಿದಿರುಕೋಲನ್ನು ಎಳೆಯುವಾಗ "ನಾಲ್ಕು ಮಳೆಗಾಲ ಕಳೆದಿದ್ದ ಅಡಕೆ ಸೋಗೆಯ ಆ ಮಾಡು ಕಡೆಯ ಎಲುಬೂ ಕೊಳೆತ ಕುಷ್ಟರೋಗಿಯಂತೆ ಧಸಕ್ಕನೆ ಗುಡಿಸಲೊಳಭಾಗದ ಒಣ ನೆಲವನಪ್ಪಿತು."[೫]

ಗ್ರಾಮೀಣ ಭಾಗದಲ್ಲಿನ ಬಹುಪಾಲು ಆಸರೆಯ ಭಾಗ ಮನೆ. ಆದರೆ ಮನೆಯು ಎಲ್ಲರಿಗೂ ವ್ಯವಸ್ಥಿತವಾಗಿರುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಬಡತನಕ್ಕೆ ಗುಡಿಸಲೆ ಆಸರೆ. ಆ ಅಸರೆಯ ಗುಡಿಸಲುಗಳೆ ಎಷ್ಟು ಜನರ ಬದುಕಿನ ಕನಸುಗಳ ಪಯಣಕ್ಕೆ ದಾರಿ. ಅವುಗಳ ಆಧಾರ ತಪ್ಪಿದ್ದರೆ ಮನುಷ್ಯನಿಗೆಲ್ಲಿ ನೆಲೆ? ಎಂಬ ಪ್ರಶ್ನೆ ಕಾಡುತ್ತದೆ.

ಯೌವ್ವನದ ತುಡಿತಕ್ಕೆ ಒಳಗಾಗುವ ಯುವಜನತೆಯ ಮನಸ್ಸು ಸದಾ ತನ್ನ ಸ್ಥಳದಿಂದ ಹೊರ ಹೋಗಬೇಕೆಂದು ಸಹಜವಾಗಿ ಹಪಹಪಿಸುತ್ತದೆ. ಅದು ಪ್ರೀತಿ-ಕಾಮದ ಕಾರಣಕ್ಕಾಗಬಹುದು ಅಥವಾ ವ್ಯವಸಾಯ ಮುಖಿಯ ದುಡಿಮೆಯಿಂದ ವಿಮುಖನಾಗ ಬಯಸುವ ಕಾರಣಕ್ಕೂ ಆಗಬಹುದು, ಅಥವಾ ಸಹಜವಾದ ನಗರದ ಆಕರ್ಷಣೆಯ ವಿಚಾರಕ್ಕೂ ಆಗಬಹುದು. ಒಟ್ಟಾರೆಯಾಗಿ ಯುವ ಮನಸ್ಸುಗಳು ಸದಾ ಇಂಥ ವಿಚಾರಗಳ ಕಡೆ ಗಮನವನ್ನು ಕೇಂದ್ರಿಕರೀಸುವುದನ್ನು ತೇಜಸ್ವಿಯವರು 'ಹುಲಿಯೂರಿನ ಸರಹದ್ದು'

ಕಥೆಯಲ್ಲಿ ತೋರಿಸುತ್ತಾರೆ. ಕಥೆಯಲ್ಲಿ ಕಾಣುವ ಸೋಮು ತನ್ನ ಪ್ರೀತಿಯ ಕಾರಣಕ್ಕಾಗಿ ತನ್ನದೆ ಆದ ಚಿಂತೆಯ ಬೆನ್ನೇರುತ್ತಾನೆ. ಅವನಿಗೆ ತಂದೆ-ತಾಯಿ ಸತ್ತರೂ, ಸಂಪತ್ತು ನಾಶವಾದರೂ ಸರಿಯೇ ತಾನು ಊರನ್ನು ಬಿಡುವುದು, ತಾನು ಇಷ್ಟಪಡುವ ಹೆಣ್ಣನ್ನು ಮದುವೆಯಾಗುವ ಬಯಕೆಯು ಅವನಲ್ಲಿ ಪ್ರಬಲವಾಗುತ್ತದೆ. ಪಾರಂಪರಗತ ಬದುಕಿನಿಂದ ಹೊರಬರಬೇಕೆಂದು ತೀರ್ಮಾನಿಸುತ್ತಾನೆ.

"ಆಕಾಶದ ಕಡೆ ನೋಡುತ್ತ ಅಂದುಕೊಂಡ; 'ಬೇಕಾದರೆ ಅಪ್ಪ ಸಾಕಿದ ಕೋಳಿಮರಿಗಳನ್ನೆಲ್ಲ ಹೊತ್ತೊಯ್ಯಲಿ. ಈ ಮನೆ ಮಠವನ್ನೆಲ್ಲಾ ಎತ್ತಿ ಎಸೆಯಲಿ. ಅಪ್ಪ ಅಮ್ಮನನ್ನು ಹೊತ್ತುಕೊಂಡು ಹೋಗಲಿ, ನಾನು ಈ ರಾಜಗರುಡನನ್ನು ಕೊಲ್ಲುವದೇ ಇಲ್ಲ. ........ ಇಂಥ ಗರುಡನನ್ನು ಹೊಡೆಯೊಲ್ಲ ಎಂದರೆ ನಾನು ನಳಿನಾಕ್ಷಿಯನ್ನು ಪ್ರೀತಿಸೋದಕ್ಕೂ ಇದಕ್ಕೂ ಏನು ಸಂಬಂಧ? ತಾಯ್ಗಂಡನಂತೆ ಥತ್, ಈ ಅಪ್ಪ ಅಮ್ಮ ಈ ಕ್ಷಣ ಸತ್ತರೂ ನನಗೇನಿಲ್ಲ, ಅಯ್ಯೋ, ಈ ಮನೆಯ ಒಲವಿನ ಸರಹದ್ದಿನಿಂದ ಆಚೆ ಹೋಗುವುದೆಂತು? ನನ್ನ ಮಲಮೂತ್ರಾದಿ ಪ್ರವೃತ್ತಿಗಳೂ ಅಪ್ಪನ ಆಜ್ಞೆಯಂತೆಯೇ ಆಗುತ್ತಿವೆಯೇನೋ! ಇನ್ನು ಇಲ್ಲಿ ತನಗೆ ಒಂದು ಪ್ರೀತಿಸುವ ಹಕ್ಕಿದೆ ಎನ್ನುವದರಲ್ಲಿ ಅರ್ಥವಿಲ್ಲ.......

ನಾನು ಈ ಅಪ್ಪನಿಗಾಗಿ ಬದುಕುತ್ತಿದ್ದೇನೆ.

ಅವನು ಅವನಜ್ಜನಿಗಾಗಿ,

ನನ್ನ ಮಗ ನನಗಾಗಿ.

ಅಯ್ಯೋ, ಈ ಹುಲಿಯೂರಿನ ಸರಹದ್ದಿನಲ್ಲಿ ಒಂದು ಇನ್ನೊಂದಕ್ಕಾಗಿ ಬದುಕಿದೆ. ಗಾಳಿ ಕೂಡಾ ಈ ಕಾಡಿನ ಮಂಗನಬಳ್ಳಿ ಗಿಜರಿನಲ್ಲಿ ಕೈಗೆ ಬೇಡಿ ಹಾಕಿಸಿಕೊಂಡ ಖೈದಿ.....

ಈ ಅಪ್ಪ ಅಮ್ಮರ ಕುತ್ತಿಗೆಗೆ ಕೊಕ್ಕಿನಿಂದ ಇರಿದು ಬಾಂದಳದ ಬಿತ್ತರಕ್ಕೆ ನೆಗೆದುಬಿಡಬೇಕು.

ನಾನೇ ಗರುಡ. ಹದ್ದುಬದ್ದಿಲ್ಲದ ವಯತ್ತಳದಲ್ಲಿ ಹಾರಿ ಹೋಗಲೇಬೇಕು."[೬]

'ಹುಲಿಯೂರಿನ ಸರಹದ್ದು' ಕಥೆಯು ಸಹಜವಾದ ಗ್ರಾಮೀಣ ಭಾಗದ ವ್ಯಕ್ತಿಯೊಬ್ಬನ ಕೌಟುಂಬಿಕ ಸಂಬಂಧದಿಂದ ತಾನು ಪಡೆಯುವ ಸ್ವತಂತ್ರದ ಬಿಡುಗಡೆಯ ಕಲ್ಪನೆಯ ಕಡೆ ಹೋಗುತ್ತದೆ. ಹದ್ದು ಇಲ್ಲಿ ವ್ಯಕ್ತಿಯ ಸ್ವಾತಂತ್ರ್ಯದ ಸಂಕೇತವಾಗಿ ಕಂಡರೆ, ಹುಟ್ಟಿದ ಊರು-ಅಪ್ಪ-ಅಮ್ಮ-ಸಂಪತ್ತು ಇವುಗಳು ಸೋಮನ ವಯಸ್ಸಿನಲ್ಲಿ ಉಂಟಾದ ಪ್ರೀತಿಯ ಆಕರ್ಷಣೆಯ ಮುಂದೆ ನಗಣ್ಯವಾಗಿ ಕಾಣುತ್ತವೆ.

ಗ್ರಾಮೀಣ ಭಾಗದ ಜನತೆ ಇಂದಿಗೂ ಕೂಡ ಆಸ್ತಿ ವಿಚಾರಗಳಲ್ಲಿ ನಾಗರಿಕ ಮನಸ್ಸುಗಳನ್ನು ಹೊಂದಿಲ್ಲ. ಇಂದಿಗೂ ಕೂಡ ಹೊಡೆದಾಟ-ಬಡಿದಾಟಗಳು ನಡೆಯುತ್ತಿರುತ್ತವೆ. ಇದು ಇಂದಿನ ಸಮಸ್ಯೆಯಲ್ಲ. ನಗರ ಪ್ರದೇಶದಲ್ಲಿನ ಬದುಕಿನ

ಪರಿಕಲ್ಪನೆಗೂ ಗ್ರಾಮೀಣ ಬದುಕಿನ ಪರಿಕಲ್ಪನೆಯ ಮುಖಾಮುಖಿಯನ್ನು 'ಸ್ವರೂಪ' ಕಥೆಯಲ್ಲಿ ಕಾಣಬಹುದು. ಕಥೆಯಲ್ಲಿ ಶ್ರೀನಿವಾಸನ ನಿರೂಪಣೆಯ ಮಾತುಗಳಲ್ಲೇ ಎರಡು ವಿಭಿನ್ನ ಸನ್ನಿವೇಶಗಳನ್ನು ತೇಜಸ್ವಿಯವರು ತರುತ್ತಾರೆ.

"ಈ ಗವಿಗುಡ್ಡಕ್ಕೆ ಬಂದಮೇಲೆ ನೂರೆಂಟು ತಾಪತ್ರಯಗಳಿಂದಾಗಿ ನಿನಗೆ ಕಾಗದ ಬರೆಯಲಾಗಲೇ ಇಲ್ಲ. ನಮ್ಮ ಜಮೀನು ಯಾರದೋ ವಶದಲ್ಲಿದೆ ಎಂದೆಲ್ಲಾ ಊಹಿಸಿಕೊಂಡು ಅದಕ್ಕೆ ಸಂಬಂಧಿಸಿದ ಕೋರ್ಟು ಕಚೇರಿಯ ಕಾಗದಪತ್ರಗಳನ್ನೆಲ್ಲಾ ತಂದಿದ್ದೆನಲ್ಲಾ, ಇಲ್ಲಿ ಬಂದರೆ ನಾನು ಚಕಿತನಾಗುವಂತೆ ಗದ್ದೆ ಎಲ್ಲಾ ವಾರಸುದಾರರೇ ಇಲ್ಲದೆ ಹುಲ್ಲು ಲಂಟಾನ ಇತ್ಯಾದಿಗಳು ಬೆಳೆದು ಪಾಳುಬಿದ್ದಿತು. ಇದನ್ನು ಏಕೆ ಹೇಳಿದೆನೆಂದರೆ ಕೋರ್ಟು ಕಚೇರಿಗಳಿಗೆ ಅಲೆದಾಟ ಮಾಡುತ್ತಿದ್ದುದರಿಂದ ಕಾಗದ ಬರೆಯಲಿಲ್ಲೆಂದು ತಿಳಿಯಬೇಡ. ನಾನು ಇಲ್ಲಿಗೆ ಬಂದಾಗ ಅದೇ ಶಂಕೆಯಿಂದ ಬಂದೆ. ಈ ಕೋರ್ಟುಕಚೇರಿಗಳಿಗೆ ತಿರುಗಾಡಿ ನೂರೆಂಟು ಕೇಸುಗಳನ್ನು ಮಾಡಿಕೊಳ್ಳುವ ಹೇಸಿಗೆ ಲೆಕ್ಕಾಚಾರ ಯಾರಿಗೆ ಬೇಕು?

ಎಲ್ಲಕ್ಕಿಂತ ಮಿಗಿಲಾಗಿ ಕೇವಲ ಭೂಮಿಗಾಗಿ ಅಗೌರವಯುತವಾದ ನಡವಳಿಕೆಗೆ ಅಸಭ್ಯವಾದ ವ್ಯವಹಾರಗಳು ನನಗೆ ಹಿಡಿಸದು. ಇಲ್ಲಿ ಜಾಗ ಖಾಲಿ ಬಿದ್ದು ಬೇಲಿ ಹಾಕಿ ಕೊಂಡಷ್ಟಕ್ಕೂ ನನ್ನದೇ ಎನ್ನುವಂತಿತ್ತು. ನನ್ನ ಚಿಕ್ಕಪ್ಪ ಕ್ಷಯ ರೋಗದಿಂದ ಹಿಂದೆಯೇ ತೀರಿಕೊಂಡಿದ್ದರು. ಅವರನ್ನು ಕೊನೆಗಾಲದಲ್ಲಿ ನೋಡಿಕೊಂಡವರೊಬ್ಬರಿಗೆ ನಮ್ಮ ಹಳೆಯ ಮನೆಯನ್ನು ವಹಿಸಿದ್ದರು. ನಾನು ಬಂದಾಗ ಅವರೆಲ್ಲಾ ಚಿಂತಾಕ್ರಾಂತರಾದರು. ನಾನು ಜಮೀನಿನ ವಿಷಯ ಮಾತನಾಡಿದೊಡನೆ ನಮ್ಮ ಜಮೀನಿನ ಅಕ್ಕಪಕ್ಕದವರೆಲ್ಲಾ ತಲೆ ತುರಿಸಿಕೊಳ್ಳತೊಡಗಿದರು. ಅಕ್ಕಪಕ್ಕದವರ ಭೂಮಿಯನ್ನೆಲ್ಲಾ ನುಂಗಿಕೊಂಡು ಅಥವಾ ಸಾಲಕೊಟ್ಟು ಜಮೀನು ಬರೆಸಿಕೊಂಡು ಹಣವಂತನಾಗುವುದು ನನ್ನಿಂದಾಗದ ಕೆಲಸ ನೋಡು. ಹಾಗಂತಲೇ ನನ್ನದಾದ ಹದಿನಾರು ಎಕರೆಗಳ ಹಳೆಯ ಬಾಂದುಗಳನನು ಸರ್ವೆ ಆಫೀಸಿನ ನಕ್ಷೆಯ ಆಧಾರದ ಮೇಲೆ ಹುಡುಕಿ ತೆಗೆಸಿದೆ. ಹಾಗೆಂದು ಟಾಲ್‌ಸ್ಟಾಯ್ ಹೇಳಿದಂತೆ ನನ್ನನ್ನು ಹೂಳೋದಕ್ಕೆ ಬೇಕಲ್ಲಾ ಆರಡಿ ಜಾಗ ಅಷ್ಟಕ್ಕೇ ಸಾಕೆಂದು ಹೇಳಲಿಲ್ಲ. ಸಾಯುವವರೆಗೆ ಉಣ್ಣೋದಿಕ್ಕೆ ಬೇಕಲ್ಲಾ. ಬೇಕಾದರೆ ಹದಿನಾರೆಕರೆ ಜಾಗದ ಒಳಗೇ ಆರಡಿ ಗುಂಡಿಯೊಂದನನ್ನು ಅಗೆಸಿ ಕಾಯಕ್ಕೊಂದು ಶಯನ ಮಾಡಿಡಬಹುದು. ನನ್ನ ಆಸ್ತಿ ನಾನು ಸ್ವಾಧೀನ ಪಡಿಸಕೊಳ್ಳುವ ಕಾಲಕ್ಕೆ ಸಣ್ಣ ಸಣ್ಣ ತಕರಾರುಗಳು ಕೆಲವು ಬಂದವು. ಜಮೀನು ನನ್ನದು ಎನ್ನವಂಥ ತಕರಾರುಗಳಲ್ಲ. ಈ ಜಾಗ ಊರಿಗೆ ಬರುವ ದಾರಿ, ಇದು ದನ ಓಡಾಡುವ ದಾರಿ, ಇದು ಹಳೇಕಾಲದ ಗೋಮಾಳ, ಇಲ್ಲಿ ಬೇಲಿ ಹಾಕಬೇಡಿ, ಎಂದೆಲ್ಲಾ ಪುಡಿಪುಡಿ ತಕರಾರುಗಳಾದುವು ಆದರೆ ಇವನ್ನೆಲ್ಲಾ ಕೇವಲ ಗಾಂಭೀರ್ಯದಿಂದಲೇ ವಿನಯದಿಂದಲೇ ಗೆದ್ದುಬಿಟ್ಟೆನು."[೭]

ಆಧುನಿಕತೆಯು ನಗರ ಕೇಂದ್ರಿತ ಶಿಕ್ಷಣದಿಂದ ಸಿಗುವ ಜ್ಞಾನ ಮತ್ತು ಉದ್ಯೋಗ ಬದುಕಿನಲ್ಲಿ ಜಿಗುಪ್ಸೆಯನ್ನು ತರುತ್ತದೆ. ಅಂತಹ ಜಿಗುಪ್ಸೆಯನ್ನು ಸಹಿಸಲಾರದೆ ಹಳ್ಳಿಯ ಕಡೆಗೆ ಮುಖ ಮಾಡುವ ವ್ಯಕ್ತಿಗಳು ಮುಂದಿನ ಬದುಕನ್ನು ಹಳ್ಳಿಯಲ್ಲಿ ನಡೆಸುವ ದೃಷ್ಟಿಯಿಂದ ಭೂಮಿಯನ್ನು ಕೊಂಡುಕೊಳ್ಳಲು ನುಗುಬೇಡಿಗೆ ಬರುವ ವ್ಯಕ್ತಿಗಳು ಮುಂದಿನ ಕಥಾ ಭಾಗದಲ್ಲಿ ಜರುಗುವ ಸನ್ನಿವೇಶದಿಂದ ಹಳ್ಳಿಯಲ್ಲಿ ಇರಲಾರದೆ ಪಲಾಯನ ಮಾಡುತ್ತಾರೆ.

ಆರಂಭದಲ್ಲಿ ಭೂಮಿಯನ್ನು ಕೊಳ್ಳಲು ಬರುವ ಜಗನ್ನಾಥ, ರಂಗಪ್ಪನವರು, ಉಗ್ರಗಿರಿಯ ತಪ್ಪಲಿನಲ್ಲಿ ವಾಸವಾಗಿರುವ ಗೋಪಾಲಯ್ಯ, ಶಾರಿ, ಕ್ರಾಂಪ, ಲೋರಿ, ಕುಳುಪ, ಮರಸರ ಇವರೆಲ್ಲರೂ  ಘಟನೆಯನ್ನು ಹೊತ್ತು ತಂದ ನಿಗೂಢ ವ್ಯಕ್ತಿಗಳಾಗಿ ಕಾಣುತ್ತಾರೆ. ಕಥೆ ದೀರ್ಘವಾಗಿ ಮುನ್ನಡೆಯುತ್ತದೆ.

ಸಹಜವಾದ ಪ್ರಕೃತಿಯ ವೈರುಧ್ಯಗಳಿಗೆ ಮನುಷ್ಯನು ಬೆಚ್ಚುವ, ಕೊನೆಗೆ ಪ್ರಕೃತಿಗೆ ಹೊಂದಿಕೊಳ್ಳಲಾರದೆ ಜಿಗುಪ್ಸೆಗೊಳ್ಳುವ ಸನ್ನಿವೇಶಗಳನ್ನು ಈ 'ನಿಗೂಢ ಮನುಷ್ಯರು' ಕಥೆಯಲ್ಲಿ ನೋಡಬಹುದು.

ಭಾರತದ ಬಹುಪಾಲು ಗ್ರಾಮಗಳು ಇಂದಿಗೂ ಕೂಡ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿರುವುದು ಕಂಡುಬರುತ್ತದೆ. ನಗರದ ವ್ಯಕ್ತಿಯೂ ಬದುಕಿನ ಅಸ್ತಿತ್ವವನ್ನು ಗ್ರಾಮದಲ್ಲಿ ಹುಡುಕಲು ಹೋಗುತ್ತಾನೆ. ಅಂಥವನು ಬಹುಪಾಲು ಭ್ರಮನಿರಸನಗೊಳ್ಳುತ್ತಾನೆ. ಅಂತಹ ಒಂದು ಘಟನೆಯ ಸುತ್ತಾ "ನಿಗೂಢ ಮನುಷ್ಯರು" ಕಥೆ ಹೆಣೆಯಲ್ಪಟ್ಟಿದೆ. ಜಗನ್ನಾಥ ಮತ್ತು ರಂಗಪ್ಪನವರು ಭೂಮಿಯನ್ನು ಕೊಳ್ಳುವ ವಿಚಾರಕ್ಕೆ ಕಾರಿನಲ್ಲಿ ಹಳ್ಳಿಗೆ ಬರುತ್ತಾರೆ. "ಅಲ್ಲೊಂದು ಅತ್ಯಂತ ಹೊಲಸಾದ ರಸ್ತೆ. ಏರು ತಗ್ಗುಗಳು, ಕಲ್ಲುಗುಂಡುಗಳು, ಕೆಸರಿನ ಹೊಂಡಗಳು ಮಾರಿಗೆ ಎರಡರಂತೆ ಸಿಗುತ್ತಿದ್ದವು. ಅಂಥ ವಾತಾವಾರಣದ ಆ ರೀತಿಯ ರಸ್ತೆಯಲ್ಲಿ, ಹಳೆಯ ಬಟ್ಟೆಟಾಪಿನ ಫೋರ್ಡ್ ಕಾರೊಂದು ಬಹು ಪ್ರಯಾಸದಿಂದ ಮುಂದುವರಿಯುತ್ತಿದ್ದಿತ್ತು. ಅದು ಮಾಡುತ್ತಿದ್ದ ಕಿರಿಕಿರಿ ಕೀಚ್ ಶಬ್ದವು ಕಾಡಿನ ಜೀರ್ದುಂಬಿಗಳನ್ನು ಅಣಕಿಸುವಂತಿದ್ದಿತು. ಅದು ಪ್ರತಿ ಹೊಂಡದಲ್ಲೂ ಧುಮುಕಿ ಎದ್ದಾಗದರ ಮುಂದುಗಡೆಯ ಮಡ್‌ಗಾರ್ಡುಗಳು ಪಾರಿವಾಳದ ರೆಕ್ಕೆಯಂತೆ ಹೊಡೆದು ಕೊಳ್ಳುತ್ತಿದ್ದವು. ಅದರ ಮುಂದುಗಡೆಯ ಹೆಡ್‌ಲೈಟ್ ಒಂದು ಯಾವುದೋ ಲಘು ಅಪಘಾತದಲ್ಲಿ ಓರೆಯಾಗಿದ್ದುದರಿಂದ ಮೆಳ್ಳಗಣ್ಣಿನ ಮುಖದಂತೆ ಕಾಣುತ್ತಿತ್ತು. ಆ ಕಾರು"

ನುಣುಪಾದ, ಉಬ್ಬುತಗ್ಗುಗಳು ಇಲ್ಲದಂತೆ ಗ್ರಾಮೀಣ ಭಾಗದ ರಸ್ತೆಗಳು ಇರುತ್ತವೆ ಎಂಬುದನ್ನು ಊಹಿಸಬಾರದು ಎಂಬುದಕ್ಕೆ "ನಿಗೂಢ ಮನುಷ್ಯರು" ಕಥೆಯ ಆರಂಭದ ಸಾಲುಗಳು ಉದಾಹರಣೆಯಾಗಿ ಕಾಣುತ್ತವೆ.  ಪ್ರಕೃತಿಯಲ್ಲಿನ ಗಾಳಿ, ಮಳೆ, ಬಿಸಿಲು

ಆಧುನಿಕತೆಯ ನಗರ ಕೇಂದ್ರಿತ ಶಿಕ್ಷಣದಿಂದ ಸಿಗುವ ಜ್ಞಾನ ಮತ್ತು ಉದ್ಯೋಗ ಬದುಕಿನಲ್ಲಿ ಜಿಗುಪ್ಸೆಯನ್ನು ತರುತ್ತದೆ. ಅಂತಹ ಜಿಗುಪ್ಸೆಯನ್ನು ಸಹಿಸಲಾರದೆ ಹಳ್ಳಿಯ ಕಡೆಗೆ ಮುಖ ಮಾಡುವ ವ್ಯಕ್ತಿಗಳು ಮುಂದಿನ ಬದುಕನ್ನು ಹಳ್ಳಿಯಲ್ಲಿ ನಡೆಸುವ ದೃಷ್ಟಿಯಿಂದ ಭೂಮಿಯನ್ನು ಕೊಂಡುಕೊಳ್ಳಲು ನುಗುಬೀಡಿಗೆ ಬರುವ ವ್ಯಕ್ತಿಗಳು ಮುಂದಿನ ಕಥಾ ಭಾಗದಲ್ಲಿ ಜರುಗುವ ಸನ್ನಿವೇಶದಿಂದ ಹಳ್ಳಿಯಲ್ಲಿ ಇರಲಾರದೆ ಪಲಾಯನ ಮಾಡುತ್ತಾರೆ.

ಆರಂಭದಲ್ಲಿ ಭೂಮಿಯನ್ನು ಕೊಳ್ಳಲು ಬರುವ ಜಗನ್ನಾಥ, ರಂಗಪ್ಪನವರು, ಉಗ್ರಗಿರಿಯ ತಪ್ಪಲಿನಲ್ಲಿ ವಾಸವಾಗಿರುವ ಗೋಪಾಲಯ್ಯ, ಶಾರಿ, ಕ್ರಾಂಪ, ಲೋರಿ, ಕುಳುಪ, ಮರಸರ ಇವರೆಲ್ಲರೂ ಘಟನೆಯನ್ನು ಹೊತ್ತು ತಂದ ನಿಗೂಢ ವ್ಯಕ್ತಿಗಳಾಗಿ ಕಾಣುತ್ತಾರೆ. ಕಥೆ ದೀರ್ಘವಾಗಿ ಮುನ್ನಡೆಯುತ್ತದೆ.

ಸಹಜವಾದ ಪ್ರಕೃತಿಯ ವೈರುಧ್ಯಗಳಿಗೆ ಮನುಷ್ಯನು ಬೆಚ್ಚುವ, ಕೊನೆಗೆ ಪ್ರಕೃತಿಗೆ ಹೊಂದಿಕೊಳ್ಳಲಾರದೆ ಜಿಗುಪ್ಸೆಗೊಳ್ಳುವ ಸನ್ನಿವೇಶಗಳನ್ನು ಈ 'ನಿಗೂಢ ಮನುಷ್ಯರು' ಕಥೆಯಲ್ಲಿ ನೋಡಬಹುದು.

ಭಾರತದ ಬಹುಪಾಲು ಗ್ರಾಮಗಳು ಇಂದಿಗೂ ಕೂಡ ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿರುವುದು ಕಂಡುಬರುತ್ತದೆ. ನಗರದ ವ್ಯಕ್ತಿಯೂ ಬದುಕಿನ ಅಸ್ತಿತ್ವವನ್ನು ಗ್ರಾಮದಲ್ಲಿ ಹುಡುಕಲು ಹೋಗುತ್ತಾನೆ. ಅಂಥವನು ಬಹುಪಾಲು ಭ್ರಮನಿರಸನಗೊಳ್ಳುತ್ತಾನೆ. ಅಂತಹ ಒಂದು ಘಟನೆಯ ಸುತ್ತಾ "ನಿಗೂಢ ಮನುಷ್ಯರು" ಕಥೆ ಹೆಣೆಯಲ್ಪಟ್ಟಿದೆ. ಜಗನ್ನಾಥ ಮತ್ತು ರಂಗಪ್ಪನವರು ಭೂಮಿಯನ್ನು ಕೊಳ್ಳುವ ವಿಚಾರಕ್ಕೆ ಕಾರಿನಲ್ಲಿ ಹಳ್ಳಿಗೆ ಬರುತ್ತಾರೆ. "ಅಲ್ಲೊಂದು ಅತ್ಯಂತ ಹೊಲಸಾದ ರಸ್ತೆ. ಏರು ತಗ್ಗುಗಳು, ಕಲ್ಲುಗುಂಡುಗಳು, ಕೆಸರಿನ ಹೊಂಡಗಳು ಮಾರಿಗೆ ಎರಡರಂತೆ ಸಿಗುತ್ತಿದ್ದವು. ಅಂಥ ವಾತಾವಾರಣದ ಆ ರೀತಿಯ ರಸ್ತೆಯಲ್ಲಿ, ಹಳೆಯ ಬಟ್ಟೆಟಾಪಿನ ಫೋರ್ಡು ಕಾರೊಂದು ಬಹು ಪ್ರಯಾಸದಿಂದ ಮುಂದುವರಿಯುತ್ತಿದ್ದಿತ್ತು. ಅದು ಮಾಡುತ್ತಿದ್ದ ಕಿರಿಕಿರಿ ಕೀಚ್ ಶಬ್ದವು ಕಾಡಿನ ಜೀರ್ದುಂಬಿಗಳನ್ನು ಅಣಕಿಸುವಂತಿದ್ದಿತು. ಅದು ಪ್ರತಿ ಹೊಂಡದಲ್ಲೂ ಧುಮುಕಿ ಎದ್ದಾಗದರ ಮುಂದುಗಡೆಯ ಮಡ್‌ಗಾರ್ಡುಗಳು ಪಾರಿವಾಳದ ರೆಕ್ಕೆಯಂತೆ ಹೊಡೆದು ಕೊಳ್ಳುತ್ತಿದ್ದವು. ಅದರ ಮುಂದುಗಡೆಯ ಹೆಡ್‌ಲೈಟ್ ಒಂದು ಯಾವುದೋ ಲಘು ಅಪಘಾತದಲ್ಲಿ ಓರೆಯಾಗಿದ್ದುದರಿಂದ ಮೆಳ್ಳಗಣ್ಣಿನ ಮುಖದಂತೆ ಕಾಣುತ್ತಿತ್ತು. ಆ ಕಾರು"[4]

ನುಣಪಾದ, ಉಬ್ಬುತಗ್ಗುಗಳು ಇಲ್ಲದಂತೆ ಗ್ರಾಮೀಣ ಭಾಗದ ರಸ್ತೆಗಳು ಇರುತ್ತವೆ ಎಂಬುದನ್ನು ಊಹಿಸಬಾರದು ಎಂಬುದಕ್ಕೆ "ನಿಗೂಢ ಮನುಷ್ಯರು" ಕಥೆಯ ಆರಂಭದ ಸಾಲುಗಳು ಉದಾಹರಣೆಯಾಗಿ ಕಾಣುತ್ತವೆ. ಪ್ರಕೃತಿಯಲ್ಲಿನ ಗಾಳಿ, ಮಳೆ, ಬಿಸಿಲು

ವ್ಯಕ್ತಿಯ ಬದುಕನ್ನು ಹೈರಾಣಗೊಳಿಸುತ್ತವೆ ಎಂಬುದಕ್ಕೆ ಕಥೆಯ ಮುಂದುವರೆದ ಭಾಗದಲ್ಲಿ "ಮಳೆ ನಿಲ್ಲಲೇ ಇಲ್ಲ. ಗಾಳಿ ನಿಲ್ಲಲೇ ಇಲ್ಲ. ಥಂಡಿ, ಮೋಡ, ಕೆಸರು, ಶಬ್ಧ, ಒಂದೂ ಬದಲಾಗಲೇ ಇಲ್ಲ. ಯಾವುದೋ ಜಲಪಾತದ ಅನಂತಧಾರೆಯಂತೆ ಮಳೆ ಬೀಳತೊಡಗಿತ್ತು. ಹೆಂಚಿನ ಮೇಲೆ ಒಗ್ಗರಣೆಗೆ ಸಾಸಿವೆ ಹಾಕಿದಂತೆ ಒಂದೇ ಸಮ ಹನಿಗಳು ಚಟಪಟ ಸದ್ದು ಮಾಡುತ್ತಾ ಬೀಳುತ್ತಿದ್ದವು."[೧೦] ಇಲ್ಲಿನ ವಿಚಾರಗಳನ್ನು ಸಹಜವಾಗಿ ಗ್ರಾಮೀಣ ಭಾಗದವರು ಅನುಭವಿಸಿದರೆ, ನಗರ ಪ್ರದೇಶದವರಿಗೆ ಇದೊಂದು ಭಯಾನಕ ದೃಶ್ಯದಂತೆ ಕಾಣುತ್ತದೆ.

ಕಥೆಯ ಪಾತ್ರವಾಗಿರುವ ಗೋಪಾಲಯ್ಯನು ರೈತನ ಫಸಲಾದ ಏಲಕ್ಕಿಗೆ ಬೀಳುವ ಹುಳಗಳ ಬಗ್ಗೆ, ಭತ್ತಕ್ಕೆ ಬರುವ ಕೊಳೆ ರೋಗದ ಬಗ್ಗೆ ಔಪಚಾರಿಕವಾಗಿ ಮಾತನಾಡುವ ರೀತಿ, ರೈತನೊಬ್ಬನು ಸಹಜವಾಗಿ ಅನುಭವಿಸುವ ನಷ್ಟದ ರೂಪವಾಗಿದೆ. "ಬಂಡವಾಳ ಶಾಹಿ ಹಿನ್ನೆಲೆಯಲ್ಲಿ ನಡೆಯುವ ನಗರ ಕೇಂದ್ರಿತ ಆರ್ಥಿಕ ಚಟುವಟಿಕೆಗಳು, ಸಹಜವಾಗಿ ಬಂಡವಾಳಕ್ಕೆ ತಕ್ಕಂತೆ ಪ್ರತಿಫಲವನ್ನು ಅಪೇಕ್ಷಿಸುತ್ತವೆ. ಗ್ರಾಮೀಣ ಭಾಗದಲ್ಲಿ ಬಂಡವಾಳಕ್ಕೆ ಆಧಾರ ಭೂಮಿಯ ಫಸಲಾಗಿರುತ್ತದೆ. ಆದರೆ ಈ ಫಸಲು ನಿರೀಕ್ಷಿತ ಪ್ರಮಾಣದ ಪ್ರತಿಫಲ ಕೊಡದೆ ನಷ್ಟಕ್ಕೆ ದಾರಿಯನ್ನು ಮಾಡಿಕೊಡುತ್ತದೆ." ಎಂಬ ವಿಚಾರ ಗ್ರಾಮೀಣ ಭಾಗದ ಜಿಗುಪ್ಸೆಗೆ ಕಾರಣವಾಗಿರುತ್ತದೆ.

ತೇಜಸ್ವಿಯವರ "ಅಬಚೂರಿನ ಪೋಸ್ಟಾಫೀಸು" ಕಥಾ ಸಂಕಲನವು ಗ್ರಾಮೀಣ ಪ್ರದೇಶದ ಸೊಗಡನ್ನು ತೀರ ಸಾಮಾನ್ಯ ಪಾತ್ರಗಳೊಂದಿಗೆ ಸೃಷ್ಟಿಸಿ ಭಾರತೀಯ ಕೌಟುಂಬಿಕ ಬದುಕಿನ ಪಲ್ಲಟಗಳನ್ನು ತರುತ್ತಾರೆ. ಈ ಕಥಾ ಸಂಕಲನದ ಮುನ್ನುಡಿಯಲ್ಲಿ ಭಾರತೀಯ ಶಿಕ್ಷಣ ಕ್ರಮವು ಸೃಷ್ಟಿಸಿರುವ ಅಸಂಬದ್ಧತೆಯನ್ನು ಹೇಳುತ್ತಾರೆ. ಗ್ರಾಮೀಣ ಭಾಗದ ಅವಸ್ಥಾಂತರಗಳ ಬಗ್ಗೆ "ಅಬಚೂರಿನ ಪೋಸ್ಟಾಫೀಸು" ಕಥೆಯಲ್ಲಿ ನೋಡಲಾಗಿದೆ. ಬೋಬಣ್ಣನಿಗೆ ರೈಟರ್ ಕೆಲಸದ ಜೊತೆಗೆ ಪೋಸ್ಟ್‌ಮಾಸ್ತರನ ಹುದ್ದೆ ಲಭಿಸಿ, ನಿರಕ್ಷರಕುಕ್ಷಿಗಳಾದ ಹಳ್ಳಿಯ ಜನರಿಗೆ ಬಂದ ಪತ್ರಗಳನ್ನು ಓದಿ ಹೇಳುವ ಮತ್ತು ಅವರಿಗಾಗಿ ಪತ್ರ ಬರೆಯುವ ಕೆಲಸವನ್ನು ಮಾಡುತ್ತಾನೆ. ಇದೇ ಮುಂದೆ ಅವನ ಕೌಟುಂಬಿಕ ಬದುಕು ದಿಕ್ಕು ತಪ್ಪಲು ಕಾರಣವಾಗುತ್ತದೆ. ಗ್ರಾಮೀಣ ಜನತೆ ಆಧುನಿಕತೆಯ ಅವಿಷ್ಕಾರಗಳಿಗೆ ಸುಲಭವಾಗಿ ಒಗ್ಗಿಕೊಳ್ಳುವ ಜಾಯಮಾನದವರಲ್ಲ. ಅವುಗಳ ಪ್ರಯೋಗ ಶೀಲತೆ ಸಿದ್ದತೆ ಇಲ್ಲದೆ ನಡೆದರೆ ಅನಾಹುತಗಳಿಗೆ ದಾರಿಯಾಗುತ್ತವೆ. ಇವುಗಳ ಧಾವಂತ ಸ್ಥಿತಿಗಳನ್ನು ತೇಜಸ್ವಿಯವರ ಬಹುಪಾಲು ಕಥೆಗಳ ಉದಾಹರಣೆಗಳಾಗಿವೆ.

ಆಧುನಿಕತೆಯನ್ನು ಒಪ್ಪಿಕೊಳ್ಳದ "ಅವನತಿ" ಕಥೆಯಲ್ಲಿ ಮೌಢ್ಯತೆಗೆ ಒಳಗಾಗಿ ನಾಶವಾಗುವ ಸ್ಥಿತಿ ಕಾಣುತ್ತದೆಯಾದರೂ ಬೋಬಣ್ಣ ಮಾಸ್ತರ ಕೌಟುಂಬಿಕ ಬದುಕು ನಾಶವಾಗುವ ರೀತಿಯಲ್ಲಿ ಇಲ್ಲ. ಆದರೆ ಅವನತಿ ಕಥೆಯ ಇಸ್ಲಾಮುರದ ಜಡತ್ವ ಸಮಾಜವು

ಅವನತಿಯಲ್ಲಿ ಅಂತ್ಯವಾಗುವ ರೀತಿಯನ್ನು ನೋಡಬಹುದಾಗಿದೆ. ಸೂರಾಚಾರಿಯು ಶಿಲ್ಪಕಲೆಗಳನ್ನು ಜೀವನದ ನಿರ್ವಹಣೆಗಾಗಿ ಕೆತ್ತನೆ ಮಾಡಿದರೂ ವಾಸ್ತವವಾಗಿ ಗೌರಿಯ ಸೌಂದರ್ಯವನ್ನು ನೋಡಲಾರದೆ ಅವಕಾಶ ಸಿಕ್ಕಾಗ ತನ್ನ ವಿಕೃತ ಮನಸ್ಸಿನಿಂದ ಅವಳ ಸೌಂದರ್ಯ ಸಂಕೇತ ಎದೆಯ ಮೇಲೆ ತನ್ನ ಕ್ರೌರ್ಯವನ್ನು ಬೀರುತ್ತಾನೆ. ಸೌಂದರ್ಯದ ಪರಿಕಲ್ಪನೆ ಗೌರಿಯ ಗಂಡ ಸುಬ್ಬಯ್ಯನಿಗೆ ಇರುವುದಿಲ್ಲ. ಬದಲಾಗಿ ಅವಳ ಮಕ್ಕಳ ಸಾವಿನ ಬಗ್ಗೆ ಚಿಂತೆ. ಸೂರಾಚಾರಿಯು ಗೌರಿಯ ಮಕ್ಕಳ ಕಾಯಿಲೆಗೆ "ಮೊಲೆದೋಷ" ವೆಂದು ಬಗೆದು ಅದಕ್ಕೆ ಔಷಧಿಯಾಗಿ ಅದರ ಮೇಲಿನ ನೀಲಿ ನರದ ಮೇಲೆ ಅರಿಶಿಣ ಕೊಂಬನ್ನು ಕಾಯಿಸಿ ಸುಡಬೇಕು ಎಂದು ಪರಿಹಾರವನ್ನು ಹೇಳುವ ವ್ಯಕ್ತಿಯ ಮನಸ್ಸೆ ವಿಚಿತ್ರವಾಗಿರುವುದನ್ನು ಗ್ರಾಮೀಣ ಭಾಗದ ಸಹಜ ಬದುಕಿನಲ್ಲಿನ ಅನಾಹುತವನ್ನು ತಿಳಿಸಿದ್ದಾರೆ.

ನಗರದ ಶಿಕ್ಷಿತ ವರ್ಗದವರಿಗೂ ಮತ್ತು ಹಳ್ಳಿಯ ಸಾಮಾನ್ಯ ವರ್ಗದ ಜನತೆಗೂ ಇರುವ ವ್ಯತ್ಯಾಸಗಳನ್ನು "ಕುಬಿ ಮತ್ತು ಇಯಾಲ" ಕಥೆಯಲ್ಲಿ ಗಮನಿಸಬಹುದು. ಕುಬಿ ಒಬ್ಬ ವೈದ್ಯನಾಗಿ ಮಿಲಿಟರಿಯಲ್ಲಿ ಇದ್ದು ಬಂದವನು. ವೈಜ್ಞಾನಿಕ ಧೋರಣೆಗಳಿಗೆ ಮೂರ್ತ ಸ್ವರೂಪವನ್ನು ಕೊಡಲು ಪ್ರಯತ್ನಿಸಿ ಯಶಸ್ಸಾದರೂ ಜನ ಸಾಮಾನ್ಯರಲ್ಲಿ ಅವನು ದೇವರಾಗುವ ವ್ಯಂಗ್ಯ ಕಾಣುತ್ತದೆ.

ಡಾಕ್ಟರ್ ವಿ.ಎಸ್.ಕುಬೇರನಾಥನು ಭೈರಾಪುರವೆಂಬ ಕೊಂಪೆಯ ಸರಕಾರಿ ಆಸ್ಪತ್ರೆಯಲ್ಲಿ ವೈದ್ಯನಾಗಿರುತ್ತಾನೆ. ಆ ಊರಿನ ಸುತ್ತಾಮುತ್ತಾ ಹಳ್ಳಿಗಳಿಗೆ ಆ ಸರಕಾರಿ ಆಸ್ಪತ್ರೆಯೇ ಕೇಂದ್ರವಾಗಿರುತ್ತದೆ. ಹಳ್ಳಿಯಲ್ಲಿನ ಮುಗ್ಧ ಜನತೆಯು ನಂಬುವ ಮೌಢ್ಯ ವಿಚಾರಗಳು, ಸನ್ನಿವೇಶಗಳನ್ನು ರಾಜಕೀಯವಾಗಿ ದಾಳವಾಗಿ ಬಳಸಿಕೊಳ್ಳುವ ಪುಢಾರಿಗಳು ಈ ಕಥೆಯಲ್ಲಿ ಕಾಣಬರುತ್ತಾರೆ. ಇಯಾಲ ಸಾವು ರಾಜಕೀಯ ದಾಳವಾಗುವ ದುಸ್ಥಿತಿಯು ಭಾವನಾತ್ಮಕವಾಗಿ ಯೋಚಿಸುವ ಭಾರತೀಯರ ರಾಜಕೀಯ ಮನಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. "ಒಬ್ಬರ ವೆಚ್ಚ ಮತ್ತೊಬ್ಬರ ಆದಾಯವೆಂಬ" ಆರ್ಥಿಕ ಲೆಕ್ಕಾಚಾರದಂತೆ, ರಾಜಕೀಯ ಮಾಡುವವರಿಗೆ "ಒಬ್ಬರ ಸಾವು ಮತ್ತೊಬ್ಬ ರಾಜಕಾರಣಿಗೆ ವರದಾನವಾಗುವ" ಸ್ಥಿತಿಯನ್ನು ಕಥೆಯಲ್ಲಿ ಕಾಣಬಹುದು. ಇದಕ್ಕೆ ಪೂರಕ ಹಾಗೂ ವಿರುದ್ಧವಾಗಿ ನಡೆದು ಕೊಳ್ಳುವ ವ್ಯಕ್ತಿಗಳಾಗಿ ಅಧಿಕಾರಿ ಶಾಹಿವರ್ಗ ಕಾಣುತ್ತದೆ. ಅದರೆ ಬಲಿಪಶುಗಳಾಗುವುದು ಮಾತ್ರ ಸಾಮಾನ್ಯರೆಂಬುದು "ಕುಬಿ ಮತ್ತು ಇಯಾಲ" ಕಥೆಯಲ್ಲಿದೆ.

ಹಳ್ಳಿಯೊಂದು ನಗರದ ಮೂಲಭೂತ ಸೌಕರ್ಯಗಳನ್ನು ಪಡೆಯಲು ಹೋಗುವ ಸನ್ನಿವೇಶ ಮತ್ತು ಹಳ್ಳಿ ಹಾಗೂ ಕುಟುಂಬಗಳು ಹೊಂದಿಕೊಳ್ಳುವ ಕಥೆ "ತುಕ್ಕೋಜಿ"ಯಾಗಿದೆ. ಹೇಗೆಲ್ಲಾ ಒಂದು ಹಳ್ಳಿ ನಗರೀಕರಣವಾಗುತ್ತಾ ಬರುತ್ತದೆಂಬುದನ್ನು ಕಥೆಗಾರ ಕಥೆಯ

ಆರಂಭದಲ್ಲಿಯೇ ಪರಿಚಯಿಸುತ್ತಾನೆ. " ಗುರಗಳ್ಳಿ ಒಂದು ಕಾಲಕ್ಕೆ ಹಳ್ಳಿಯಾಗಿದ್ದಿತಾದರೂ ಇಡೀ ಅಖಂಡ ಭಾರತದ ವಿಕಾಸದೊಂದಿಗೇ ನಿಧಾನವಾಗಿ ಬೆಳೆದು ಬೆಳೆದು ಸಣ್ಣ ಪೇಟೆಯಾಯ್ತು. ಆಸ್ಪತ್ರೆ, ಬಸ್‌ನಿಲ್ದಾಣ, ಪೋಲೀಸ್‌ಸ್ಟೇಷನ್, ಪೋಸ್ಟಾಫೀಸು, ಒಂದು ಗುಡಾರದ ಸಿನೆಮಾ ಟಾಕೀಸ್ ಇತ್ಯಾದಿಗಳೆಲ್ಲಾ ಆದಮೇಲಂತೂ ಅದೊಂದು ಪೇಟೆ ಎನಿಸಿಕೊಳ್ಳಲು ಅನುರೂಪವಾದ ಜಾಗವಾಯ್ತು. ಈ ಧೂಳು, ಗುಜು ಗುಜು ಗಲಾಟೆಗಳ ನಡುವೆಯೇ ಇನ್ನೂ ಒಂದು ಚರಿತ್ರಾರ್ಹವಾದ ಘಟನೆ ನಡೆಯಿತು. ಹಾಸನ ಮಂಗಳೂರಿನ ರೈಲುಮಾರ್ಗ ಗುರಗಳ್ಳಿ ಮುಖಾಂತರವೇ ಹೋಗುವುದೆಂದು ನಿರ್ಣಯವಾಯ್ತು. ಹೇಮಾವತಿ ನದಿಗೆ ಇನ್ನೊಂದು ರೈಲು ಸೇತುವೆ, ಗುರಗಳ್ಳಿಯಲ್ಲಿ ಒಂದು ರೈಲು ನಿಲ್ದಾಣ ಇತ್ಯಾದಿಗಳು ಆಗಬೇಕಾಗಿತ್ತು. ಈ ಮುಖ್ಯವಾದುವಗಳ ನಡುವೆ, ಈ ನಾಗರೀಕತೆಯ ವಿಕಾಸಕ್ಕೆ ಸದ್ದಿಲ್ಲದೆ ಶ್ರಮಿಸುವ ಅನೇಕರೂ ಇದ್ದರು. ವಿದ್ಯಾರ್ಥಿಭವನದ ಹೋಟೆಲು ತಿಮ್ಮಪ್ಪಯ್ಯ ತನ್ನ ಅದ್ವಿತೀಯ ಮಸಾಲೆದೋಸೆ, ರವೆಇಡ್ಲಿ, ಗುಲಾಬ್ ಜಾಮೂನುಗಳಿಂದ ಆ ಊರಿನವರ ಹಾಗೂ ಅಸುಪಾಸಿನವರ ಜಿಹ್ವಾಶಕ್ತಿಯನ್ನೂ, ರುಚಿ ವಿವೇಕವನ್ನೂ ತಿನ್ನುತ್ತಿದ್ದನು. ಅವನ ಕಾಫಿ ತಯ್ಯಾರಿಕೆ ಕಾಫಿಯನ್ನು ದಾಟಿ ಸ್ಪೆಷಲ್ ಕಾಫಿ, ಡೀಲಕ್ಸ್ ಕಾಫಿ, ಸೂಪರ್ ಡೀಲಕ್ಸ್ ಕಾಫಿಯವರೆಗೆ ಮುಟ್ಟಿದ್ದಿತು. ಸ್ಟೂಡೆಂಟ ಹೇರ್ ಕಟಿಂಗ್ ಸೆಲೂನಿನ ಭಂಡಾರಿ ಕೃಷ್ಣ ಫಿಲಂಫೇರ್, ವೀಕ್ಲಿ, ಟೈಂಮ್ಸ್ ಆಫ್ ಇಂಡಿಯಾ ಮುಂತಾದವನ್ನೆಲ್ಲಾ ತರಿಸಿ ಕ್ಷೌರಕ್ಕೆ ಕುಳಿತು ಕಾಯುವವರಿಗೆ ಒದುಗಿಸುತ್ತಿದ್ದನು. ಹಳ್ಳಿಗರ ಕಾಡು ಕೂದಲನ್ನು ಆತ್ಯಾಧುನಿಕ ಶೈಲಿಗೆ ತೀಡಿ ತಿದ್ದಿ, ಬಾಚಣಿಗೆ ಹಿಂಬದಿಯಿಂದ ಒತ್ತಿ ಒತ್ತಿ ಒಂದು ತಾತ್ಕಾಲಿಕ ವಂಕಿಯನ್ನಾದರೂ ಕೇಶಶೈಲಿಯಲ್ಲಿ ರೂಪಿಸಿ ಹೊರಕ್ಕೆ ಬಿಡುತ್ತಿದ್ದನು."[೧೧]

"ತುಕ್ಕೋಜಿ" ಕಥೆಯಲ್ಲಿ ಆರಂಭವಾಗುವ ಮೇಲಿನ ಸಾಲುಗಳು ಹಳ್ಳಿಗಳು ನಗರದ ಕಡೆ ಮುಖ ಮಾಡುವ ಸಂದರ್ಭದಲ್ಲಿ ಆಗುವ ಸಣ್ಣ ಬದಲಾವಣೆಗಳನ್ನು ಕಾಣಬಹುದು. ಆಧುನಿಕತೆಯ ತೆಕ್ಕೆಗೆ ಹೋಗುವ ಹಳ್ಳಿಗಳಲ್ಲಿ ಜೀವನ ಶೈಲಿಯೇ ಬದಲಾವಣೆಯನ್ನು ಪಡೆಯುತ್ತದೆ. ಯಾಂತ್ರಿಕವೋ, ಕೃತ್ರಿಮವೋ, ಬದಲಾವಣೆಯಂತು ಪಡೆಯುತ್ತದೆ. ಬದುಕಿನ ದುಬಾರಿತನಕ್ಕೆ ಹೆಜ್ಜೆಯಾಕುವ ಸನ್ನಿವೇಶ ಕಥೆಯಲ್ಲಿ ಮೂಡಿ ಬರುತ್ತದೆ. ಶ್ರೀಮಂತ ನಗರಗಳು, ಶ್ರೀಮಂತ ದೇಶಗಳು, ಇಂತಹ ಪರಿಕಲ್ಪನೆಯಲ್ಲಿಯೇ ಹಂತಹಂತವಾಗಿ ಬದಲಾವಣೆಯನ್ನು ಪಡೆಯುತ್ತಾ ಸಾಗಿವೆ. ಸಾಗುತ್ತಿವೆ. ಇನ್ನೂ ಕೆಲವು ಸಾಗುತ್ತಲೇ ಇವೆ. ಇವುಗಳು ಮುಂದುವರೆದಂತೆ ತಮ್ಮ ಪ್ರಭಾವವನ್ನು ಸುತ್ತಮುತ್ತಲಿನ ಪ್ರದೇಶಗಳಿಗೆ, ದೇಶಗಳಿಗೆ ಬೀರುತ್ತಾ ಸಾಗುತ್ತವೆ. ಕೊಳ್ಳುಬಾಕ ಸಂಸ್ಕೃತಿಗೆ ದಾರಿ ಮಾಡಿಕೊಡುತ್ತವೆ.

ಗುರುಗಳ್ಳಿ ಭಾರತದಲ್ಲಿನ ನಗರೀಕರಣದ ಬದಲಾವಣೆಯನ್ನು ಹೊತ್ತು ತರುವ ಹಳ್ಳಿಯಾಗುವುದನ್ನು ಕಥೆಗಾರರು ಗುರ್ತಿಸುತ್ತಾರೆ. ತಿನ್ನುವ ಆಹಾರದಿಂದ ಹಿಡಿದು,

ತಲೆಯ ಕೇಶ ಶೈಲಿಯ ಬದಲಾವಣೆಯವರೆಗೆ ಹಳ್ಳಿ ಹೇಗೆ ಬದಲಾವಣೆಯನ್ನು ಪಡೆದು ಆಕರ್ಷಣೀಯ ನಗರವಾಗುತ್ತದೆ ಎಂಬುದನ್ನು ವಿವರಿಸಿದ್ದಾರೆ. ಕಥೆಯ ಮುಂದುವರೆದ ಭಾಗದಲ್ಲಿ ಈ ಬದಲಾವಣೆಯ ತಲ್ಲಣಗಳು ಕೌಟುಂಬಿಕವಾಗಿ ಪ್ರಭಾವ ಬೀರುವುದನ್ನು ತುಕ್ಕೋಜಿ- ಸರೋಜಳ ದಾಂಪತ್ಯದಲ್ಲಾಗುವ ವ್ಯತ್ಯಾಸಗಳನ್ನು ಸೃಷ್ಟಿಮಾಡುವುದನ್ನು ಕಥೆಯಲ್ಲಿ ಕಾಣಬಹುದಾಗಿದೆ.

ಅಬಚೂರಿನ ಬೋಬಣ್ಣನ ಸಾಂಸಾರಿಕ ಬದಲಾವಣೆಗಳು ಮತ್ತು ಗುರುಗಳ್ಳಿಯ ತುಕ್ಕೋಜಿಯ ಆದರ್ಶದ ಬದುಕಿನಲ್ಲಾಗುವ ಬದಲಾವಣೆಗಳು ಆಧುನಿಕತೆಯ ನಗರೀಕರಣ ಸೃಷ್ಟಿಮಾಡುವ ತಲ್ಲಣಗಳಿಗೆ ಸಾಕ್ಷಿಯಾಗುತ್ತವೆ.

ಭಾರತದ ಜೀವಾಳ ಗ್ರಾಮಗಳಲ್ಲಿ ಕಾಣಸಿಗುತ್ತದೆ ಎಂಬುದು ತೇಜಸ್ವಿಯವರ 'ಕಿರಗೂರಿನ ಗಯ್ಯಾಳಿಗಳು' ಮತ್ತು 'ಕೃಷ್ಣೇಗೌಡರ ಆನೆ' ಕಥೆಯನ್ನು ವಿಶ್ಲೇಷಣೆ ಮಾಡಿದಾಗ ನೋಡಬಹುದಾಗಿದೆ. ಗ್ರಾಮೀಣ ಭಾಗದ ಮಹಿಳೆಯರು ದೈಹಿಕ ಮತ್ತು ಮಾನಸಿಕವಾದ ಗಟ್ಟಿ ಮನುಷ್ಯರು. ಸ್ತ್ರೀ ಪ್ರಧಾನ ಸಮಾಜದ ವೈಶಿಷ್ಟ್ಯತೆಯನ್ನು ಪ್ರಧಾನವಾಗಿಟ್ಟುಕೊಂಡು ರಚನೆಯಾದ ಕಥೆ "ಕಿರಗೂರಿನ ಗಯ್ಯಾಳಿಗಳು".

ಸ್ತ್ರೀಯರ ದುಡಿಮೆ, ಅವರ ರಾದ್ಧಾಂತಗಳು, ಮಾನವೀಯ ನೆಲೆಯಲ್ಲಿ ಯೋಚಿಸುವ ರೀತಿ-ನೀತಿಗಳು ತೇಜಸ್ವಿಯವರ ವಿಭಿನ್ನ ಕಲ್ಪನೆಯಲ್ಲಿ ಮೂಡಿಬಂದ ಕಥೆಯಾಗಿದೆ. ಸಹಜವಾದ ಗ್ರಾಮೀಣ ಭಾಗದ ಮಾತುಕಥೆಗಳು, ಪ್ರಣಯ ಪ್ರಸಂಗಗಳು ಬದುಕಿನ ಅವಿಭಾಜ್ಯ ಅಂಗವೆಂಬಂತೆ ತೋರಿಸಿದ್ದಾರೆ. ಮುಂದುವರೆದಂತೆ ಜಾತಿಯ ವಿಚಾರವಾಗಿ ಪುರುಷರು ಯೋಚಿಸುವಷ್ಟು ಸ್ತ್ರೀಯರು ಯೋಚಿಸುವುದಿಲ್ಲ. ಪುರುಷರು ಪ್ರತೀಕಾರ ಹಿನ್ನೆಲೆಯಲ್ಲಿ ಯೋಚಿಸಿದರೆ, ಸ್ತ್ರೀಯರು ಮಾನವೀಯ ಮತ್ತು ಒಬ್ಬರಿಗೊಬ್ಬರು ಸಹಾಯ ಮಾಡುವ ಮನಸ್ಥಿತಿಯಲ್ಲಿ ನೋಡುತ್ತಾರೆ. ಸ್ಟೇಷನ್ ಪ್ರಕರಣದಲ್ಲಿ ಕಿರುಗೂರಿನ ಕೆಲ ಗಂಡಸರು ಹರಿಜನರಿಂದ ದೂರವಾಗ ತೊಡಗಿದರು. ಹೆಂಗಸರು ಮಾತ್ರ ಇವುಗಳ ಯಾವುದೇ ಪರಿವೇ ಇಲ್ಲದೆ ಸಹಜವಾಗಿ ಹರಿಜನ ಹೆಂಗಸರ ಜೊತೆ ಮಾತುಕತೆ ಇತ್ತು.

ಒಮ್ಮೆ ಹೆಬ್ಬಲಸಿನ ಮರ ಬಿದ್ದು ಉರುಳುತ್ತಾ ಹರಿಜನರ ಕೇರಿಯಲ್ಲಿ ಬರುತ್ತಿರಬೇಕಾದರೆ ಗೌಡರ ದಾನಮ್ಮ ಹರಿಜನರ ಕರಿಯಣ್ಣನ ತಾಯಿ ಮುದುಕಿಯನ್ನು ಉರುಳಿ ಬರುವ ಮರದಿಂದ ರಕ್ಷಣೆ ಮಾಡುತ್ತಾಳೆ. ಭಾರತದಂತಹ ಬಹು ಸಂಸ್ಕೃತಿಯ ದೇಶದಲ್ಲಿ ಜಾತಿ-ಧರ್ಮಗಳ ಹೊಂದಾಣಿಕೆಯ ಮಹತ್ವವನ್ನು ತೇಜಸ್ವಿಯವರು ಒಂದು ಕಥನ ರೂಪದಲ್ಲಿ ತಂದಿರುವುದು ಇವರ ಕಥಾ ಕೌಶಲ್ಯದ ವೈಶಿಷ್ಟ್ಯತೆಯ ಸಂಗತಿಯಲ್ಲಿ ಒಂದಾಗಿದೆ. ಸಹಜವಾದ ಬದುಕಿನ ಪ್ರಕ್ರಿಯೆ ಎಂಬಂತೆ ತೇಜಸ್ವಿಯವರ ಮತ್ತೊಂದು ಕಥೆ "ಕೃಷ್ಣೇಗೌಡನ ಆನೆ". ಗ್ರಾಮೀಣ ಭಾಗದಲ್ಲಿನ ಆಧುನಿಕತೆಯ ಆಗಮನದ ಎಡವಟ್ಟುಗಳನ್ನು ಗುರುತಿಸುತ್ತಾ

ಜಾತಿ–ಧರ್ಮಗಳನ್ನು ಪ್ರತಿಬಿಂಬಿಸುವ ವ್ಯಕ್ತಿಗಳನ್ನು ಸಹಜವಾದ ಕಥಾ ನಿರೂಪಣೆಯಲ್ಲಿ ತರುತ್ತಾರೆ. ಗೌರಿಯೆಂಬ ಆನೆಯ ವಿಚಾರಕ್ಕೆ ಸಂಬಂಧಿಸಿದಂತೆ ಕಥೆಯಲ್ಲಿ ವಿವರಣೆ ಬರುತ್ತದೆ. ಆ ಹಿನ್ನೆಲೆಯಲ್ಲಿ ನಡೆಯುವ ಘಟನೆಗಳು ಭಿನ್ನವಾಗಿ ಜರುಗಿದರೂ ಅವುಗಳು ಒಂದಕ್ಕೊಂದು ಹೆಣೆಯುತ್ತಾ ಅಂತಿಮವಾಗಿ 'ಕೃಷ್ಣೇಗೌಡರ ಆನೆ'ಯೇ ಎಲ್ಲಾ ಸಮಸ್ಯೆಗಳಿಗೆ ಕಾರಣವೆಂಬ ತೀರ್ಮಾನ ಭಾರತದ ದೇಶದಲ್ಲಿ ಸಹಜವಾದ ಪ್ರಕ್ರಿಯೆಯಾಗಿದೆ. ಈ ಕಥೆಯಲ್ಲಿ ಬರುವ ಜಬ್ಬಾರ್, ವೇಲಾಯುಧ ದುರ್ಗಪ್ಪರಂತಹ ವ್ಯಕ್ತಿಗಳು ಕೇವಲ ತಮ್ಮ ಇತಿಮಿತಿಯಲ್ಲಿಯೇ ಬದುಕುವ ದೌರ್ಭಾಗ್ಯ ಪರಿಸ್ಥಿತಿಗಳನ್ನು ಅನಾವರಣಗೊಳಿಸುತ್ತಾರೆ. ಅದರಲ್ಲೂ ಗ್ರಾಮೀಣ ಭಾಗದ ಮೂಕವೇದನೆಯ ಪ್ರತಿನಿಧಿಯಾಗಿ ಆನೆಯು ಕಂಡುಬರುತ್ತದೆ. ಗ್ರಾಮೀಣ ಜನರ ಜೀವನದಲ್ಲಿ ನಡೆಯುವ ಕುತೂಹಲಗಳ ಸಂಗತಿಗಳು, ನಿಗೂಢತೆಗಳು, ಆರೋಪ–ಪ್ರತ್ಯಾರೋಪಗಳನ್ನು ಹಾಸ್ಯಮಿಶ್ರಿತ ಅಷ್ಟೇ ಗಂಭೀರವಾಗಿ ಕಥೆಯ ಹಂದರದಲ್ಲಿ ತಂದಿದ್ದಾರೆ.

ಹಳ್ಳಿಯ ಜನರು ನಗರೀಕರಣ ಮನಸ್ಥಿತಿಯ ವಂಚನೆಗಳಿಂದ ದೂರವಾಗಿಲ್ಲ. ನಗರೀಕರಣದ ಬೆಳವಣಿಗೆಗೆ ಹಳ್ಳಿಯ ಪ್ರಾಕೃತಿಕ ಸಂಪತ್ತು ಆಧಾರ. ನಗರೀಕರಣದ ಜನರ ಹಸಿವನ್ನು ನೀಗಿಸುವುದು ಗ್ರಾಮೀಣ ಭಾಗದ ಜನರ ದುಡಿಮೆಯಿಂದ ದೊರೆತ ಫಸಲಿನಿಂದ. ಆದರೂ ನಗರೀಕರಣದಿಂದ ಹೆಚ್ಚಿನ ವಂಚನೆಗೆ ಒಳಗಾಗುತ್ತಿರುವುದು ಹಳ್ಳಿಯ ಜನತೆಯೆಂಬ ವಿಚಾರ ತೇಜಸ್ವಿಯವರ "ಮೂಡಿಗೆರೆ ಎಂಬ ಊರು" ಕಥೆಯಲ್ಲಿ ಕಾಣಬರುತ್ತದೆ. "ಮೂಡಿಗೆರೆ ದಟ್ಟ ಕಾಡಿನ ನಡುವಿನ ಪುಟ್ಟ ಊರು. ಆದರೆ ಈ ಪುಟ್ಟ ಊರಿನ ನಡುವೆ ಮನೆಯ ಸೂರುಗಳು ಕಿಕ್ಕಿರಿದು ಒತ್ತೊತ್ತಾದಂತೆ ದಟ್ಟ ಕಾಡು ವಿರಳವಾಗುತ್ತಾ ನಡಿದಿದೆ. ಒಬ್ಬ ಅರಣ್ಯಾಧಿಕಾರಿ ನನಗೆ ಹೇಳಿದ ಮೂಡಿಗೆರೆಯಿಂದ ಪ್ರತಿದಿನ ಒಂದು ಲಕ್ಷ ರೂಪಾಯಿ ಮರ ಕಳ್ಳ ಸಾಗಾಣಿಕೆಯಾಗುತ್ತದೆ ಎಂದು. ಕಳ್ಳಸಾಗಾಣಿಕೆಯಂಥ ಅವ್ಯವಹಾರಗಳನ್ನೆ ಜೀವನೋಪಾಯ ಮಾಡಿಕೊಂಡಿರುವ ಅದೇ ಜೀವನ ವೇದಾಂತವಾಗಿರುವ ಒಂದು ಉಪನಾಗರೀಕತೆಯೇ ಕಾಡಿನೊಳಗಿನ ಊರುಗಳಲ್ಲಿ ಬೆಳೆಯತೊಡಗಿದೆ. ಹೆಂಡತಿ ಮಕ್ಕಳು, ಮನೆಮಠ ಸಂಸಾರದ ಜವಾಬ್ದಾರಿ ಇಲ್ಲದ ಕೇರಳಿಯರ ಅನೇಕ ಗ್ಯಾಂಗುಗಳೇ ಈ ಅರಣ್ಯದ ನಡುವಿನ ಊರುಗಳಲ್ಲಿ ಕಾಲ ತಳ್ಳುತ್ತಿವೆ."[೨]

ಆಧುನಿಕ ಭಾರತದಲ್ಲಿ ಬಂಡವಾಳ ಶಾಹಿ ನಿರೂಪಿತ ಶಾಪಿಂಗ್ ಮಾಲ್‌ಗಳ ಆರ್ಭಟದಲ್ಲಿ ಗ್ರಾಮೀಣ ಮತ್ತು ಅರೆ ನಗರಗಳ ನಡುವಿನ ವ್ಯಾಪಾರಕೇಂದ್ರವೇ ಸಂತೆಯಾಗಿದೆ. ಜನಾಂಗದ ಜೀವಾಳ ಕೂಡ ಸಂತೆಯ ಒಂದು ಭಾಗವೇ ಆಗಿದೆ. ಬಹುರಾಷ್ಟ್ರೀಯ ಕಂಪನಿಗಳು ಸೃಷ್ಟಿಸುತ್ತಿರುವ ನಗರ ಮತ್ತು ಕಂದಕಗಳಲ್ಲಿ ವ್ಯಾಪಾರ ವಹಿವಾಟು ಕೂಡ ಒಂದಾಗಿದೆ. ಸಂತೆಯಂಥ ವ್ಯಾಪಾರ ಕೇಂದ್ರಗಳು ಸ್ವ ಉದ್ಯೋಗ ಸೃಷ್ಟಿಯ ಜೊತೆಗೆ ಜಂಡರ್

ಸಮಸ್ಯೆಗೆ ಪರಿಹಾರವನ್ನು ನೀಡುವ ಕೆಲಸವನ್ನು ಮಾಡುತ್ತಿದ್ದವು. ಆಧುನಿಕ ಭಾರತೀಯ ಅರ್ಥವ್ಯವಸ್ಥೆಯಲ್ಲಿ ಇಂದು ನಿರುದ್ಯೋಗ ಮತ್ತು ಜಂಡರ್ ಸಮಸ್ಯೆ ಸರ್ವೇಸಾಮಾನ್ಯವಾಗಿದೆ. ಆಧುನಿಕ "ಶಾಪಿಂಗ್ ಮಾಲ್‌ಗಳಲ್ಲಿ ಮಾತು ಕಡಿಮೆ ವಸ್ತುಗಳ ಪಟ್ಟಿ ದರದ ಫಲಕಗಳು ಹೆಚ್ಚು." ಚೌಕಾಶಿಗೆ ಗ್ರಾಹಕನಿಗೆ ಅವಕಾಶವಿಲ್ಲ. ಆದರೆ ಮಾಲ್‌ಗಳೇ ಡಿಸ್ಕೌಂಟ್ ರೂಪದಲ್ಲಿ ವಸ್ತುಗಳ ಬೆಲೆಯನ್ನು ಆಕರ್ಷಣೀಯ ಬೆಲೆ ಇರುವಂತೆ ಬಿತ್ತರಿಸುತ್ತಾರೆ. ಹವಾನಿಯಂತ್ರಣ ದಲ್ಲಿನ ಮಾಲ್‌ಗಳು ಅಂಥೂ ಮುಂದುವರೆದ ನಗರಗಳಲ್ಲಿ ಸ್ವರ್ಗವನ್ನು ಸೃಷ್ಟಿವಂತೆ ಶೃಂಗಾರಗೊಂಡಿರುತ್ತವೆ. ಇದಕ್ಕೆ ಭಿನ್ನವಾಗಿ ಓದು ಬರಹ ಬಾರದಿದ್ದರೂ ವ್ಯಾಪಾರದ ಕೌಶಲ್ಯ ಗ್ರಾಮೀಣರಲ್ಲೂ ಇದೆ ಎಂಬುದನ್ನು ತೇಜಸ್ವಿಯವರು ಹಾಸ್ಯಮಿಶ್ರಿತ ಆದರೆ ಗಾಂಭೀರವಾಗಿ ಯೋಚಿಸುವ "ಸಂತೆ" ಎಂಬ ಕಥೆಯನ್ನು ಓದುಗನಿಗೆ ನೀಡಿದ್ದಾರೆ. ದೈನಂದಿಕ ಜೀವನದಲ್ಲಿನ ಎಚ್ಚರಿಕೆಯ ವ್ಯಾಪಾರ ಬದುಕನ್ನು ತೋರಿಸಿದ್ದಾರೆ.

"ಸಂತೆಯಲ್ಲಿ ಚೌಕಾಶಿ ಮಾಡುವುದೆಂದರೆ ಅದೊಂದು ಮನಃಶಕ್ತಿಯ ಮಲ್ಲಯುದ್ಧವೇ ಸರಿ. ಬೇಡಿಕೆ ಎಷ್ಟಿದೆ? ಸರಬರಾಜು ಎಷ್ಟಿದೆ? ಮುಂತಾದ ಮಾರುಕಟ್ಟೆಯ ಒತ್ತಡಗಳಿಗೆ ಯಾವ ರೀತಿಯ ಸಂಬಂಧಪಡದ ಒಂದು ವಿಚಿತ್ರ ಮತ್ತು ಅಸಂಬದ್ಧ ಜಗಳ ಅದು. "ಎಷ್ಟಯ್ಯ?" ಎಂದು ರೇಟು ಕೇಳಿ, ಅವನು ರೇಟು ಹೇಳಿದ ಕೂಡಲೆ ನೀವು ಹೃದಯಸ್ತಂಭನವಾದವರಂತೆ ನಟಿಸಬೇಕು! ನೀವು ಕೇಳಿದ ರೇಟಿಗೆ ಕೊಡದಿದ್ದರೆ ಚೌಕಾಶಿ ಮುಂದುವರಿಸುತ್ತಿದ್ದೀರೆನ್ನುವ ಹಾಗೆ ನಟನೆ ಮಾಡಬೇಕು. ಮಾರುವವನಂತೂ ನೀವು ಕೊಡುವ ದುಡ್ಡಿಗೆ ಏನೂ ಬೆಲೆ ಇಲ್ಲವೆನ್ನುವುದನ್ನು ಸಾಕ್ಷ್ಯಾಧಾರ ಸಹಿತ ನಿಮಗೆ ಮನದಟ್ಟು ಮಾಡಿಸುತ್ತಾನೆ. ನಿಮ್ಮ ರೇಟು ಕೇಳಿದ ಕೂಡಲೆ ಅತ ನಿಮ್ಮನ್ನು ಆಜನ್ಮ ವೈರಿಯಂತೆ ನೋಡುತ್ತ, ನೀವು ಪುರಾತನ ಕಾಲದ ಪಳೆಯುಳಿಕೆಯೋ ಅಥವಾ ಯಾವುದೋ ಕೊಂಪೆ ಊರಿನಿಂದ ಬಂದಿರುವ ಬೆಂತರವೋ ಎಂದು ಶಂಕೆ ವ್ಯಕ್ತಪಡಿಸುತ್ತಾನೆ...........ಈ ಚೌಕಾಶಿ ವ್ಯವಹಾರದಲ್ಲಿ ಗಂಡಸರಿಗಿಂತ ಹೆಂಗಸರು ಹೆಚ್ಚು ಕುಶಲಿಗಳೆಂದು ಕಾಣುತ್ತದೆ. ಸಂತೆಗಳಲ್ಲಿ ಅವರದೇ ಹೆಚ್ಚು ದರ್ಪ ದರಬಾರು. ಕೆಲವು ಹೆಂಗಸರು ಚೌಕಾಶಿ ಮಾಡುವ ಗಿರಾಕಿಗಳು ಕೊಂಚ ಮರ್ಯಾದಸ್ತರ ತರ ಕಂಡರೆ ಸ್ವಲ್ಪ 'ಎ' ಸರ್ಟಿಫಿಕೇಟ್ ಅರ್ಥ ಧ್ವನಿಸುವಂಥ ಮಾತುಗಳನ್ನು ಸಹ ಆಡಿ ಗಿರಾಕಿಗಳ ವದನ ನಾಚಿಕೆಯಿಂದ ಕೆಂಪಾಗಿ ಅವರು ಆದಷ್ಟು ಬೇಗ ದುಡ್ಡು ಕೊಟ್ಟು ಪರಿಸ್ಥಿತಿಯಿಂದ ಪಾರಾಗಲು ಹವಣಿಸುವಂತೆ ಮಾಡುತ್ತಾರೆ." [೧೩]

ತೇಜಸ್ವಿಯವರ ಕಥೆಗಳಂತೆ ಗ್ರಾಮೀಣ ಭಾಗದ ಜನ ಜೀವನದ ಸ್ವರೂಪವನ್ನು ಲಂಕೇಶರ ಕಥೆಗಳಲ್ಲಿ ಕಾಣಬಹುದಾಗಿದೆ. ಭಾರತದಲ್ಲಿನ ಸ್ವಾತಂತ್ರ್ಯ ಮತ್ತು ಸ್ವಾತಂತ್ರ್ಯೋತ್ತರದ ಸಮಾಜದಲ್ಲಿನ ಗ್ರಾಮಗಳು ಸಾಕಷ್ಟು ಬದಲಾವಣೆ ಹೊಂದಿರುವುದು ಕಥೆಗಾರರ ಕಥೆಗಳಲ್ಲಿ ಮೂಡಿಬಂದಿವೆ. ಆಧುನಿಕತೆಯು ಸ್ವಾತಂತ್ರ್ಯೋತ್ತರದ ದಿನಗಳಲ್ಲಿ

ಗ್ರಾಮೀಣ ಸಮಾಜದಲ್ಲಿನ ದೈನಂದಿಕ ಬದುಕಿನಲ್ಲಿ ಸಾಕಷ್ಟು ಪ್ರಭಾವವನ್ನು ಬೀರಿತು. ಸಾಂಪ್ರಾದಾಯಿಕ ಬದುಕು ಮತ್ತು ಪರಂಪರೆಯು ಬದಲಾವಣೆಯನ್ನು ಪಡೆಯುತ್ತಾ ಬಂದಿರುವುದನ್ನು ಲಂಕೇಶರ ಕಥೆಗಳಲ್ಲಿ ನೋಡಬಹುದಾಗಿದೆ. ಗ್ರಾಮೀಣ ಭಾಗದ ಜನರ ಜೀವನದಲ್ಲಿನ ತಮ್ಮದೇ ಆದ ನಂಬಿಕೆ, ಬದುಕಿನ ರೀತಿನೀತಿಗಳು ಕಾಲಕ್ರಮೇಣ ಕಣ್ಮರೆಯಾಗುತ್ತಿರುವುದನ್ನು ಅವರ ಕಥೆಗಳಲ್ಲಿ ಕಾಣಬಹುದಾಗಿದೆ.

ನಗರ ಕೇಂದ್ರಿತ ಬದುಕು ದೂರದಲ್ಲಿ ಆಕರ್ಷಣೆಯಾಗಿ ಕಂಡರೂ ವಾಸ್ತವದಲ್ಲಿ ಆರ್ಥಿಕ ಲಾಭವಿಲ್ಲದೆ ಹೋದರೆ ಆ ಬದುಕು ದುಸ್ತರವಾಗಿರುತ್ತದೆ. ಕಥೆಯಲ್ಲಿನ ಕಾಲೇಜಿನ ಉಪನ್ಯಾಸಕ, ಕ್ರಾಂತಿಕಾರಿ ಮನಸ್ಸಿನ ವಿಮರ್ಶಕನಾದರೂ ಕನಿಷ್ಠ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳುವಷ್ಟು ಸಂಬಳವಿರದವನು. ಆದರೆ ಅವನ ಮಾತುಗಳಲ್ಲಿ ಮಾತ್ರ ಆತ್ಮ ವಿಶ್ವಾಸ ಮತ್ತು ಕ್ರಾಂತಿಕಾರಿ ಚಿಂತನೆಯು ಹೊರಡುತ್ತಿರುತ್ತದೆ. ಕ್ಷೌರಿಕನೊಬ್ಬನಿಗೆ ಸಾಲದ ರೂಪದಲ್ಲಿ ಹದಿನೈದು–ಹತ್ತು–ಕೊನೆಗೆ ಐದು ರೂಪಾಯಿಯನ್ನು ಕೊಡಲಾರಷ್ಟು ಆರ್ಥಿಕ ಸಂಕಟವನ್ನು ಅನುಭವಿಸುವ ವ್ಯಕ್ತಿಯಾಗಿರುತ್ತಾನೆ. ನಗರ ಪ್ರದೇಶದ ಮಧ್ಯಮ ಮತ್ತು ಕೆಳವರ್ಗದವರ ಬದುಕು ಕುಟುಂಬವನ್ನು ನಿರ್ವಹಿಸಲು ಸದಾ ಕಷ್ಟಕರವಾಗಿರುತ್ತದೆ ಎಂಬುದನ್ನು ಲಂಕೇಶರ ಈ ಕಥೆಯಲ್ಲಿ ನೋಡಬಹುದು.

ಲಂಕೇಶರ "ಒಬ್ಬಂಟಿ" ಕಥೆಯೂ ಗ್ರಾಮೀಣ ಬದುಕಿನಲ್ಲಿ ಮಾತಿನ ಮೂಲಕ ನಂಬಿರುವ ಮೌಲ್ಯಗಳು ಕಾಲಕ್ರಮೇಣ ನಾಶವಾಗುವುದನ್ನು ತರುತ್ತಾರೆ. ಮಂಜಣ್ಣನೆಂಬ ಕಥೆಯಲ್ಲಿನ ವ್ಯಕ್ತಿ ಮೇಲ್ವರ್ಗದವನಾದರೂ ದುಡಿಮೆಯನ್ನು ನಂಬಿ ಕಷ್ಟ ಪಟ್ಟು ದುಡಿದು ಹಣ ಸಂಪಾದನೆ ಮಾಡಿರುತ್ತಾನೆ. ಇಂಥವನ ಬಳಿ ಕೆಳಜಾತಿಯ ಸೋಮಾರಿ ಭಜ್ಯನಿಗೆ ಯಾವ ದಾಖಲೆಯನ್ನು ಇಲ್ಲದೆ ಮಗಳ ಮದುವೆಗಾಗಿ ಐನೂರು ರೂಪಾಯಿಗಳನ್ನು ಸಾಲವಾಗಿ ಮಾತಿನ ಮೇಲಿನ ನಂಬಿಕೆಯಿಂದ ಕೊಟ್ಟಿರುತ್ತಾನೆ. ಆದರೆ ಊರಿನಲ್ಲಿರುವ ಸಹಜವಾದ ತಿರಸ್ಕಾರ, ಸಿನಿಕತನ, ಕೇಡು ಮನುಷ್ಯತ್ವದ ವ್ಯಕ್ತಿಗಳು ಮಂಜಣ್ಣನ ಬೆಳವಣಿಗೆಯನ್ನು ಸಹಿಸದೆ ಅವನ ವಿರುದ್ಧ ನಿಲ್ಲುತ್ತಾರೆ. ಭಜ್ಯನು ತಾನು ಯಾವುದೇ ರೂಪದ ಹಣ ಪಡೆಯಲಿಲ್ಲವೆಂದು ನ್ಯಾಯದ ಮುಂದೆ ಸುಳ್ಳನ್ನು ಹೇಳುತ್ತಾನೆ. ಇದರಿಂದ ಮಂಜಣ್ಣನಿಗೆ ಅವಮಾನ ಮತ್ತು ನೋವು ಸಂಭವಿಸುತ್ತವೆ. ದುರದೃಷ್ಟವಶಾತ್ ಮಗ ಶಿವಲಿಂಗನು ಕೂಡ ಅಪ್ಪನ ವಿರೋಧಿ ವ್ಯಕ್ತಿಗಳ ಗುಂಪನ್ನು ಸೇರುತ್ತಾನೆ. ದುಃಖದಲ್ಲಿಯೇ ಅಂತಿಮವಾಗಿ ಮಂಜಣ್ಣ ಸಾಯುತ್ತಾನೆ. ವ್ಯಕ್ತಿವ್ಯಕ್ತಿಗಳ ನಡುವಿನ ಕೊಡುಕೊಳ್ಳುವಿಕೆಯ ಅನಾಹುತಗಳ ಪರಿಣಾಮವನ್ನು ಲಂಕೇಶರು ಈ ಕಥೆಯಲ್ಲಿ ಓದುಗನಿಗೆ ನೀಡುತ್ತಾರೆ. ಸಹಜವಾದ ನಂಬಿಕೆಗಳು ಮನುಷ್ಯನ ದುರಾಸೆಯಿಂದ ನಾಶವಾಗುವ ಸ್ಥಿತಿಯನ್ನು ಈ ಕಥೆಯಲ್ಲಿ ಕಾಣಬಹುದು. ಗ್ರಾಮೀಣ ಬದುಕು ಕೆಲವೊಮ್ಮೆ ಅರ್ಥರಹಿತವಾಗಿ ನಡೆಯುತ್ತದೆ ಎಂಬುದು ಈ ಕಥೆಯ ಮೂಲಕ ತಿಳಿಯಬಹುದಾಗಿದೆ.

ಯುವ ಮನಸ್ಸಿನ ನವತರುಣರಿಗೆ ಬದುಕಿನ ಬಗ್ಗೆ ತಮ್ಮ ಪೂರ್ವಜರ ಹೋರಾಟಗಳು ಕೆಲವೊಮ್ಮೆ ಅರ್ಥಹೀನವಾಗಿ ಕಾಣುತ್ತವೆ. ಅವರಿಗೆ ಆ ಕ್ಷಣದ ಬದುಕು ಸ್ಫೂರ್ತಿ, ರೋಮಾಂಚನಗೊಳ್ಳುವ ಸನ್ನಿವೇಶಗಳನ್ನು ಸೃಷ್ಟಿಸುತ್ತದೆಯೇ ಹೊರತು ಯಾವುದೇ ಪೂರ್ವಜರ ಮೌಲ್ಯಗಳ ಬಗ್ಗೆ ತಿಳಿಯದವರಾಗಿರುತ್ತಾರೆ ಎಂಬ ಉದಾಹರಣೆ "ಕೊನೆ" ಕಥೆಯಲ್ಲಿ ಕಾಣಬರುತ್ತದೆ. ಸೋಮಾರಿ ಯುವ ಮನಸ್ಸುಗಳು ಮತ್ತು ಪರಿಪಕ್ವತೆಯ ಕಡೆ ಹೊರಟ ಹಿರಿಯ ಮನಸ್ಸುಗಳ ನಡುವಿನ ಘರ್ಷಣೆಯನ್ನು ಈ ಕಥೆಯಲ್ಲಿ ನೋಡಬಹುದಾಗಿದೆ.

ಹಳ್ಳಿಯ ಯುವಕ ಉಜ್ಜ ನಗರಕ್ಕೆ ಓದಲು ಹೋಗುತ್ತಾನೆ. ಆತನ ಅವಿವೇಕತನಗಳು, ಕ್ಷಣ ಕಾಲದ ಯೌವನದ ಬಯಕೆ, ಚಪಲಗಳಿಗೆ ಒಳಗಾಗಿ ಓದುವಿಕೆಯಿಂದ ವಿಮುಖನಾಗುತ್ತಾನೆ. ಕೊನೆಗೆ ಚಟಗಳಿಗೆ ಬಲಿಯಾಗಿ ಕೈಯಲ್ಲಿ ಕಾಸು ಇಲ್ಲದಾಗ ಮರಳಿ ಗ್ರಾಮಕ್ಕೆ ವಾಪಸ್ಸಾಗುತ್ತಾನೆ. ಮನೆಯಲ್ಲಿ ಕೃಷಿಗೆ ಸಹಾಯಕನಾಗಿ ನಿಲ್ಲುವ ಬದಲು ತಂದೆಗೆ ಭಾರವಾಗುತ್ತಾನೆ. ತಂದೆಯ ಜೊತೆಗಿನ ಜಗಳದಿಂದ ಸಾಯಲು ಹೋಗುತ್ತಾನೆ. ಇರುವ ಬದುಕನ್ನು ಬಿಟ್ಟು ಅವಾಸ್ತವಿಕ ನೆಲೆಗಟ್ಟಿನ ಬದುಕನ್ನು ಸೋಮಾರಿಯಾದ ಉಜ್ಜನು ಅಪ್ಪಿಕೊಳ್ಳುವ ಪ್ರಸಂಗ ಬಹುಪಾಲು ಯುವ ವ್ಯಕ್ತಿಗಳ ಸಹಜವಾದ ನಡವಳಿಕೆಯಾಗಿರುವುದನ್ನು ಲಂಕೇಶರು ಈ ಕಥೆಯಲ್ಲಿ ಹೇಳಿದ್ದಾರೆ. ಗ್ರಾಮೀಣ ಭಾಗದ ಯುವಕರು ದುರಂತಕ್ಕೆ ಬಲಿಯಾಗುವುದು ಆಧುನಿಕತೆಯ ನಗರೀಕರಣದ ಆಕರ್ಷಕ ಬದುಕಿನಿಂದ ಎಂದು ಹೇಳಬಹುದು. ಆದರೂ ಆ ವಯಸ್ಸಿನ ಅಪಕ್ವತೆಯ ಮನಸ್ಸಿನಿಂದ ಮತ್ತು ಬೇಜಾಬ್ದಾರಿ ನಡವಳಿಕೆಗಳೇ ಹೆಚ್ಚಾಗಿರುತ್ತವೆ. ಇಂಥ ಘಟನೆಗಳು ಸ್ಪಷ್ಟವಾದ ಉದ್ದೇಶ ಮತ್ತು ಗುರಿಯಿಲ್ಲದೆ ನಗರಕ್ಕೆ ವಲಸೆ ಹೋಗುವ ಯುವಕರಲ್ಲಿ ಹೆಚ್ಚಾಗಿ ಜರುಗುತ್ತವೆ.

ನಗರ ಕೇಂದ್ರಿತ "ನಿವೃತ್ತರು", "ನಾನಲ್ಲ", "ಅಸ್ವಸ್ಥರು" "ರೊಟ್ಟಿ" ಕಥೆಗಳು ವ್ಯಕ್ತಿಗಳ ಅಹಂ, ತಿರಸ್ಕಾರ ಮತ್ತು ಅಸಹಜವಾದ ಬದುಕನ್ನು ತೋರಿಸುತ್ತವೆ. ವಯಸ್ಸಾಗಿ ಕೆಲಸದಿಂದ ನಿವೃತ್ತರಾಗುವ ವ್ಯಕ್ತಿಗಳ ಇಳಿವಯಸ್ಸಿನ ಬದುಕು ಕೂಡ ಅಹಂನಿಂದಲೇ ಕಾಣುವ ರೀತಿಯನ್ನು "ನಿವೃತ್ತರು" ಕಥೆಯಲ್ಲಿ ನೋಡಬಹುದಾಗಿದೆ. ರಸ್ತೆಯಲ್ಲಿನ ವ್ಯಕ್ತಿಯ ಸಾವು ಅನಾಥವಾಗಿರುತ್ತದೆ. ಎಷ್ಟೋ ಬಾರಿ ಅವುಗಳ ಬಗ್ಗೆ ಕುತೂಹಲ ಬೆಳೆದರು ಸಹಾಯಕ್ಕೆ ಮುಂದಾಗುವುದಿಲ್ಲವೆಂಬ ಮನಸ್ಥಿತಿಯ "ನಾನಲ್ಲ" ಕಥೆಯಾಗಿದೆ. ನಗರ ಕೇಂದ್ರಿತ ಕುಟಂಬಗಳಲ್ಲಿ ಗಂಡ-ಹೆಂಡತಿಯ ಜಗಳಗಳು ಸಾವಿನ ದವಡೆಗೆ ಕೊಂಡೊಯ್ಯ ಬಲ್ಲವಾಗಿರುತ್ತವೆ ಎಂಬುದನ್ನು "ಅಸ್ವಸ್ಥರು" ಕಥೆಯಲ್ಲಿ ಕಾಣಬಹುದು. ಇಲ್ಲಿ ಮತ್ತೊಂದು ಸನ್ನಿವೇಶವೂ ಎದುರಾಗುತ್ತದೆ. ಗಂಡಹೆಂಡತಿಯನ್ನೇ ಅನುಮಾನಿಸುವ ವರ್ಗವೊಂದು

ಕಾಣುತ್ತದೆ. ವ್ಯಕ್ತಿಯನ್ನು ವೈದ್ಯಕೀಯವಾಗಿ ಕಾಪಾಡುವ ವ್ಯಕ್ತಿಗಳೇ ಪರಿಸ್ಥಿತಿಯ ಲಾಭವನ್ನು ಪಡೆಯುವ ಸನ್ನಿವೇಶ ಎದುರಾಗುತ್ತದೆ. ಹಾಗೆಯೇ ಪರಿಸ್ಥಿತಿಯ ಲಾಭವನ್ನು ಪಡೆದುಕೊಂಡು ತನ್ನ ಕಾಮನೆಗಳನ್ನು ತೀರಿಸಿಕೊಳ್ಳಲು ಯತ್ನಿಸುವ "ರೊಟ್ಟಿ" ಕಥೆಯೂ ಕೂಡ ವಿಭಿನ್ನವಾಗಿ ನಗರದ ಬದುಕುನ್ನು ತೆರೆದಿಡುತ್ತದೆ.

ನಗರ ಕೇಂದ್ರಿತ ಬದುಕು ಸಹಜವಾಗಿ ಸನ್ನಿವೇಶವನ್ನು ಎದುರಿಸಲಾರದೆ ಹೋಗುವ ಪರಿಸ್ಥಿತಿಯನ್ನು ಲಂಕೇಶರ "ನಾನಲ್ಲ" ಕಥೆಯಲ್ಲಿ ಕಾಣಬಹುದಾಗಿದೆ. "ನಡು ರಸ್ತೆಯಲ್ಲಿ ಬಿದ್ದಿರುವ ಹೆಣ. ಖಡ್ಗ ಝಳಪಿಸುವ ಸೂರ್ಯ. ಅಲ್ಲೊಬ್ಬರು ಇಲ್ಲೊಬ್ಬರು ಓಡಾಡುತ್ತಿದ್ದಾರೆ. ಒಬ್ಬರ ಮುಖ ಒಬ್ಬರು ನೋಡುತ್ತಿಲ್ಲ. ಯಾರು ನಿಲ್ಲುತ್ತಿಲ್ಲ. ಬರುತ್ತಿರುವ ರಿಕ್ಷಾ ಕೊಂಚ ವೇಗ ತಗ್ಗಿಸಿ, ಮಗ್ಗುಲಿಗೆ ಸರಿದು ಹೋಗುತ್ತಿದೆ. ಬಸ್ಸು ಕೂಡ. ವ್ಯಕ್ತಿಯ ಮುಖ ಕಾಣುತ್ತಿಲ್ಲ– ಉದ್ದಕ್ಕೆ, ಬೋರಲಾಗಿ ಅರ್ಧ ಬತ್ತಲೆಯಾಗಿ ಬಿದ್ದಿದೆ. ನನಗೆ ಅಲ್ಲಿ ನಿಲ್ಲಲಾಗಲಿಲ್ಲ. ಯಾರನ್ನಾದರೂ ವಿಚಾರಿಸೋಣವೆನ್ನಿಸಿತು– ಆದರೆ ನಾನೊಬ್ಬ ಸಿಐಡಿ ಇರಬೇಕೆನ್ನುವ ರೀತಿಯಲ್ಲಿ, ಕ್ರೂರವಾಗಿ ಮೂತಿ ಬಿಗಿದುಕೊಂಡು, ಯಾಕೆ ಉಸಾಬರಿ ಅನ್ನುವ ಥರ ಹೋಗುತ್ತಿದ್ದಾರೆ. ಚರ್ಚೆಯಿಲ್ಲ. ಆಸಕ್ತಿಯಿಲ್ಲ, ಗಮನವಿಲ್ಲ. ಯಾರು ಎಂಥವರೋ ನಾಳೆ ಏನೋ ಹೋಗಿ, ಏನೋ ಆದರೆ, ಕೋರ್ಟಿನಲ್ಲಿ ನಿಲ್ಲುವ ಹಾಗಾದರೆ, ಜೈಲಿಗೆ ಹೋಗುವ ಗತಿ ಬಂದರೆ...ಯಾಕಪ್ಪ ಬೇಕು ತರಲೆ, ಅನ್ನುವಂತೆ ತಲೆ ತಗ್ಗಿಸಿಕೊಂಡು, ತಲೆ ತಪ್ಪಿಸಿಕೊಂಡು ಹೋಗುವವರಂತೆ ಮನೆಯಲ್ಲಿ ಇದ್ದದ್ದು ತಿಂದು ಆಫೀಸಲ್ಲಿ ವಿಧೇಯವಾಗಿ ದುಡಿದು, ಭಾರತದ ಸತ್ಪ್ರಜೆ ಅನ್ನಿಸಿಕೊಳ್ಳುವುದು ಬಿಟ್ಟು ಆ ಹೆಣದ ಹತ್ತಿರ ಹೋಗೋಣ, ಜನ ಪ್ರಶ್ನೆ ಹಾಕೋಣ, ಪೋಲೀಸರು ಹಿಡಿದುಕೊಳ್ಳೋಣ, ಅನ್ನುವಂತೆ ಹೋಗುವ ಜನ. ನನ್ನ ಗಮನಕ್ಕೆ ಎಲ್ಲಿಯ ಅವಕಾಶ. ಒಂದು ಪಕ್ಷ ಆ ವ್ಯಕ್ತಿಯನ್ನು ಮುಟ್ಟಿದೆ ಅಂತ ಇಟ್ಟುಕೊಳ್ಳೋಣ. ಸತ್ತಿರುವುದು ಖಚಿತವಾಗುತ್ತದೆ, ಅಷ್ಟೆ. ನಾನೇನು ಅವನನ್ನು ಎತ್ತಲಾದೀತೆ– ಶವ ತುಂಬ ಭಾರವಿರುತ್ತದೆ. ಯಾಕಪ್ಪ ಬೇಕು? ಬೀದಿಯಲ್ಲಿ ಹೋಗುವ ಮಾರಿ ಒಳಗೆ ಕರೆದುಕೊಳ್ಳುವುದು ಯಾಕಪ್ಪ?"[೧೪]. ವ್ಯಕ್ತಿಯ ಪಲಾಯನವಾದವನ್ನು "ನಾನಲ್ಲ" ಕಥೆಯಲ್ಲಿ ನೋಡಬಹುದು. ನಗರದ ಜಂಜಾಟದ ಬದುಕಿನಲ್ಲಿ ಯಾರ ನೋವು, ಅಸಹನೆಗಳು ಮತ್ತೊಬ್ಬರಿಗೆ ಕಾಣುವುದಿಲ್ಲ. ಒಂದು ವೇಳೆ ಕಂಡರೂ ಸಹಾಯಕ್ಕೆ ಮುಂದಾಗುವುದಿಲ್ಲವೆಂಬುದು ಈ ಕಥೆಯಲ್ಲಿ ಅನಾವರಣಗೊಂಡಿದೆ. "ಕುರುಡು ಕಾಂಚಾಣ" ಕಥೆಯಲ್ಲಿ ಹಣದ ಸಹಾಯವಾಗದೇ ಇರುವುದು, ಹಾಗೆಯೇ ಸತ್ತ ವ್ಯಕ್ತಿಯ ಕಳೇಬರದ ವಿಚಾರದಲ್ಲಿ ಕನಿಷ್ಟ ಮಾನವೀಯತೆ ಇರದೆ ತಿರಸ್ಕಾರದ ಸಮಾಜದ ಮುಖವನ್ನು ಲಂಕೇಶರು ಅನಾವರಣಗೊಳಿಸಿದ್ದಾರೆ.

ನಗರದ ದೈನಂದಿಕ ಬದುಕಿನಲ್ಲಿ, ದಿಕ್ಕು ದೆಸೆಯಿಲ್ಲದ ಹೆಣ್ಣುಮಕ್ಕಳು ಹೊಟ್ಟೆ ಪಾಡಿಗೆ ಅನಿವಾರ್ಯವಾಗಿ ವೇಶ್ಯೆವಾಟಿಕೆಯಲ್ಲಿ ತೊಡಗಿಸಿಕೊಳ್ಳುವ ಪರಿಸ್ಥಿತಿ ಲಂಕೇಶರ ಎರಡು

ಪ್ರಮುಖ ಕಥೆಗಳಲ್ಲಿ ಉದಾಹರಣೆಯಾಗಿ ಕಂಡುಬರುತ್ತವೆ. "ಸೆಪ್ಟೆಂಬರ್ ಪ್ರಥಮ ರಾತ್ರಿ"ಯ ಶಾಂತ. "ಗುತ್ತಿ ಗೀತ ಆದದ್ದು" ಕಥೆಯ ಗುತ್ತಿ. ಇಬ್ಬರ ಬದುಕಿನಲ್ಲೂ ದೇಹವೇ ವ್ಯಾಪಾರವಾಗುತ್ತದೆ. ಶಾಂತ ದೈಹಿಕವಾಗಿ ತನ್ನನ್ನು ಮಾರಾಟ ಮಾಡಿಕೊಂಡು ಬದುಕಿದರೆ, ಅನಿವಾರ್ಯವಾಗಿ ಗುತ್ತಿ ನಗರದ ಆಗಂತುಕ ಸಮಾಜಕ್ಕೆ ನೂಕಲ್ಪಟ್ಟವಳು. ಕೊನೆಗೆ ಅವಳು ಗೀತಳಾಗುವಳು.

ಶಾಂತ ತಾನು ಷ್ವಪಟ್ಟವನಿಗೆ ಮೈಮನಗಳನ್ನು ನೀಡುತ್ತಾಳೆ. ತಾನು ದೈಹಿಕವಾಗಿ ಸೇರುತ್ತಿರುವ ವ್ಯಕ್ತಿ ಬಡವನೆಂಬ ಭಾವನೆಯಿಂದ ಅವನಿಗೆ ಹಣದ ಸಹಾಯವನ್ನು ಮಾಡಬೇಕೆಂಬ ಮನಸ್ಸು ಮಾಡುವುದು ವಿಶೇಷವೆನಿಸುತ್ತದೆ. ಆದರೆ ಗುತ್ತಿ ಹಳ್ಳಿಯವಳು. ತನ್ನ ತಾಯಿಯೊಂದಿಗೆ ಪೇಟೆಗೆ ಸಂತೆಯ ದಿನ ಬಂದಿರುತ್ತಾಳೆ. ಹಳ್ಳಿಯ ಮುಗ್ದಳಾದ ಗುತ್ತಿ ನಗರ ಸ್ಥಳದ ಪರಿಚಯವಿಲ್ಲದೆ ಅಕಸ್ಮಾತ್ ತಾಯಿಯಿಂದ ಬೇರೆಯಾಗಿ ಜನಸಂದಣಿಯಲ್ಲಿ ಒಬ್ಬಂಟಿಯಾಗುತ್ತಾಳೆ. ಆಕೆಯ ಅಸಹಾಯಕ ಸ್ಥಿತಿಯನ್ನು ಪುರುಷ ಮಂದಿ ಬಳಸಿಕೊಳ್ಳಲು ಮುಂದಾಗುತ್ತಾರೆ. ಅಂಥವರಲ್ಲಿ ಕಳ್ಳ ಸಣ್ಣಮುನಿಯು ಅವಳನ್ನು ತನ್ನ ವಶಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ. ನೆರೆದವರ ಮುಂದೆ ತನ್ನ ಹೆಂಡತಿಯೆಂದು ಹೇಳುತ್ತಾನೆ. ಒತ್ತಾಯಿಸುತ್ತಾನೆ. ಈ ಸಂದರ್ಭದಲ್ಲಿ ಪೋಲೀಸ್ ಚಿಕ್ಕಣ್ಣನು ಪರಿಸ್ಥಿತಿಯ ಲಾಭ ಪಡೆದುಕೊಳ್ಳುತ್ತಾನೆ. ನಗರದ ಮೋಸದ ಜಾಲಕ್ಕೆ ಗುತ್ತಿ ಬಲಿಯಾಗುತ್ತಾಳೆ. ಪೋಲೀಸ್, ರಾಜಕಾರಣಿಗಳು, ಅಧಿಕಾರ ಶಾಹಿ ವರ್ಗ, ಪತ್ರಕರ್ತರ ಜೊತೆ ಹೊಂದಿಕೊಂಡು ಹಳ್ಳಿಯ ಮುಗ್ದತೆಯನ್ನು ಕಳೆದುಕೊಂಡು ನಗರದ ಬದುಕಿಗೆ ಹೊಂದಿಕೊಂಡು, ಸಾಮಾಜಿಕವಾಗಿ ತಾನೇ ಬದಲಾಗುವ ಅವಸ್ಥೆಯನ್ನು ಈ ಕಥೆಯಲ್ಲಿ ಕಾಣಬಹುದಾಗಿದೆ.

ಲಂಕೇಶರ "ಉಮಾಪತಿಯ ಸ್ಕಾಲರ್ ಶಿಫ್ ಯಾತ್ರೆ" ಕಥೆಯ ಉಮಾಪತಿ ಗ್ರಾಮೀಣ ಮತ್ತು ನಗರಗಳ ಮನಸ್ಥಿತಿಗಳ ನಡುವೆ ಸಿಕ್ಕಿ ಒದ್ದಾಡುವ ವ್ಯಕ್ತಿಯಾಗಿ ಕಾಣುತ್ತಾನೆ. ಹೊಸ ಸಂವೇದನೆಯ ಉಮಾಪತಿ ಗ್ರಾಮೀಣ ಮುಗ್ಧತೆಯಿಂದ ಶೈಕ್ಷಣಿಕವಾಗಿ ಹೊರಬರಲು ಯತ್ನಿಸುವ ವ್ಯಕ್ತಿಯಾಗುತ್ತಾನೆ.

ಉಮಾಪತಿಯು ಶೈಕ್ಷಣಿಕವಾಗಿ ಪ್ರತಿಭಾಶಾಲಿಯಾದ ಗ್ರಾಮೀಣ ಭಾಗದ ವಿದ್ಯಾರ್ಥಿ. ಓದಿನಲ್ಲಿ ಇಚ್ಛಾಶಕ್ತಿಯುಳ್ಳವನಾಗಿರುತ್ತಾನೆ. ಬೌದ್ಧಿಕವಾಗಿ ಬೆಳವಣಿಗಯನ್ನು ಹೊಂದಿದ್ದ ಇವನು ತನ್ನ ಸುತ್ತಮುತ್ತಲಿನ ಪ್ರದೇಶವನ್ನು ಸೂಕ್ಷ್ಮವಾಗಿ ಅವಲೋಕಿಸುವ, ವಿಶ್ಲೇಷಿಸುವ ವ್ಯಕ್ತಿಯಾಗಿರುತ್ತಾನೆ. ಇಂಥವನು ಸದಾ ಓದಿನಲ್ಲಿ ಮುಂದೆಯಿರುವ ಕಾರಣ ಅವನಿಗೆ ಸ್ಕಾಲರ್‌ಶಿಪ್ ದೊರೆಯಬಹುದೆಂದು, ಊರಿನ ಕೆಲವರು ತೀರ್ಮಾನಿಸುತ್ತಾರೆ. ತನ್ನ ಪ್ರತಿಭೆಯಿಂದ ಸ್ಕಾಲರ್‌ಶಿಪ್ ದೊರಕಲಾರದೆಂಬ ಸತ್ಯ ಉಮಾಪತಿಗೆ ತಿಳಿದು ಅವನ ಮುಗ್ಧತೆ ಮಾಯವಾಗುವ, ತನಗೆ ಅರಿವಿಲ್ಲದೆ ಹೊಸದೊಂದು ಪರಿಸರಕ್ಕೆ ಪಲಾಯನವಾಗುವ ಸ್ಥಿತಿಯನ್ನು ಗ್ರಾಮೀಣ ಬದುಕಿನಲ್ಲಿನ ಉಮಾಪತಿಯ ಮನಸ್ಥಿತಿಯಿಂದ ತಿಳಿಯಬಹುದು.

ಗ್ರಾಮೀಣ ಭಾಗದ ಹದಿಹರೆಯದವರಲ್ಲಿ ಸಹಜವಾದ ಪ್ರೀತಿಕಾಮನೆಗಳು ದೈನಂದಿನ ಬದುಕಿನಲ್ಲಿ ಜರಗುತ್ತವೆ. ಕೆಲವು ಸುಖ್ಯಾಂತವಾಗಿ ಕೊನೆಗೊಂಡರೆ ಇನ್ನೂ ಕೆಲವು ದುಃಖಮಯವಾಗಿರುತ್ತವೆ ಎಂಬುದನ್ನು "ಕಲ್ಲು ಕರಗುವ ಸಮಯ" ಕಥೆಯಲ್ಲಿ ನೋಡಬಹುದಾಗಿದೆ. ಲಂಕೇಶರ ಗ್ರಾಮ ಸಮಾಜದ ಕಾಳಜಿಯ ದೃಷ್ಟಿ ಇರುವುದು ಗ್ರಾಮೀಣ ಭಾಗದ ಸಮಗ್ರ ಚಿತ್ರಣಕ್ಕಿಂತ ಗ್ರಾಮೀಣ ಸಮಾಜದಲ್ಲಿ ಆಗುತ್ತಿರುವ ಬದಲಾವಣೆಯ ಸನ್ನಿವೇಶಗಳು ಹೇಗೆ ವ್ಯಕ್ತಿಯ ಹಿಡಿತಕ್ಕೆ ಒಳಗಾಗುತ್ತವೆ ಎಂಬುದರ ಕಡೆ. ಇಲ್ಲಿ ಕಥೆಗಾರರ ಒತ್ತು ಇರುವುದು ವ್ಯಕ್ತಿಗತವಾಗಿ ಆತನ ಬುದ್ಧಿ ಪೂರ್ವಕ ವಿಚಾರಗಳು ಹೇಗೆ ಕೆಲಸಮಾಡುತ್ತದೆ ಎಂಬುದಾಗಿದೆ. ಆ ವಿಚಾರವನ್ನು ಈ ಕಥೆಯಲ್ಲಿ ನೋಡುವುದು ಸೂಕ್ತವೆನಿಸುತ್ತದೆ.

ಭಾರತೀಯ ಗ್ರಾಮ ಸಮಾಜದ ಗೊಂದಲಗಳ ಧೋರಣೆಗಳು ಆಧುನಿಕತೆಗೆ ಹೇಗೆ ಅಸ್ಪಷ್ಟವಾಗಿ ಸಾಗುತ್ತವೆ ಎಂಬುದರ ಹಿನ್ನೆಲೆಯಲ್ಲಿ 'ಕಲ್ಲು ಕರಗುವ ಸಮಯ' ಕಥೆ ಒಂದು ಸಾಂಕೇತಿಕವಾಗಿದೆ. ಈ ಕಥೆಯೂ ಒಂದು ಪ್ರೇಮ ಕಥೆಯಾಗಿದೆ. ತಿಪ್ಪಣ್ಣರ ಮತ್ತು ಶ್ಯಾಮಲಾರೆಂಬ ಪ್ರೇಮಿಗಳು ಅನ್ಯ ಜಾತಿಗೆ ಸೇರಿದವರಾಗಿರುತ್ತಾರೆ. ಈ ವಿಚಾರವಾಗಿ ಶ್ಯಾಮಲಾಳ ತಂದೆ ಮಲ್ಲಯ್ಯನ ಆರ್ಭಟಗಳೆಲ್ಲ ಕಲ್ಲು ನೀರು ಕರಗಿದಂತೆ ಮಾಯವಾಗಿ ಬಿಡುತ್ತವೆ. ಮಲ್ಲಯ್ಯನ ಸಾವು ಹೊಸ ಪರಿವರ್ತನೆಯ ಮನಸ್ಸಿನ ಶ್ಯಾಮಲಾ ಮತ್ತು ತಿಪ್ಪಣ್ಣ ಮದುವೆಗೆ ದಾರಿಯಾಗುತ್ತದೆ. ಸಹಜವಾದ ಅಂತರ್ ಜಾತಿಯ ಪ್ರೇಮ ಪ್ರಕರಣಗಳು ಗ್ರಾಮೀಣ ಭಾಗದಲ್ಲಿ ಹೆಚ್ಚಿನ ಮಹತ್ವವನ್ನು ಪಡೆದುಕೊಳ್ಳುತ್ತವೆ. ನಗರಕೇಂದ್ರಿತ ಸಮಾಜದಲ್ಲಿ ಇದರ ಪ್ರಮಾಣ ತುಸು ಕಡಿಮೆಯಾಗಿರುತ್ತದೆ.

ಲಂಕೇಶರ ಬಹುಪಾಲು ಕಥೆಗಳಲ್ಲಿ ತಿರಸ್ಕೃತ ಬದುಕಿನ ಎಳೆಗಳು ಕಾಣುತ್ತವೆ. ದೈನಂದಿನ ಗ್ರಾಮೀಣ ಮತ್ತು ನಗರ ಕೇಂದ್ರಿತ ಜೀವನದಲ್ಲಿ ಸಹಜವಾದ ಪ್ರೇಮ, ಕಾಮ, ತಿರಸ್ಕಾರಗಳು, ವಂಚನೆಗಳು, ಹೋರಾಟಗಳು, ವ್ಯಕ್ತಿ ನೆಲೆ ನಿಲ್ಲಲು ಏನೆಲ್ಲಾ ಕಸರತ್ತುಗಳನ್ನು ಮಾಡುತ್ತಾನೆಂಬುದು ಲಂಕೇಶರ ಕಥೆಗಳಲ್ಲಿ ಕಂಡುಬರುತ್ತವೆ.

ಅನಂತಮೂರ್ತಿವರ ಕಥೆಗಳಲ್ಲಿ ಗ್ರಾಮೀಣ ಮತ್ತು ನಗರದ ಜನತೆಯ ಸಾಮಾಜಿಕ ಜನಜೀವನದಲ್ಲಿನ ಚಿಂತನೆಗಳು ಮತ್ತು ತಾತ್ವಿಕ ವಿಚಾರಗಳು ಹೆಚ್ಚಿನ ಮಹತ್ವವನ್ನು ಉಂಟುಮಾಡುತ್ತವೆ.

ಅವರು ಹೇಳುವಂತೆ "ಮನುಷ್ಯ ಉದ್ಯಮ ಶೀಲನೂ, ಪ್ರಕೃತಿಗೆ ಕೃತಜ್ಞನೂ, ಉಂಡು ತಿಂದು ನಿದ್ರೆ ಮಾಡುವುದರಲ್ಲಿ ಸುಖಿಯೂ, ಮಕ್ಕಳನ್ನೂ ಪ್ರೀತಿಸುವವನೂ ಆಗಬೇಕು. ಆಗ ಅವನ ಕೃಷಿಗೆ ನುಣುಪು ಕುಂಕುಮ ಭೂಮಿ ನಗುತ್ತದೆ. ಕಾರ್ಮುಗಿಲ ಖಾಲಿಕೋಣೆಯಲ್ಲಿನ ಅಗೋಚರ ಬಿಂದು ಅವಸರದ ಹೆರಿಗೆಯಾಗದಂತೆ ನವಮಾಸವೂ

ಕಾವ ಭ್ರೂಣರೂಪಿಯಾಗಿರುತ್ತದೆ. ಅಂತರಪಿಶಾಚಿಯಾದ ಗುಡುಗಾಟ ಸಿಡಿಲಿನ ಕಾಟ ಇದ್ದೇ ಇರುತ್ತದೆ. ಆದರೆ ಆಗಾಗ ಕಾಡುವ ಭೂತಕ್ಕೆ ಮಳೆ ವರ್ತಮಾನವಾಗುತ್ತದೆ."[೧೫]

ನಗರ ಕೇಂದ್ರಿತ ಬದುಕು ಬಹುಪಾಲು ಸಂಕೀರ್ಣವಾಗಿರುತ್ತದೆ. ಅದು ಬಹುಪಾಲು ಸಂದರ್ಭದಲ್ಲಿ ಪಾಶ್ಚಮಾತ್ಯ ದೇಶಗಳ ಪ್ರಭಾವವನ್ನು ಹೊಂದಿರುತ್ತದೆ. ಒಂದು ವೇಳೆ ಅಂತಹ ವಿಚಾರಗಳನ್ನು ಯಾವುದೇ ಪೂರ್ವಪರ ಸಿದ್ದತೆ ಇಲ್ಲದೆ ಗ್ರಾಮೀಣ ಭಾಗದಲ್ಲಿ ಪ್ರಯೋಗಿಸಿದರೆ ಅಭಾಸವೆ ಹೆಚ್ಚಾಗುತ್ತದೆ ಎಂಬುದನ್ನು ಅನಂತಮೂರ್ತಿಯವರ ಪತ್ನಿಯ ಅಭಿಪ್ರಾಯದಲ್ಲಿಯೇ ತಿಳಿಯಬಹುದಾಗಿದೆ.

ಎಸ್ತರ್ ಅನಂತಮೂರ್ತಿಯು ಅನಂತಮೂರ್ತಿವರ ದಾಂಪತ್ಯ ವಿಚಾರವನ್ನು "ತೀರ್ಥಹಳ್ಳಿ: ದ ರಿಮೆಂಬರ್ಡ್ ವಿಲೇಜ್" ಎಂಬ ಲೇಖನದಲ್ಲಿ ಹೇಳುವಾಗ "ಇಂಗ್ಲೆಂಡಿನಿಂದ ಬಂದ ನಮಗೆ ಬೇಗುವಳ್ಳಿ ಮೊದಲಿಗಿಂತ ಬೇರೆಯಾಗಿದೆ ಅನಿಸತೊಡಗಿತು. ನಾಲ್ಕು ವರ್ಷ ಕಾಲ ವಿದೇಶ ಜೀವನಕ್ಕೆ ಹೊಂದಿಕೊಂಡು ಇಲ್ಲಿಯ ವಾತಾವರಣಕ್ಕೆ ಹೊಂದಿಕೊಳ್ಳಲು ಸ್ವಲ್ಪ ಕಷ್ಟವಾಯಿತು. ಎಲ್ಲವೂ ಕೊಳಕು ಎಂದೆನಿಸುತ್ತಿತ್ತು. ಶುಚಿತ್ವದ ಬಗ್ಗೆ ಅಬ್ಸೆಸ್ ಆಗಿಬಿಟ್ಟಿದ್ದೆ. ಮಕ್ಕಳ ಕೈಕಾಲುಗಳನ್ನು ಶುಚಿಯಾಗಿಡಲು ಸದಾ ಡೆಟಾಲ್ ಹಾಕಿ ತೊಳೆಯುತ್ತಿದ್ದೆ. ಮಕ್ಕಳ ಕೈಕಾಲುಗಳನ್ನು ಶುಚಿಯಾಗಿಡಲು ಸದಾ ತವಕಿಸುತ್ತಿದ್ದೆ. ಹಾಲಿನ ಬಾಟ್ಲಿ ಕಾಯಿಸಲು ಸ್ಟೆರ್‌ಲೈಜ್ ಮಾಡಲು ಸ್ಟೊವನ್ನು ರೂಮಿನಲ್ಲಿರಿಸಿಕೊಂಡಿದ್ದೆ. ಅಡುಗೆಮನೆಗೆ ನನಗೆ ಪ್ರವೇಶವಿರಲಿಲ್ಲ. ಆದರೆ ಅದೇನೂ ನನ್ನನ್ನು ಬಾಧಿಸಲಿಲ್ಲ. ಎಲ್ಲರೂ ಜೊತೆಯಲ್ಲಿಯೇ ನೆಲದ ಮೇಲೆ ಕುಳಿತು ಒಟ್ಟಿಗೇ ಊಟ ಮಾಡುತ್ತಿದ್ದೆವು. ಅನಂತರ ಗೋಮಯ ಹಚ್ಚುವುದು ಮುಜುಗರವಾಗುತ್ತಿತ್ತು. ಆದರೆ ಅದನ್ನು ಮನೆಯ ಹೆಂಗಸರು ಬಗ್ಗಿ ಸರಾಗವಾಗಿ ಮಾಡುತ್ತಿದ್ದನ್ನು ಕುತೂಹಲದಿಂದ ನೋಡುತ್ತಿದ್ದೆ. ಕ್ರಮೇಣ ಅಭ್ಯಾಸವಾಗಿ ನಾನೂ ಅದನು ಮಾಡಲು ಕಲಿತೆ."[೧೬]

ಗ್ರಾಮೀಣ ಭಾಗದ ದೈನಂದಿನ ಜೀವನದಲ್ಲಿ ಅವಿಭಕ್ತ ಕುಟುಂಬಗಳ ಪಾತ್ರ ಅತಿಮುಖ್ಯವೆನಿಸಿದೆ. ನಗರದ ಸಂಕೀರ್ಣ ಬದುಕಿನಲ್ಲಿ ವಿಭಕ್ತ ಕುಟುಂಬಳು ಅತಿ ಹೆಚ್ಚಾಗಿರುತ್ತವೆ. ಹಾಗೆಯೇ ಬದುಕಿನ ಅನಿವಾರ್ಯತೆಯಿಂದ ಸಮಸ್ಯೆಗಳು ಹೆಚ್ಚಿರುತ್ತವೆ. ಇಲ್ಲಿ ಅವಿಭಕ್ತ ಕುಟುಂಬಗಳು ಸಾಧ್ಯವಾದಷ್ಟು ಮಟ್ಟಿಗೆ ಅಧಃಪತನವನ್ನು ಕಂಡುಕೊಳ್ಳುತ್ತವೆ. ಹಾಗೆಯೇ ಗ್ರಾಮೀಣ ಭಾಗದಲ್ಲಿನ ವಿಭಕ್ತ ಕುಟುಂಬಗಳು ಸಾಕಷ್ಟು ಸಮಸ್ಯೆಗಳನ್ನು ಎದುರಿಸುತ್ತವೆ. ಅನಂತಮೂರ್ತಿಯವರು "ಎಂದೆಂದೂ ಮುಗಿಯದ ಕಥೆ" ಯಲ್ಲಿ ಮುದುಕ-ಮುದುಕಿ, ಮಕ್ಕಳು-ಮೊಮ್ಮಕ್ಕಳು ನಡುವಿನ ಪ್ರೀತಿ ವಿಶೇಷವಾಗಿರುವುದನ್ನು ತರುತ್ತಾರೆ. ಭಾರತೀಯ ಸಾಮಾಜಿಕ ಶಕ್ತಿ ಕಂಡುಬರುವುದೇ ಕೂಡುಕುಟುಂಬಗಳಿಂದ ಎಂಬುದನ್ನು ಈ ಕಥೆಯಲ್ಲಿ ಕಥೆಗಾರ ಬಲವಂತವಾಗಿ ಪ್ರತಿಪಾದಿಸುವುದನ್ನು ಕಾಣಬಹುದು.

ಕಥೆಯ ಶೀರ್ಷಿಕೆಯಲ್ಲಿಯೇ ಇರುವಂತೆ ಈ ಅವಿಭಕ್ತ ಕುಟುಂಬದ ಶಕ್ತಿಯುತವಾದ ಬದುಕು ಎಂದೆಂದೂ ಮುಗಿಯದ ಕಥೆಯಾಗಿರುತ್ತದೆ. ಅದು ಬೆಳೆಯುತ್ತಾ ಮುಂದೆ ಸಾಗುತ್ತಿರುತ್ತದೆ. ಆ ಕಥೆಯಲ್ಲಿರುವ ರಾಜಕುಮಾರ–ರಾಜಕುಮಾರಿಯ ಕಥೆಯಲ್ಲಿ "ಆಗ ಬೆಳಕಾಗಲ್ಲ–ಕತ್ತಲಾಗಲ್ಲ–ಮರದಲ್ಲಿ ಹಣ್ಣಾಗಲ್ಲ– ಗಿಡದಲ್ಲಿ ಹೂವಾಗಲ್ಲ."[೧೭]

ಗ್ರಾಮೀಣ ಭಾಗದ ಜನತೆಯ ದೈನಂದಿಕ ಜೀವನದಲ್ಲಿ ಜಾನಪದೀಯ ವಿಚಾರಗಳಿಗೇನೂ ಕೊರತೆಯಿಲ್ಲ. ಅನಂತಮೂರ್ತಿಯವರು 'ತಾಯಿ' ಕಥೆಯಲ್ಲಿ ಇಂಥ ಅಂಶಗಳನ್ನು ತರುತ್ತಾರೆ. ಗಂಡನನ್ನು ಕಳೆದುಕೊಂಡ ಅಬ್ಬಕ್ಕಳು ಸೇರೆಗಾರನನ್ನು ಕೈ ಹಿಡಿಯುತ್ತಾಳೆ. ಅವನ ಸೌಂದರ್ಯವನ್ನು ವರ್ಣಿಸುವ ಸಂದರ್ಭದಲ್ಲಿ

"ಹಾಸಿಗೆಯ ಹಾಸೆಂದ

ಮಲ್ಲಿಗೆಯ ಮುಡಿಯೆಂದ

ಬ್ಯಾಸತ್ತರ ಮಡದಿ ಮಲಗೆಂದ

ಬ್ಯಾಸತ್ತರ ಮಡದಿ ಮಲಗೆಂದ ನನ ನೋಡಿ...."[೧೮] ಎಂದು, ಎರಡನೆಯ ಗಂಡನ ಗುಣಗಾನ ಮಾಡುತ್ತಾಳೆ. ಗ್ರಾಮೀಣ ಭಾಗದವರಲ್ಲಿ ಬಡತನವಿದೆ. ಆದರೆ ಅವರ ಅನುಭವದ ಮಾತುಗಳಿಗೆ, ಹಾಡುಗಾರಿಕೆಗೆ ಬಡತನವಿಲ್ಲ. ಹೆಣ್ಣಿನ ಹೃದಯದಲ್ಲಿ ನೆಲೆಸುವ ಗಂಡನ ಬಗ್ಗೆ ಅಪಾರ ಅಭಿಮಾನವುಳ್ಳವಳಾಗಿರುತ್ತಾಳೆ. ತೌರೂರಿನ ಬಗ್ಗೆ ಅಪಾರ ಅಭಿಮಾನವಿದ್ದರೂ ಗಂಡನ ಪ್ರೀತಿಯ ತೆಕ್ಕೆಯಲ್ಲಿ ಅದನ್ನು ಮರೆಯುತ್ತಾಳೆ. ಗ್ರಾಮೀಣ ಭಾಗದ ಸಹಜವಾದ ಹೆಣ್ಣು–ಗಂಡುಗಳ ಪ್ರೀತಿಯನ್ನು ಕಥೆಗಾರ ತನ್ನ ಸೃಜನಶೀಲ ಬರವಣಿಗೆಯನ್ನು ಜಾನಪದೀಯ ಪದಗಳ ಮೂಲಕ ತರುತ್ತಾರೆ.

ಹಳ್ಳಿಯನ್ನು ಬಿಟ್ಟು ನಗರಕ್ಕೆ ಅರಸಿ ಹೋಗುವ ವರ್ಗ ಒಂದು ಕಡೆಯಾದರೆ, ಮತ್ತೊಂದು ಕಡೆ ನಗರದ ಯಾಂತ್ರಿಕ ಜೀವನದಿಂದ ಬೇಸತ್ತು ಹಳ್ಳಿಯ ಕಡೆ ಮುಖ ಮಾಡುವ ವರ್ಗ ಮತ್ತೊಂದು ಕಡೆ ಇರುತ್ತದೆ. ಹಳ್ಳಿಗಳ ಬದುಕು ರಸಮಯವಾಗಿರ ಬೇಕೆಂಬದನ್ನು ಯೋಚಿಸುವವರು ಆರ್ಥಿಕವಾಗಿ ಸದೃಢವಾಗಿರ ಬೇಕಾಗಿರುತ್ತದೆ. ಹಳ್ಳಿಯ ಕಾಯಕವೇ ಬೇಸಾಯ. ಸಹಜವಾಗಿ ರೈತನು ಹೇಳುವ ಮಾತು "ವರ್ಷದ ಮೂನ್ನೂರ ಅರವತ್ತೈದು ದಿನಗಳ ಕಾಲ ದುಡಿಯಬೇಕು. ಆದರೆ ಕೈಗೆ ಬಂದ ತುತ್ತು ಬಾಯಿಗೆ ಬರುವುದು ಕಷ್ಟ" ಎಂದು ಸದಾ ಯೋಚಿಸುತ್ತಾನೆ. ಆಕರ್ಷಣೀಯ ಬದುಕು ನಗರದಲ್ಲಿ ದೊರೆಯುತ್ತದೆ ಎಂದು ಭಾವಿಸುತ್ತಾನೆ. ಅದರಲ್ಲೂ ಕೌಟುಂಬಿಕ ಜಗತ್ತಿನಲ್ಲಿ ಬೆಳೆಯುವ ಯುವಕರ ಮನಸ್ಸು ಸದಾ ಇಂತಹ ವಿಚಾರದಲ್ಲಿಯೇ ಯೋಚಿಸುತ್ತದೆ. ಗ್ರಾಮೀಣರಿಗೆ ದುಡಿಮೆಯ ಫಲ ಪರಿಪೂರ್ಣವಾಗಿ ದೊರಕುವುದಿಲ್ಲ ಎಂಬುದಕ್ಕೆ ಅನಂತಮೂರ್ತಿಯವರ "ಪ್ರಕೃತಿ" ಕಥೆ ಉದಾಹರಿಸಬಹುದು. ಕಥೆಯಲ್ಲಿನ ಸಂಕಪ್ಪಯ್ಯನಿಗೆ ಡಿ.ಸಿ. ಸಾಹೇಬರೆ

ಸ್ವತಃ ಮಲೆನಾಡಿನ ಒಬ್ಬ ಅತ್ಯುತ್ತಮ ಬೇಸಾಯಗಾರನೆಂದು ಬೆಳ್ಳಿ ಪದಕವನ್ನು ನೀಡಿರುತ್ತಾರೆ. ಆದರೆ ಆ ಹಳ್ಳಿ ಸಂಕಪ್ಪಯ್ಯನ ಹೆಂಡತಿಯಾದ ಸೀತಮ್ಮಳಿಗೆ ಕೊಂಪೆಯಂತೆ ಕಾಣುತ್ತಿರುತ್ತದೆ. ಆಕೆಯು ತನ್ನ ಮಗನಾದ ನಾರಾಯಣನಿಗೆ ಹೇಳುವ ಮಾತನ್ನು ಗಮನಿಸಬೇಕು. "ನಿತ್ಯ ಒಂದೇ ಕಥೆ ಈ ಹಾಳು ಕೊಂಪೇಲಿ. ನನಗೂ ಹೆಣಗಿಹೆಣಗಿ ಸಾಕಾಯ್ತು ನಾಣಿ. ಇವತ್ತು ಈ ದನಾನ ಹುಲೀ ಹಿಡಿತು. ನಾಳೆ ನಾಯೀನ ಕುರ್ಕ ಹೊತ್ತಕೊಂಡು ಹೋಯಿತು. ಒಂದೊ ಎರಡೊ? ಕೊಗ್ಗೆ ಹೇಳುತ್ತಿದ್ದ, ಕಾಡಾನೆಯೊಂದು ಬೇರೆ ಬಂದು ಸೇರಿ ಕೊಂಡಿದೆಯಂತೆ. ಅಷ್ಟು ಸಾಲದೆಂದರೆ ಕೊಳೆ ರೋಗ, ಆ ರೋಗ, ಈ ರೋಗ, ಮಲೇರಿಯಾಂತ ಮತ್ತೆ ಸಾವಿರ. ಕೈಗೆ ಮೂರು ಕಾಸು ಹತ್ತದ ಮೇಲೆ ಇಲ್ಲೆ ಯಾಕೆ ಸಾಯಬೇಕು ಹೇಳು."[೧೯] ಸೀತಮ್ಮನವರ ಈ ಮಾತುಗಳು ಗ್ರಾಮೀಣ ಭಾಗದ ರೈತರು ತಮ್ಮ ನಿತ್ಯದ ಬದುಕಿನಲ್ಲಿ ಅನುಭವಿಸುವ ನಷ್ಟವನ್ನು ಹೇಳುವ ರೀತಿ ವಿಭಿನ್ನವಾಗಿದೆ. ಭೂಮಿಯಲ್ಲಿ ಹಾಕಿದ ಬಿತ್ತನೆ, ಸಾಕುವ ಪ್ರಾಣಿಗಳು, ಬರುವ ರೋಗರುಜಿನಗಳು, ಹಳ್ಳಿಯ ಬದುಕನ್ನು ಹೈರಾಣಗೊಳಿಸಿವೆ.

ಸಂಕಪ್ಪಯ್ಯನು ಲಾಭನಷ್ಟಗಳು ಜರುಗಿದರೂ ಹಳ್ಳಿಯ ಬದುಕನ್ನು ಒಪ್ಪಿಕೊಂಡಿರುತ್ತಾನೆ. ಒಮ್ಮೊಮ್ಮೆ ತಾನು ಬೆಳೆದ ಫಸಲಿನಿಂದ ಲಾಭವನ್ನು ಕಂಡಿರುತ್ತಾನೆ. ನಗರೀಕರಣ ಕೇಂದ್ರದ ಕಚ್ಚಾವಸ್ತುವಿನಿಂದ ಸಿದ್ದಗೊಳ್ಳುವ ಉತ್ಪಾದನೆಯೂ ಮತ್ತು ಮಾರಾಟದಿಂದ ಸಿಗುವ ಲಾಭದ ಪ್ರಮಾಣದ ರೀತಿಗೂ ಭೂಮಿಯಿಂದ ಪಡೆದ ಬೆಳೆಯ ಮಾರಾಟದಿಂದ ಸಿಗುವ ಲಾಭದ ಪ್ರಮಾಣಕ್ಕೂ ಸಾಕಷ್ಟು ವ್ಯತ್ಯಾಸವಿರುತ್ತದೆ. ಭಾರತದಂತಹ ದೇಶದಲ್ಲಿ ಗ್ರಾಮೀಣ ಭಾಗದ ಉತ್ಪನ್ನಗಳು ಲಾಭವನ್ನು ಕೊಡುವ ಬದಲು ಅದನ್ನು ನಂಬಿರುವ ವ್ಯಕ್ತಿಗಳನ್ನೇ ನಗರಕ್ಕೆ ಮುಖ ಮಾಡುವ ಮನಸ್ಥಿತಿಗೆ ತರುತ್ತದೆ.

ಸಂಕಪ್ಪಯ್ಯನ ಹೆಂಡತಿ ಸೀತಮ್ಮ ಮತ್ತು ನಾರಾಯಣ ಇಬ್ಬರು ಹಳ್ಳಿಯಿಂದ ವಿಮುಖರಾಗುವ ಮನಸ್ಥಿತಿಯನ್ನು ಹೊಂದುತ್ತಾರೆ. "ನನಗೂ ನಾಕು ದಿನವಾದರೂ ಈ ಕೊಂಪೆವಾಸ ಬಿಟ್ಟು ಮಗನ ಜೊತೆ ಸುಖವಾಗಿರಬೇಕೆಂಬ ಆಸೆ ಇದೆ."

"ನಾನು ನೋಡಿಕೋತೀನಮ್ಮ. ಇವರ ಒಣ ಜಬರದಸ್ತು ಇನ್ನು ನನ್ನ ಮೇಲೆ ನಡೆಯದು. ನಾನು ಕಿಟ್ಟಣ್ಣ ಶಿವಮೊಗ್ಗದಲ್ಲಿ ನಿನ್ನ ಅಣ್ಣನ ಜೊತೆ ಹೋಟೆಲ್ಲಿಟ್ಟೆ ಸೈ. ಆಕಾಶ ತಲೇ ಮೇಲೆ ಕಳಚಿಕೊಳ್ಳಲಿ ಬೇಕಾದರೆ. ಹೆದರ್ತೀನಂತ ತಿಳಕೊಂಡಿದೀಯ?"[೨೦] ಸಂಕಪ್ಪಯ್ಯನ ಭೂಮಿಯ ಮೇಲಿನ ಹಂಬಲ ಹೆಂಡತಿ ಮತ್ತು ಮಗನಿಗೆ ಇಲ್ಲದಿರುವುದು ಕಂಡುಬರುತ್ತದೆ. ಗ್ರಾಮೀಣ ಭಾಗದಲ್ಲಿ ಏಕೆ ವ್ಯವಸಾಯದಿಂದ ಜನರು ವಿಮುಖರಾಗಿ ನಗರಕ್ಕೆ ಹೋಗುತ್ತಾರೆ ಎಂಬ ಗಂಭೀರವಾದ ವಿಚಾರವೊಂದನ್ನು ಅನಂತಮೂರ್ತಿಯವರು ಈ ಕಥೆಯಲ್ಲಿ ಓದುಗನಿಗೆ ನೀಡಿದ್ದಾರೆ. ಭಾರತದಂತಹ ದೇಶಗಳಲ್ಲಿ ನಗರೀಕರಣ

ಪ್ರಭಾವದಿಂದ ವಲಸೆ ಹೋಗುವ ಜನ ಬಹುಪಾಲು ಹಳ್ಳಿಯವರು ಆಗಿರುತ್ತಾರೆ. ಇದರ ಪರಿಣಾಮ ಇಂದು ನಗರಗಳಲ್ಲಿ ಕೊಳಚೆ ಪ್ರದೇಶಗಳು ಹೆಚ್ಚಾಗುತ್ತಿದ್ದರೆ, ಗ್ರಾಮೀಣ ಭಾಗದ ಪ್ರದೇಶಗಳು ಕೂಡ ಮೂಲಭೂತ ಸೌಕರ್ಯಗಳಿಲ್ಲದೆ ವೃದ್ಧಾಶ್ರಮದ ಕೊಂಪೆಗಳಾಗುತ್ತಿರುವುದನ್ನು ಇಂದು ಕಾಣುತ್ತಿದ್ದೇವೆ. ಸರ್ಕಾರಗಳ ನಿರ್ಲಕ್ಷ್ಯ ನೀತಿಗಳು ಇಂದು ಜನರನ್ನು ನಗರ ಮುಖಿ ಮಾಡುತ್ತಿವೆ. ಇಂತಹ ಒಂದು ಸೂಕ್ಷ್ಮತೆಯು ಈ ಕಥೆಯಲ್ಲಿ ಕಾಣುತ್ತದೆ. ಜೊತೆಗೆ ಪಿತ್ರಾರ್ಜಿತವಾಗಿ ಬಂದಂತಹ ಭೂಮಿಯನ್ನು ಮುಂದಿನ ಜನಾಂಗ ನಡೆಸಿಕೊಂಡು ಹೋಗುವ ಬದಲು ಅದನ್ನು ಮತ್ತೊಬ್ಬರಿಗೆ ಮಾರಾಟ ಮಾಡಿ ಮುಂದಿನ ಭಾವಿ ಜನಾಂಗಕ್ಕೆ ಉಳುಮೆಯ ಭೂಮಿಯು ಇಲ್ಲದಂತೆ ಮಾಡುತ್ತಿದ್ದಾರೆ. ಅಂತಹ ಒಂದು ಅನಾಹುತ ವಿಚಾರಗಳು ಸಂಕಪ್ಪಯ್ಯ ಮತ್ತು ನಾರಾಯಣ ನಡುವಿನ ಸಂಭಾಷಣೆಯ ಸಂದರ್ಭದಲ್ಲಿ ಗಮನಿಸಬಹುದಾಗಿದೆ. ವಲಸೆಗೆ ಸಂಬಂಧಿಸಿದಂತೆ ಸಹಜವಾದ ಸಂಘರ್ಷಗಳು ಕಂಡು ಬರುತ್ತವೆ. ನಗರೀಕರಣ ಮನಸ್ಸಿನ ನಾರಾಯಣ ತಂದೆಯ ವಿರುದ್ಧವೇ ನಿಲ್ಲುವ ಸ್ಥಿತಿಗೆ ಬರುತ್ತಾನೆ. ಇದಕ್ಕೆ ಪೂರಕವೆಂಬಂತೆ ತಾಯಿ ಸೀತಮ್ಮಳು ಕೂಡ ಮಗನ ಪರವಾಗಿ ನಿಲ್ಲುತ್ತಾಳೆ. ಸಂಕಪ್ಪಯ್ಯನ ಭೂಮಿಯ ಮೇಲಿನ ಮೋಹ ಹೆಂಡತಿ ಮತ್ತು ಮಗನ ವಿರುದ್ಧ ನಿಲ್ಲುವಂತೆ ಮಾಡುತ್ತದೆ. ಸಹಜವಾಗಿ ಭೂಮಿಯ ಮೇಲಿನ ಬಂಡವಾಳ, ದುಡಿಮೆ, ಫಲ ಲಾಭದಾಯಕವಾಗಿ ಇರಬೇಕು ಒಂದು ವೇಳೆ ಪ್ರತಿಫಲ ಋಣಾತ್ಮಕವಾಗಿ ಕಂಡರೆ ಸಹಜವಾಗಿ ಹಳ್ಳಿಯಿಂದ ವಿಮುಖರಾಗುವ ಜನತೆ ಅನಿವಾರ್ಯವಾಗಿ ನಗರದ ಕಡೆ ಮುಖಮಾಡುತ್ತಾರೆ. ವಿಭಕ್ತ ಅಥವಾ ಅವಿಭಕ್ತ ಕುಟುಂಬಗಳು ಇಂತಹ ಕಾರಣಕ್ಕಾಗಿ ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುತ್ತವೆ ಎಂಬುದು ಕಥೆಗಾರನ ನಿಲುವು ಆಗಿದೆ.

ಅನಂತಮೂರ್ತಿಯವರ ಸಹಜವಾದ ವಿಚಾರಗಳು ಕೇವಲ ಗ್ರಾಮೀಣ ಭಾಗದಿಂದ ವಲಸೆ ಹೋಗುವ ನಗರ ಪ್ರದೇಶದ ಅನಿವಾರ್ಯತೆ ಅಷ್ಟೇ ಅಲ್ಲ. ಜೊತೆಗೆ ಹೆತ್ತುಹೊತ್ತು ಸಾಕಿ ಸಲುಹಿದ ತಂದೆ-ತಾಯಿಗಳಿಂದ ದೂರವಾದ ಮಕ್ಕಳು ಕೂಡ ತಮ್ಮ ಇರುವಿಕೆಯನ್ನು ನೆನೆಯುತ್ತಾರೆ. ಅದು ದೂರದ ನಗರ ಪ್ರದೇಶಕ್ಕೆ ಹೋದಾಗಲಂತೂ ಇದರ ಸೆಳೆತ ತುಂಬಾ ಇರುತ್ತದೆ ಎಂಬುದನ್ನು "ಕಾರ್ತಿಕ" ಕಥೆಯಲ್ಲಿ ಅಭಿವ್ಯಕ್ತಿಸಿದ್ದಾರೆ. ಕಥೆಯ ನಾಯಕ ರಾಘವನು ತಂದೆ-ತಾಯಿಯ ಪ್ರೀತಿಯನ್ನು "ಪಿತೃ ಜಿಗಣೆಗಳು, ಭೂತಗಳು. ಅಂದು ತೊಳೆಸಿ ಬೆಳೆಸಿದ ಅಪ್ಪ ಅಮ್ಮನ ಪ್ರೀತಿ,"[೨೧] ಎಂದು ನೆನಪು ಮಾಡಿಕೊಳ್ಳುತ್ತಾನೆ. ಮಲೆನಾಡಿನ ಪ್ರದೇಶದಲ್ಲಿ ಹೆಚ್ಚಾಗಿ ಕಾಣುವ ಜಿಗಣೆಗಳು ಪ್ರಾಣಿಗಳ ದೇಹದಿಂದ ರಕ್ತವನ್ನು ಹೀರುತ್ತಾ ದಪ್ಪವಾಗುತ್ತವೆ. ಹಾಗೆಯೇ ಭೂತಗಳು ವ್ಯಕ್ತಿಗಳನ್ನು ಆಗಾಗೆ ಕಾಡುತ್ತವೆ. ರಾಘವನು, ತಂದೆ-ತಾಯಿಯರ ಪ್ರೀತಿ ಹೀಗೆ ಜಿಗಣೆ, ಭೂತಗಳ ರೀತಿಯಲ್ಲಿ

ಬಿಗಿಯಾಗಿರುತ್ತದೆ ಎಂದು ಯೋಚಿಸುತ್ತಾನೆ. ನಗರಕ್ಕೆ ಬದುಕನ್ನು ಅರಸಿ ಹೋದ ರಾಘವನ ಮನಸ್ಸಿನಲ್ಲಿ ಪಾಪ ಪ್ರಜ್ಞೆಯೂ ಕಾಡುತ್ತದೆ. ತನ್ನದೆ ಆದ ಬಾಲ್ಯದ ನೆನೆಪಿನ ಬುತ್ತಿಯನ್ನು ಕಥಾನಾಯಕ ಈ ಕಥೆಯಲ್ಲಿ ಬಿಚ್ಚುತ್ತಾನೆ. ತನ್ನ ಬಾಲ್ಯದಲ್ಲಿ ತನ್ನ ತಂದೆ ಮತ್ತು ತಾತನ ನಡುವಿನ ಮಾತುಕತೆಗಳು ಹಾಗೂ ಅಜ್ಜಿ ಮತ್ತು ತಾಯಿ ನಡುವಿನ ವಿರಸದ ವಿಚಾರಗಳನ್ನು ನೆನೆಯುತ್ತಾನೆ. ಇಂದು ಅಜ್ಜ–ಅಜ್ಜಿ, ತಂದೆ–ತಾಯಿ ಎಲ್ಲರೂ ಜೀವಂತವಾಗಿ ಇಲ್ಲವೆಂಬ ಬದುಕಿನ ಸಂಕೀರ್ಣತೆಯ ಬಗ್ಗೆಯೆ ಕಥೆಗಾರ ಯೋಚಿಸುತ್ತಾನೆ. ಇರುವುದನ್ನು ಬಿಟ್ಟು ಇರದ ಕಡೆ ನಡೆಯುವ ಜೀವನದಲ್ಲಿ ಒಂದು ದಿನ ಕೊನೆ ಬರುತ್ತದೆ ಎಂಬ ಸತ್ಯವನ್ನು ರಾಘವ ತಿಳಿಯುತ್ತಾನೆ.

ಕ್ಷುಲಕ ಕಾರಣಕ್ಕಾಗಿ ಸಂಘರ್ಷಗಳು ಕೌಟುಂಬಿಕವಾಗಿ ಏರ್ಪಟ್ಟು ಅವುಗಳು ಮುಂದುವರೆದು ಕೊನೆಗೆ ಅಂತ್ಯವಾಗಿ ಹೋಗುವ ರೀತಿಯನ್ನು ಅನಂತಮೂರ್ತಿಯವರು "ಅಸ್ತಿತ್ವಕ್ಕಾಗಿ ಹುಡುಕಾಟ" ನಡೆಸುವ ವ್ಯಕ್ತಿಗಳನ್ನು "ಪ್ರಶ್ನೆ" ಮತ್ತು "ಕಾರ್ತಿಕ" ಕಥೆಗಳಲ್ಲಿ ತರುತ್ತಾರೆ.

ಗ್ರಾಮೀಣ ಬದುಕಿನಲ್ಲಿ ಜಾತಿ ಮತ್ತು ಸಂಪ್ರದಾಯಗಳು ಪ್ರಧಾನವಾಗಿರುತ್ತವೆ. ಸಹಜವಾಗಿ ಅವುಗಳು ತಿಕ್ಕಾಟವನ್ನು ನಡೆಸುತ್ತಿರುತ್ತವೆ. ನಗರ ಪ್ರದೇಶಗಳಲ್ಲಿ ಇವುಗಳು ಅಷ್ಟೇನೂ ಪ್ರಭಾವ ಬೀರುವುದಿಲ್ಲ. ಅದಕ್ಕೆ ಕಾರಣವಾದರೂ ಸಂಪ್ರದಾಯವನ್ನು ಮೀರಿದ ಆಧುನಿಕ ಶಿಕ್ಷಣ, ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾಗುವ ಸಮಾಜದ ಕಾರಣದಿಂದ ಕೆಲವು ಸಂಪ್ರದಾಯ ಮತ್ತು ಕಟ್ಟುಪಾಡುಗಳಿಂದ ಮುಕ್ತವಾಗಿರುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಮಾತ್ರ ಹೆಚ್ಚು ಜಾತಿ ಮತ್ತು ಸಂಪ್ರದಾಯಗಳಿಗೆ ಸ್ಥಾನ. ಅನಂತಮೂರ್ತಿಯವರ ದೀರ್ಘವಾದ "ಘಟಶ್ರಾದ್ಧ" ಕಥೆಯಲ್ಲಿ ಬರುವ ಯುಮುನಾ ಈ ಜಾತಿ ಮತ್ತು ಸಂಪ್ರದಾಯಗಳ ತೆಕ್ಕೆಯಲ್ಲಿ ಸಿಕ್ಕಿ ಹಾಕಿಕೊಂಡು ಬದುಕನ್ನು ದುರಂತ ಸ್ಥಿತಿಗೆ ಕೊಂಡೊಯ್ಯುವುದನ್ನು ಈ ಕಥೆಯಲ್ಲಿ ಕಾಣಬಹುದಾಗಿದೆ. ಲಿಂಗ ಪ್ರಧಾನವಾದ ಸಮಸ್ಯೆಯನ್ನು ಸಹ ಗ್ರಾಮೀಣ ಬದುಕಿನಲ್ಲಿ ಪ್ರಧಾನವಾಗಿರುವುದನ್ನು ಕಥೆಯುದ್ದಕ್ಕೂ ಕಾಣಬಹುದು.

ಯುಮುನಾ ಸಂಪ್ರದಾಯದ ಸುಳಿಗೆ ಸಿಲುಕಿ ದುರಂತವನ್ನು ಕಾಣುವ ಹೆಣ್ಣಾಗಿ ಈ ಕಥೆಯಲ್ಲಿ ಕಂಡುಬಂದರೆ ಆಕೆಯ ತಂದೆ ಶೇಷಗಿರಿ ಉಡುಪರು ಅದನ್ನು ಮೀರಿ ಹೊರಬರುತ್ತಾರೆ. ಇಂದಿಗೂ ಕೂಡ ಗ್ರಾಮೀಣ ಭಾಗದಲ್ಲಿ ಈ ರೀತಿಯ "ಜಂಡರ್ ಸಮಸ್ಯೆ"ಯನ್ನು ಕಾಣಬಹುದಾಗಿದೆ. "ಮ್ಯಾನ್ ಮೇಡ್ ಲಾಂಗ್ವೇಜ್" ಕೃತಿಯಲ್ಲಿ "ಗಂಡು ಅರ್ಥರಚನೆಯ ನಿಯಮಗಳು ಇವೆಯೆಂದೂ, ಅವು ಗಂಡಸೇನೇ ಮಾನವಜಾತಿಗೆ ಪ್ರಮಾಣವೆಂದೂ, ಹೆಂಗಸು ನಕಾರಾತ್ಮಕ ಮತ್ತು ಹೀನಾಯಳೆಂದೂ ತಿಳಿದಿವೆ. ಎಂದು ಹೇಳಲಾಗಿದೆ. ಮೊದಲನೆಯದಾಗಿ, ಈ ನಿಯಮ ಹುಟ್ಟಿದ್ದು ಹೇಗೆಂಬುದೇ ಒಂದು

ಸಮಸ್ಯೆ. ಅಲ್ಲದೆ, ಒಂದು ಕಡೆ ಈವರೆಗೆ ಪಿತೃಪ್ರಧಾನತೆಯೇ ಮೇಲುಗೈ ಪಡೆದಿದೆ ಎಂದು ಸೂಚಿಲಾಗಿದೆ. ಗಂಡಸರೇ ಯಜಮಾನರಾದ್ದರಿಂದ ಗಂಡುವ್ಯಾಖ್ಯಾನಗಳೇ ಮೇಲುಗೈ ಪಡೆದಿರುತ್ತವೆ. ಎಂದು ಹೇಳಲಾಗಿದೆ. ಇನ್ನೊಂದೆಡೆ, ಡೇಲ್ ಸ್ಪೆಂಡರ್ ಒದಗಿಸುವ ಪದ ವ್ಯುತ್ಪತ್ತಿಯ ಬದಲಾವಣೆಯ ವಿವರಣೆಗಳು ಬೇರೆ ಎನನ್ನೋ ಹೇಳುತ್ತವೆ. ಕೆಲವು ಪದಗಳು ಸ್ತ್ರೀಲಿಂಗ ರೂಪವನ್ನು ಪಡೆದುಕೊಂಡಾಗ, ಲೈಂಗಿಕ ನೆಲೆಯ ಸೂಚ್ಯಾರ್ಥಗಳನ್ನು ಹೊಂದಿ ಅಪಮೌಲ್ಯಗೊಂಡಿವೆ ಎಂದು ಆಕೆ ಹೇಳುತ್ತಾಳೆ."[೨೨]

ಜಂಡರ್ ಸಮಸ್ಯೆ ಗ್ರಾಮೀಣ ಭಾಗದಲ್ಲಿ ಅತ್ಯಂತ ಹೆಚ್ಚಿನ ರಾದ್ದಾಂತವನ್ನು ಮಾಡುತ್ತದೆ. ಅದಕ್ಕೆ ಯಮುನಾಳ ಬದುಕು ಉದಾಹರಣೆಯಾಗಿ ನಿಲ್ಲುತ್ತದೆ. ಆಧುನಿಕತೆಯ ಸೋಂಕು ತಿಳಿಯದ ಗ್ರಾಮೀಣ ಭಾಗದ ಹೆಣ್ಣು ಸಹಜವಾದ ದೈಹಿಕ ಕಾಮನೆಗಳ ಈಡೇರಿಕೆಯಿಂದ ಗರ್ಭಧರಿಸಿ, ಸಂಪ್ರದಾಯವೆನ್ನುವ ಹೆಸರಿನಲ್ಲಿ ಕೊನೆಯಾಗುತ್ತಾಳೆ. ಇದು ಕೇವಲ ಯಮುನಾಳ ಸಮಸ್ಯೆಯಲ್ಲ ಬದಲಿಗೆ ಗ್ರಾಮೀಣ ಭಾಗದ ಬಹುಪಾಲು ಮುಗ್ಧ ಹೆಣ್ಣುಮಕ್ಕಳ ಸಮಸ್ಯೆಯೂ ಕೂಡ ಆಗಿದೆ. ಪುರುಷ ಪ್ರಧಾನ ಸಮಾಜದಲ್ಲಿ ಸಹಜವಾಗಿ ಹೆಣ್ಣು ಶೋಷಣೆಗೆ ಒಳಗಾಗುತ್ತಾಳೆ ಎಂಬ ಸೂಕ್ಷ್ಮತೆಯು ಅನಂತಮೂರ್ತಿಯವರ ಕಥೆಯಲ್ಲಿ ಕಂಡುಬರುತ್ತದೆ.

ಗ್ರಾಮೀಣ ಭಾಗದ ವೈರುಧ್ಯಗಳಲ್ಲಿ ಈ ಸ್ತ್ರೀ–ಪುರುಷರ ಸಮಾಜದಲ್ಲಿನ ಏರಿಳಿತಗಳು, ದುಡಿಮೆಯ ಬದುಕನ್ನು ಕಟ್ಟಿಕೊಳ್ಳುವ ಸಂದರ್ಭದಲ್ಲಿ ಆಗುವ ಅನಾಹುತುಗಳು ನಾಗರಿಕ ಸಮಾಜಕ್ಕೆ ಎಚ್ಚರಿಕೆಯನ್ನು ತಂದೊಡ್ಡುತ್ತವೆ.

ಗ್ರಾಮೀಣ ಭಾಗದ ಹಳ್ಳಿಗಳ ದುಡಿಮೆಯ ಪ್ರತಿಫಲ ನಿರೀಕ್ಷಿಷಿಸಿದಷ್ಟು ಸಿಗದಿದ್ದರೂ, ಆ ಬದುಕನ್ನೆ ಅನಿವಾರ್ಯವಾಗಿ ಆಯ್ದುಕೊಂಡ ವ್ಯಕ್ತಿ ನಗರಕ್ಕೆ ಮುಖ ಮಾಡಲಾರ. ನಗರದ ಬದುಕು ಕೂಡ ಇದೇ ರೀತಿಯುನ್ನು ಹೊಂದಿರುತ್ತದೆ ಎಂಬುದಕ್ಕೆ ಅನಂತಮೂತಿಯವರ "ನವಿಲುಗಳು" ಕಥೆಯ ಆರಂಭದಲ್ಲಿಯೇ ಬರುವ ಪ್ರಸಂಗವನ್ನು ಗಮನಿಸಬಹುದು. "ಬೆಂಗಳೂರಲ್ಲಿ ಮನೆ ಕಟ್ಟಿಸಿದೆ; ಫೋನ್ ಹಾಕಿಸಿದೆ; ಎರಡು ಮಕ್ಕಳನ್ನೂ ಒಳ್ಳೆ ಸ್ಕೂಲಿಗೆ ಸೇರಿಸಿದೆ. ಇವುಗಳಿಂದಾಗಿ ಸಿಕಿಬಿದ್ದಿರುವ ನಾನು ಸಿಟ್ಟು ಬಂದಾಗೆಲ್ಲ 'ಹೋಗಯ್ಯ' ಎಂದು ಕೆಲಸಕ್ಕೆ ರಾಜೀನಾಮೆ ಕೊಟ್ಟ ಅಪ್ಪನಂತೆ ಬದುಕಲಾರೆ. ನಾನು ಕೆಲಸಕ್ಕೆ ಸೇರುವ ತನಕ ಅಮ್ಮ ರೇಷ್ಮೆ ಸೀರೆ ಕಂಡಿರದದ್ದಕ್ಕೆ, ನಾವು ಅರ್ಧ ಹೊಟ್ಟೆಯಲ್ಲೇ ಬೆಳೆದದ್ದಕ್ಕೆ, ವಯಸ್ಸಾದಾಗ ಅಪ್ಪ ನಮ್ಮ ಗೌರವ ಕಳೆದುಕೊಂಡದ್ದಕ್ಕೆ ಅಪ್ಪನ ಈ ಸ್ವಾತಂತ್ರ್ಯ ಪ್ರಿಯತೆ, ಹಠಮಾರಿತನಗಳೂ ಬಹು ಮುಖ್ಯ ಕಾರಣ."[೨೩]

ನಗರದ ದುಡಿಮೆಯ ಅನಿವಾರ್ಯತೆಯು ವ್ಯಕ್ತಿಯ ಆತ್ಮಸ್ಥೈರ್ಯವನ್ನು ಕುಗ್ಗಿಸುತ್ತದೆ. ತಾನು ಮಾಡುತ್ತಿರುವ ದುಡಿಮೆಯು ಬೇಸತ್ತಾಗ ಸ್ವತಂತ್ರವಾಗಿ ಹೊರಬರಲು

ಮೀನಾಮೇಷವನ್ನು ಅನುಭವಿಸುವಂತೆ ಮಾಡುತ್ತದೆ. ತಾನು ಸಾಂಸಾರಿಕ ಬದುಕಿನಲ್ಲಿ ಸೃಷ್ಟಿಸಿಕೊಂಡ ಅವಶ್ಯಕತೆಗಳು–ಅನಿವಾರ್ಯತೆಗಳು ಜೀವನವನ್ನು ಹೈರಾಣಗಿಸುತ್ತವೆ. ಸಂಕೋಲೆಗಳೆಂಬ ಅವಶ್ಯಕತೆಗಳಿಂದ ಹೊರಬರಲಾರದೆ ನರಳುವ ಸ್ಥಿತಿಯನ್ನು ತಂದೊಡ್ಡುತ್ತವೆ. "ನವಿಲುಗಳು" ಕಥೆಯ ನಾಯಕನು ಇಂಥಹದೇ ಬದುಕಿನ ಸಂಕೀರ್ಣತೆಯಲ್ಲಿ ಸಿಲುಕಿಕೊಳ್ಳುತ್ತಾನೆ. ತಂದೆಯಂತೆ ಸಿಟ್ಟು ಬಂದಾಗ ತಾನು ದುಡಿಯುತ್ತಿರುವ ಕೆಲಸ ಬೇಡವೆಂದು ಹೊರಬರಲು ಸಾಧ್ಯವಾಗುವುದಿಲ್ಲ. ಜೊತೆಗೆ ಅಪ್ಪನಂತೆ ಬದುಕಲಾರೆ ಎಂಬ ತೊಳಲಾಟ ಅವನಲ್ಲಿ ಬರುತ್ತದೆ. ತಾನು ಬಾಲ್ಯದಲ್ಲಿ ಅನುಭವಿಸಿದ ಬಡತನ ಮತ್ತು ತಾನು ಸಂಸಾರದ ಅನಿವಾರ್ಯತೆಯ 'ಸ್ವಂತ ಮನೆ', 'ಫೋನ್', 'ಮಕ್ಕಳಿಗೆ ಒಳ್ಳೆಯ ಸ್ಕೂಲು' – ಇವೆಲ್ಲವೂ ಆತನ ದುಡಿಮೆಯ ಅನಿವಾರ್ಯತೆಯನ್ನು ತೋರಿಸುತ್ತವೆ. ಗ್ರಾಮೀಣ ಭಾಗದಲ್ಲಿದ್ದ ತಂದೆಯ ಸ್ವತಂತ್ರ ನಡೆಗೂ ನಗರದಲ್ಲಿದ್ದ ಮಗನ ಅನಿವಾರ್ಯತೆಯ ನಡೆಗೂ ವ್ಯತ್ಯಾಸ ಕಂಡುಬರುತ್ತದೆ. ಮನೆ ಮತ್ತು ಫೋನ್ ಭೋಗದ ವಸ್ತುಗಳು ಆಗದಿದ್ದರೂ ಅವುಗಳು ಅವಶ್ಯಕ. ಹಾಗೆಯೇ ನಗರದ ಶಿಕ್ಷಣದಲ್ಲಿ ಸೃಷ್ಟಿಸಿರುವ ಒಳ್ಳೆಯ–ಸಾಮಾನ್ಯ ಸ್ಕೂಲ್‌ಗಳ ವ್ಯತ್ಯಾಸಗಳು ವ್ಯಕ್ತಿಯ ದುಡಿಮೆಯ ಬಹುಪಾಲು ಸಂಪಾದನೆಯನ್ನು ಕಿತ್ತುಕೊಳ್ಳುತ್ತವೆ ಎಂಬುದನ್ನು ಕಥೆಗಾರ ಸೂಕ್ಷ್ಮವಾಗಿ, ಅಷ್ಟೇ ಅನಿವಾರ್ಯ ನಗರದ ಬದುಕಿನಲ್ಲಿ ಎಂಬುದನ್ನು ತೋರಿಸಿದ್ದಾನೆ.

ಭಾರತೀಯ ಗ್ರಾಮೀಣ ಬದುಕಿನ ಸಂತೋಷವನ್ನು ಕಿತ್ತುಕೊಳ್ಳುವಲ್ಲಿ 'ಬರ'ದಂತಹ ಪ್ರಾಕೃತಿಕ ಸಮಸ್ಯೆಗಳು ಅತಿ ಮುಖ್ಯವಾಗಿರುತ್ತವೆ. ನಗರ ಕೇಂದ್ರಗಳಲ್ಲಿ 'ಕುಡಿಯುವ ನೀರಿನ ಸಮಸ್ಯೆ' ಬರಗಾಲದಲ್ಲಿ ಪ್ರಮುಖವಾಗಿ ಕಂಡುಬಂದರೆ, ಗ್ರಾಮೀಣ ಬದುಕಿನಲ್ಲಿ ಅದೇ ಬರಗಾಲದ ಮೂಲ 'ನೀರಿನ ಸಮಸ್ಯೆ' ಬದುಕನ್ನೆ ನಾಶಗೊಳಿಸುತ್ತದೆ. ಜನರ ವಲಸೆ, ಸಾವು, ಹೋರಾಟಗಳು, ಸರ್ಕಾರಗಳ ಆಡಳಿತದಲ್ಲಿ ಆಗುವ ವೈಪರೀತ್ಯಗಳು, ಅಧಿಕಾರಿ ಶಾಹಿಗಳ ಮೇಲೆ ಬೀರುವ ಪರಿಣಾಮಗಳು, ಇವುಗಳ ಜೊತೆಗೆ ಕಾಯಿಲೆಗಳು, ಜಾನುವಾರಗಳಿಗೆ ಆಗುವ ಹೊಡೆತಗಳು ಎಲ್ಲವೂ ಗ್ರಾಮೀಣ ಭಾಗವನ್ನು ದುರಂತ ಸ್ಥಿತಿಗೆ ಕೊಂಡೊಯ್ಯುತ್ತವೆ. ಭಾರತದಲ್ಲಿ ಅರವತ್ತೈದು–ಎಪ್ಪತ್ತರ ದಶಕದಲ್ಲಿ ಇಂತಹ ಕ್ಷಾಮವನ್ನು ಎದುರಿಸಿದ ನಿದರ್ಶನಗಳಿವೆ. ಸ್ವಾತಂತ್ರ್ಯ ಪೂರ್ವದಲ್ಲೂ ಇದರ ಘೋರತನವನ್ನು ಭಾರತವು ಎದುರಿಸಿದೆ. ಅನಂತಮೂರ್ತಿಯವರು "ಬರ" ಕಥೆಯಲ್ಲಿ ಇದರ ಭೀಕರತೆಯನ್ನು ತೋರಿಸುತ್ತಾರೆ. ಶಾಸಕಾಂಗ–ಕಾರ್ಯಾಂಗಗಳ ನಡುವಿನ ಘರ್ಷಣೆ, ಆಡಳಿತದ ವೈಫಲ್ಯಗಳನ್ನು ಈ ಕಥೆಯಲ್ಲಿ ಉಲ್ಲೇಖಿಸುತ್ತಾರೆ. ಜಿಲ್ಲಾಧಿಕಾರಿಯಾದ ಸತೀಶನು ಬಾಯಾರಿಕೆಯಿಂದ ಕುಡಿಯುವ ನೀರನ್ನು ಅಜ್ಜಿಯ ಬಳಿ ಕೇಳಲು ಹೋಗುವ ಸನ್ನಿವೇಶದಿಂದ ಕಥೆ ಆರಂಭವಾಗುತ್ತದೆ.

"ಅಜ್ಜಿ ಕುಡಿಯಲು ನೀರು ಕೊಡ್ತೀರ?" ಎಂದ.

ಅವನ ಪಿ.ಎ. ನರಹರಿ, ಜೊತೆಯಲ್ಲಿ ಬಂದ ದಫೇದಾರ ಗುಡಿಸಿಲಿನ ಎದುರಿದ್ದ ಬಯಲಿನಲ್ಲಿ ಬಿಸಿಲಿಗೆ ಹೊಳೆಯುತ್ತಿದ್ದ ಎಲುಬುಗೂಡನ್ನು ಪರೀಕ್ಷಿಸಿ ನೋಟ್ ಮಾಡಿಕೊಳ್ಳಲು ಹೋಗಿದ್ದರು: ಕ್ಷಾಮದಿಂದ ಸತ್ತದ್ದೊ? ಬಿಸಾಕಿದ ದನದ ಹೆಣವೊ? ದಾರಿಯಲ್ಲಿ ಬರುವಾಗ ಇಂಥದೇ ಹತ್ತು ಎಲುಬು ಗೂಡುಗಳನ್ನು ಸತೀಶ ಎಣಿಸಿದ್ದ.

ಇನ್ನೆರಡು ಸಾರಿ ಕರೆದ ಮೇಲೆ ಅಜ್ಜಿ ಮೆಲ್ಲಗೆ ಕಣ್ಣು ತೆರೆದಳು. ಮಲಗಿದಲ್ಲೇ ಅವನನ್ನು ಅಸ್ಪಷ್ಟವಾಗಿ ನೋಡುತ್ತ,

"ನೀರು ಕೊಡಲ್ಲ" ಎಂದಳು.

ಸತೀಶನಿಗೆ ತಕ್ಷಣ ಏನು ಮಾಡಬೇಕು ತಿಳಿಯಲಿಲ್ಲ.

"ಒಂದೇ ಗುಟುಕು ಸಾಕು ಅಜ್ಜಿ."

ಅವಳು ನೀರನ್ನು ನಿರಾಕರಿಸಿದ್ದು ತನ್ನಂತೆ ಅವಳನ್ನೂ ಕುಗ್ಗಿಸಿರಬಹುದು. ಈಗ ತಾನು ಸುಮ್ಮನೇ ಹೋಗಿಬಿಟ್ಟರೆ ಮುದುಕಿ ಆಮೇಲೆ ಪಶ್ಚಾತ್ತಾಪದಿಂದ ಕೊರಗಿಯಾಳು. ಯಾರ ಮೇಲೆ ಏನು ಸಿಟ್ಟೋ? ಅವಳಿಗೆ ಸಮಾಧಾನವಾಗಲಿ ಎಂದು ಒಲಿಸುವ ಧ್ವನಿಯಲ್ಲಿ ಕೇಳಿದ.

"ಬಾಯಿ ಒದ್ದೆಯಾದರೂ ಸಾಕಜ್ಜಿ. ಹಾಳು ಬಿಸಿಲು."

ಮುದುಕಿ ಎದ್ದು ಕೂತಳು. ತೆವಳುತ್ತ ಒಳಗೆ ಹೋದಳು. ನೀರಿಡುವ ಮಡಕೆಯನ್ನು ಎತ್ತಿಕೊಂಡು ತೆವಳುತ್ತಲೇ ಬಂದಳು. ಸತೀಶ ಬೊಗಸೆ ಮಾಡಿದ. ಮುದುಕಿ ಮಡಕೆಯನ್ನು ಬೋರಲಾಗಿ ಮಗುಚಿದಳು. ಮಡಕೆಯಲ್ಲಿ ಒಂದೇ ಒಂದು ತೊಟ್ಟು ನೀರು ಇರಲಿಲ್ಲ."[೨೪]

ಬರಗಾಲದ ಸಂದರ್ಭದಲ್ಲಿ, ಬಡತನದ ಸುಳಿಯಲ್ಲಿ ಸಿಲುಕಿ ವಯಸ್ಸಾದ ವ್ಯಕ್ತಿಗಳಿಗೆ ಅಧಿಕಾರಿ ಶಾಹಿ ವರ್ಗದವರು ಕೇವಲ ಸಾಮಾನ್ಯ ವ್ಯಕ್ತಿಗಳಾಗಿ ಕಾಣುತ್ತಾರೆ. ಜಿಲ್ಲಾಧಿಕಾರಿ, ಪಿ.ಎ., ದಫೇದಾರನು ಅಜ್ಜಿಯ ದೃಷ್ಟಿಯಲ್ಲಿ ಕೇವಲ ಸಾಮಾನ್ಯ ಮನುಷ್ಯರು ಅಷ್ಟೆ. ಅವರಿಗೆ ಯಾವ ವಿಶೇಷ ಸತ್ಕಾರಗಳು ಇಲ್ಲ. ಬಾಯಾರಿದ ಸತೀಶನು ನೀರನ್ನು ಬೇಡುವ ಸಂದರ್ಭದಲ್ಲಿ ಮುದುಕಿ ಯಾವ ಪ್ರತಿಕ್ರಿಯೆಯನ್ನು ತೋರುವುದಿಲ್ಲ. ಒಂದು ಕಡೆ ಜಾನುವಾರುಗಳು ಸಾಯುತ್ತಿರುವುದು, ಮತ್ತೊಂದು ಕಡೆ ತನ್ನ ಮೊಮ್ಮಗನ್ನ ದಸ್ತಗಿರಿ ಮಾಡಿರುವುದು ಮುದುಕಿಯು ಅಧಿಕಾರಿಗಳನ್ನು ತಿರಸ್ಕಾರವಾಗಿ ನೋಡಲು ಕಾರಣವಾಗುತ್ತದೆ. ಆಸರೆಯಾಗ ಬೇಕಾದ ಮೊಮ್ಮಗನನ್ನು ದಸ್ತಗಿರಿ ಮಾಡಿರುವ ಸರ್ಕಾರದ ನಿರ್ಧಾರಗಳ ವಿರುದ್ಧ ಅನ್ನ-ನೀರನ್ನು ನಿರಾಕರಿಸಿ ಪ್ರತಿಭಟಿಸುವ ರೀತಿಯಂಥೂ ವಿಭಿನ್ನವಾಗಿದೆ. ಗ್ರಾಮೀಣ ಭಾಗದಲ್ಲೂ ಗಾಂಧೀತತ್ವವನ್ನು ಪ್ರತಿಭಟನೆಯ ಮೂಲಕ ತೋರುವ ವ್ಯಕ್ತಿಗಳನ್ನು ಕಥೆಗಾರರು ಇಲ್ಲಿ ತರುತ್ತಾರೆ.

ಜಿಲ್ಲಾಧಿಕಾರಿಯು ಬಾಯಾರಿಕೆಯಿಂದ ನೀರನ್ನು ಬೇಡುವ ಸ್ಥಿತಿಯು ಸಹಜವಾಗಿ ಕ್ಷಾಮದ ಭೀಕರತೆಗೆ ಸಾಕ್ಷಿಯಾಗಿದೆ. ಒಂದು ಗುಟುಕು, ಕನಿಷ್ಟ ಬಾಯಿ ಒದ್ದೆಯಾದರೂ ಸಾಕು ಎನ್ನುವ ಸತೀಶನ ಬೇಡಿಕೆಗೆ ಮುದುಕಿಯು ಅಷ್ಟೆ ತಿರಸ್ಕೃತಳಾಗಿ ಖಾಲಿ ಮಡಕೆಯನ್ನು ಬೋರಲಾಗಿ ಬಗ್ಗಿಸುವ ರೀತಿಯು  ಅಸಹಾಯಕ ವಯಸ್ಸಾದ ಹೆಣ್ಣಿನ ಕೋಪ ಮತ್ತು ಅಧಿಕಾರ ಶಾಹಿಯ ವಿರುದ್ಧ ಪ್ರತಿಭಟಿಸುವ ರೀತಿಯನ್ನು ನೋಡಬಹುದು. ಗ್ರಾಮೀಣ ಭಾಗದಲ್ಲಿ ಜಾನುವಾರುಗಳೇ ಜೀವಾಳ. ಬರಗಾಲದ ಭೀಕರತೆಗೆ ಅವುಗಳು ಸತ್ತರೆ, ಬದುಕಿನ ಊರುಗೋಲು ನಾಶವಾದಂತೆ ಆಗುತ್ತದೆ. ಸದಾ ಗ್ರಾಮೀಣ ಭಾಗವು ಮೂಲಭೂತ ಸಮಸ್ಯೆಗಳನ್ನು ಎದುರಿಸುತ್ತಲೇ ಬಂದಿದೆ. ಇಂತಹ ಸಂದರ್ಭದಲ್ಲಿ ಅತಿವೃಷ್ಟಿ ಮತ್ತು ಅನಾವೃಷ್ಟಿ ಅವರಿಗೆ ಬದುಕು ದಾರಿತಪ್ಪಲು ಕಾರಣವಾಗುತ್ತದೆ. ಎಂಬುದನ್ನು ಈ ಕಥೆಯು  ತೋರಿಸುತ್ತದೆ.

ಅನಂತಮೂರ್ತಿಯವರ ದೇಶಿಯ ಪರಿಕಲ್ಪನೆಯಲ್ಲಿ ರೂಪುಗೊಂಡು, ಗ್ರಾಮೀಣ ಮೌಢ್ಯತೆಯ ಮೂರ್ತಿಯಾಗಿರುವ ಹಡೆ ವೆಂಕಟನ ಬದುಕನ್ನು ಪ್ರಧಾನವಾಗಿಟ್ಟುಕೊಂಡು ರಚನೆಯಾಗಿರುವ ಕಥೆ    "ಸೂರ್ಯನ ಕುದುರೆ".  ಸೂರ್ಯನ ಕುದುರೆ ಮಲೆನಾಡಿನಲ್ಲಿ ಕಂಡುಬರುವ ಅನೇಕ ಕೀಟಗಳಲ್ಲಿ ಒಂದು. ಇಂತಹ ಕೀಟದ ರೂಪಾಂತರದಂತೆ ಹಡೆ ವೆಂಕಟನನ್ನು ಕಥೆಗಾರ ಚಿತ್ರಿಸಿದ್ದಾನೆ.

ಗ್ರಾಮೀಣ ಭಾಗದಲ್ಲಿ ಮುಗ್ದ, ಸೋಮಾರಿ ವ್ಯಕ್ತಿಗಳು ಇರುತ್ತಾರೆ. ಅಂಥ ಒಂದು ಉದಾಹರಣೆಯಾಗಿ "ಸೂರ್ಯನ ಕುದುರೆ"ಯ ವೆಂಕಟನು ಕಾಣುತ್ತಾನೆ. ಕೌಟುಂಬಿಕವಾಗಿ ಅನೇಕ ಸಮಸ್ಯೆಗಳು ತಲೆದೋರಿದರೂ ಕೂಡ ಬೇರೆಯವರಿಗೆ ಸಹಾಯ ಮಾಡುವ, ಸದಾ ಉತ್ಸಾಹದಿಂದ ಕೂಡಿರುವ ವ್ಯಕ್ತಿಯಾಗಿ ಕಾಣಿಸಿಕೊಳ್ಳುತ್ತಾನೆ.

ವೆಂಕಟನ ಅತಿಥಿ ಸತ್ಕಾರಕ್ಕೆ ಕಥೆಗಾರರೆ ಬೆರಗಾಗುತ್ತಾರೆ. ಆತನ ಮಗನು ನಗವನ್ನು ಕದ್ದು ತೆಗೆದುಕೊಂಡು ಹೋಗಿದ್ದರೂ ಕೂಡ ಏನೂ ಕೂಡ ಆಗದವನಂತೆ ನಿರುಪದ್ರವಿಯಾಗಿ ಕಥೆಗಾರನಿಗೆ ಕಾಣಿಸಿಕೊಳ್ಳುವ ವೆಂಕಟನು ಗ್ರಾಮೀಣ ಭಾಗದ ಮುಗ್ದತೆಯ ಸಂಕೇತವಾಗಿ ಕಾಣುತ್ತಾನೆ. ಆದರೆ ಜೀವನೋತ್ಸಾಹಕ್ಕೇನೂ ಕೊರತೆ ಇಲ್ಲದಂತೆ ಇರುವುದರಲ್ಲಿ ಸುಖ ಕಾಣುತ್ತಾನೆ. ಬೇಲಿಯ ಮೇಲೆ ಹೋಗುವ "ಸೂರ್ಯನ ಕುದುರೆ"ಯನ್ನು ನೋಡಿ ಖುಷಿಗೊಳ್ಳುತ್ತಾನೆ. ವೆಂಕಟನ ಮಗನಾದ ಸುಬ್ಬುವಂಥ ಮಗನ ವಿಚಿತ್ರ ನಡುವಳಿಕೆಯ ನಡುವೆಯೂ ಬತ್ತದ ಅವನ ಸಂತೋಷ, ಗ್ರಾಮೀಣ ಭಾಗದ ಮುಗ್ದ ಮನಸ್ಸಿನ ಸಂಕೇತವಾಗಿ ಕಂಡುಬರುತ್ತದೆ.

ನಗರ ಮತ್ತು ಗ್ರಾಮೀಣ ಭಾಗದ ನಡುವಿನ ಸೇತುಕೊಂಡಿಯಾಗಿ, ವಿಭಿನ್ನ ನೆಲೆಗಟ್ಟಿನಲ್ಲಿ "ಬೇಟೆ, ಬಳೆ ಮತ್ತು ಓತಿಕೇತ" ಕಥೆ ಕಂಡುಬರುತ್ತದೆ. ಈ ಕಥೆಯಲ್ಲಿ ಪ್ರೇಮದ ಸೆಳೆತ,

ವಂಚನೆಯಿದೆ. ಇವೆರಡಕ್ಕೂ ಬಲಿಯಾದ ಹಸೀನಳ ಬದುಕು ಕಂಡುಬರುತ್ತದೆ. ಹಸೀನಳ ಮಗಳಾದ ಜ್ಯೋತಿಯ ಮುಂದುವರೆದ ಬದುಕು ಕಂಡುಬರುತ್ತದೆ. ಇವೆಲ್ಲದರ ಜೊತೆಗೆ ಗ್ರಾಮೀಣ ಭಾಗಗಳು ಸಂಪತ್ತುಗಳ ಆಗರಗಳಾಗಿ ವಿದೇಶಿ ಕಳ್ಳರು ದೋಚುವ ಖನಿಜಗಳನ್ನು ಹೊಂದಿರುವ ಸ್ಥಳವಾಗಿ ಕಂಡುಬಂದಿದೆ. ಜೊತೆಗೆ ಬದುಕಿನ ಅಸ್ತಿತ್ವವನ್ನು ಹುಡುಕಲು ಹೊರಟ ಹಸೀನಾಳ ದುರಂತ ಚಿತ್ರಣವನ್ನು ಈ ಕಥೆಯಲ್ಲಿ ಅನಂತಮೂರ್ತಿಯವರು ತರುತ್ತಾರೆ. ಶೀರ್ಷಿಕೆಯಲ್ಲಿರುವ ಬಳೆ ಮತ್ತು ಓತಿಕೇತಗಳು ಕೇವಲ ಸಂಕೇತಗಳಾಗಿ ಕಂಡುಬಂದರು, ಗ್ರಾಮೀಣ ಮತ್ತು ನಗರದ ಬದುಕಿನಲ್ಲಾಗುವ ತಲ್ಲಣಗಳನ್ನು ಕಥೆಗಾರ ಓದುಗನಿಗೆ ನೀಡುತ್ತಾನೆ.

ಒಟ್ಟಾರೆಯಾಗಿ ತೇಜಸ್ವಿಯವರ ಗ್ರಾಮೀಣ ಭಾಗದ ಸಮಷ್ಠೀಗುಣ, ಲಂಕೇಶರ ನಗರ ಮತ್ತು ಗ್ರಾಮೀಣ ಭಾಗದ ತಿರಸ್ಕಾರದ ಮನಸ್ಥಿತಿಗಳು, ಅನಂತಮೂರ್ತಿಯವರ ಬದುಕಿನ ಅಸ್ತಿತ್ವದ ಕಡೆಗಿನ ಹೋರಾಟಗಳು, ನಗರ ಮತ್ತು ಗ್ರಾಮೀಣ ಭಾಗದಲ್ಲಿ ಮುಖಾಮುಖಿಯಾಗುವುದು ಅವರ ಕಥೆಗಳಲ್ಲಿ ಕಂಡುಬರುತ್ತವೆ.

**೪.೨. ಭಾರತೀಯ – ಪಾಶ್ಚಿಮಾತ್ಯ ಜನ ಜೀವನದ ಮುಖಾಮುಖಿ.**

ಒಂದು ದೇಶದ ಜನಜೀವನವನ್ನು ಪ್ರತಿಬಿಂಬಿಸುವುದು ಅಲ್ಲಿನ ಸಾಂಸ್ಕೃತಿಕ ಸ್ಥಿತಿಗತಿಗಳು. ಅವರ ಆಚಾರ–ವಿಚಾರಗಳು, ಉಡುಗೆ–ತೊಡುಗೆಗಳು, ಆಹಾರ ಪದ್ದತಿ, ಆರ್ಥಿಕ ಪರಿಸ್ಥಿತಿಗಳ ಒಟ್ಟು ನಡವಳಿಕೆಗಳನ್ನು ಸಂಸ್ಕೃತಿ ಎಂದು ಕರೆಯಲಾಗುತ್ತದೆ. ದೇಶಿಯವಾಗಿ ತಮ್ಮದೆ ಆದ ಭಾರತೀಯ ಸಂಸ್ಕೃತಿಯ ಮೇಲೆ ವಸಾಹತು ಚಿಂತನೆಯ ಪ್ರಭಾವದಿಂದ ಭಾರತೀಯ ಚಿಂತನೆಯ ಕ್ರಮಗಳು ಬದಲಾವಣೆಯನ್ನು ಪಡೆಯತೊಡಗಿದವು.

ನಮ್ಮ ಭಾರತೀಯ ಸಂಸ್ಕೃತಿಯ ಮಹತ್ವವನ್ನು ಕೇವಲ ಒಂದು ಧರ್ಮಕ್ಕೆ ಸೀಮಿತವಾಗಿ ಅಳವಡಿಸಬಾರದು. ರಹಮತ್ ತರೀಕೆರೆಯವರು "ಭಾರತವು ಬಹುಸಾಂಸ್ಕೃತಿಕ ದೇಶ. ಅನೇಕ ಭಾಷೆ, ಪ್ರಾಂತ್ಯಗಳು, ಹಲವು ಜಾತಿ, ಧರ್ಮಗಳು ಇದ್ದು, ಈ ಕಾರಣಕ್ಕಾಗಿಯೇ ಹಲವು ಬಗೆಯ ಆಚರಣೆ, ನಂಬಿಕೆ, ಉಡುಗೆ ತೊಡುಗೆಗಳು ಇವೆ. ಏಕರೂಪಿಯಾದ ಜೀವನ ಕ್ರಮ ಎಂಬುದು ಭಾರತದಲ್ಲಿ ಮೊದಲಿಂದಲೂ ಇಲ್ಲ. ಇದೊಂದು ನಮ್ಮ ದೇಶಕ್ಕೆ ವಿಶಿಷ್ಟವಾದ ವೈವಿಧ್ಯ ಎಂಬ ವಾದಗಳಿವೆ. ಇದನ್ನು ಸಾಂಸ್ಕೃತಿಕ ಬಹುತ್ವ ಅಥವಾ ಸಾಂಸ್ಕೃತಿಕ ಅನೇಕತೆ ಎಂದೂ ಕರೆಯಲಾಗುತ್ತದೆ. ಈ ಬಹುತ್ವವು ಒಂದು ಸಮುದಾಯ, ಜಾತಿ, ಧರ್ಮ ಅಥವಾ ಪ್ರದೇಶದ ಸಂಸ್ಕೃತಿಗೆ ಮಾತ್ರ ಮೀಸಲಿಲ್ಲ. ಪ್ರತಿಯೊಂದು ಸಂಗತಿಯೂ ತನ್ನ ಜತೆಯಲ್ಲಿ ಇರುವುದರ ಪ್ರಭಾವಕ್ಕೆ ಒಳಗಾಗಿಯೇ ತೀರುತ್ತದೆ. ಸಾಮಾನ್ಯವಾಗಿ ಜನ ತಮ್ಮ ಮನೆಮಾತಿನ ಜತೆ ಪರಿಸರದ ಭಾಷೆಗಳನ್ನು ಕಲಿಯುತ್ತಾರೆ. ತಮ್ಮ ಮತದ ಹಬ್ಬಗಳನ್ನು ಮಾತ್ರವಲ್ಲ, ಇತರೆ ಮತಗಳ ದೈವಗಳಿಗೂ

ನಡೆದುಕೊಳ್ಳುತ್ತಾರೆ. ಕರ್ನಾಟಕದ ಎಷ್ಟೋ ಹಳ್ಳಿಗಳಲ್ಲಿ ಮೊಹರಂ ಆಚರಣೆ ಕೇವಲ ಮುಸ್ಲಿಮರದಾಗಿಲ್ಲ. ಅದು ತನ್ನ ಧಾರ್ಮಿಕ ಗಡಿಯನ್ನು ದಾಡಿ ಇಡೀ ಊರಹಬ್ಬವಾಗಿದೆ. ಇದು ಭಾರತದ ಸಾಂಸ್ಕೃತಿಕ ವಿಶೇಷತೆ. ಇದು ಎಲ್ಲ ಧರ್ಮದವರಿಗೂ ಜಾತಿಯವರಿಗೂ ಅನ್ವಯವಾಗುತ್ತದೆ. ಇದನ್ನು ಸಾಂಸ್ಕೃತಿಕ ಬಹುತ್ವದ ಅಪೂರ್ವ ಗುಣ ಎನ್ನಲಾಗುತ್ತದೆ."[೨೫] ಎಂದು ಅಭಿಪ್ರಾಯ ಪಡುತ್ತಾರೆ.

ಭಾರತೀಯ ಸಂಸ್ಕೃತಿಯಲ್ಲಿ ಧರ್ಮ ಸೌಹಾರ್ದತೆಗೆ ಅತಿ ಹೆಚ್ಚಿನ ಪ್ರಾಮುಖ್ಯತೆ ಇದೆ. ಅದು ಹಿಂದೂ ಧರ್ಮವಾಗಿರಬಹುದು, ಮುಸ್ಲಿಂ ಧರ್ಮವಾಗಿರಬಹುದು, ಕ್ರೈಸ್ತ, ಜೈನ, ಬೌದ್ಧ, ಸಿಖ್ ಹೀಗೆ ನಾನಾ ಬಗೆಯ ಧರ್ಮಗಳಾಗಿರಬಹುದು ಸಂವಿಧಾನದಡಿಯಲ್ಲಿ ಪ್ರತಿಯೊಂದು ಧರ್ಮದವರು ತಮ್ಮದೇ ಆದ ಸಂಸ್ಕೃತಿಯನ್ನು ಹೊಂದಿದ್ದು, ಒಟ್ಟಾರೆಯಾಗಿ ಭಾರತ ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಿದೆ. ಅಲ್ಪ ಮತೀಯ ವರ್ಗದಿಂದ ಇಂದು ಮತೀಯ ಸಂಘರ್ಷಗಳು ಆಗಾಗ್ಗೆ ಆಗುತ್ತಿರುವುದು ಮಾತ್ರ ದುರಾದೃಷ್ಟಕರ.

ಕನ್ನಡ ಸಾಹಿತ್ಯಕ್ಕೆ ಸೀಮಿತಗೊಳಿಸಿಕೊಂಡು ನೋಡಿದಾಗ ತೇಜಸ್ವಿ, ಅನಂತಮೂರ್ತಿ, ಲಂಕೇಶರ ಸಾಹಿತ್ಯ ಕೃತಿಗಳು ವಸಾಹತೋತ್ತರ ಸಮಾಜ ಕೇಂದ್ರಿತ ಸಂಸ್ಕೃತಿಯನ್ನು ಗಮನದಲ್ಲಿಟುಕೊಂಡು ಕೃತಿಗಳನ್ನು ರಚಿಸ ತೊಡಗಿದರು.

ತೇಜಸ್ವಿಯವರ ಮೇಲೆ ಲೋಹಿಯಾರವರ ಚಿಂತನೆ, ಕುವೆಂಪುರವರ ಕಲಾಸೃಷ್ಟಿ, ಕಾರಂತರ ಜೀವನದೃಷ್ಟಿ ಮತ್ತು ಬದುಕಿನ ಪ್ರಯೋಗಶೀಲತೆಗಳ ಚಿಂತನೆಗಳು ಹೆಚ್ಚಿನ ಪ್ರಭಾವವನ್ನು ಬೀರಿದವು. ಲಂಕೇಶರ ಸಾಹಿತ್ಯದ ಕೃತಿಗಳ ಮೇಲೆ ಆಯ ಕಾಲದ ಸಾಹಿತ್ಯ ಚಿಂತನೆಗಳು ಪ್ರಭಾವ ಬೀರಿದರೆ ವಸಾಹತುಶಾಹಿ ಚಿಂತನೆಗಳು ಅನಂತಮೂರ್ತಿಯವರು ಅಳವಡಿಸಿಕೊಳ್ಳಲು ಪೂರಕವಾದ ವಾತಾವರಣವನ್ನು ಉಂಟುಮಾಡಿದವು. ಒಟ್ಟಾರೆಯಾಗಿ ಸಾಹಿತ್ಯದ ಮೇಲೆ ವಸಾಹತು ಶಾಹಿ ಮತ್ತು ವಸಾಹತ್ತೋತ್ತರ ಸಮಾಜ ಕೇಂದ್ರಿತ ಸಂಸ್ಕೃತಿಗಳು ಅತಿ ಹೆಚ್ಚಿನ ಮಹತ್ವವನ್ನು ಬೀರಿರುವ ಕಥೆಗಾರರ ಕಥೆಗಳನ್ನು ಅಧ್ಯಯನ ಮಾಡಿದಾಗ ಕಂಡುಬರುತ್ತದೆ.

ಭಾರತೀಯ ಸಾಹಿತ್ಯವನ್ನು ಸಾಮಾಜಿಕ ನೆಲೆಗಟ್ಟಿನಲ್ಲಿ ಅಧ್ಯಯನ ಮಾಡಿದಾಗ, ಜಾತಿ–ಧರ್ಮ ಕೇಂದ್ರಿಕೃತವಾದ ವಿಚಾರಗಳು, ಆರ್ಥಿಕ ಸಮಾಜ, ರಾಜಕೀಯ ವಿಚಾರಗಳು ವ್ಯಕ್ತಿಯ ಬದುಕಿನ ಮೇಲೆ ಬೀರುವ ಪ್ರಭಾವಗಳನ್ನು ಗಮನಿಸಬಹುದು.

ತೇಜಸ್ವಿಯವರು ಜಾತಿ ಕೇಂದ್ರಿತ ಭಾರತೀಯ ಜನಜೀವನದಲ್ಲಿ ಅತಿ ಪ್ರಧಾನವಾಗಿರುವ ಅಂಶಗಳ ಬಗ್ಗೆ ತಮ್ಮದೇ ಅದ ನಿಲುವನ್ನು ಹೊಂದಿದ್ದಾರೆ. ಅಂಬೇಡ್ಕರ್‌ರವರ ಮೀಸಲಾತಿಯ ಕಲ್ಪನೆ ಇದ್ದದು "ಹಿಂದುಳಿದ ವರ್ಗಗಳನ್ನು ಜಾತಿಗಳ ಮೂಲಕವೇ ಗುರುತಿಸಿ ಮೇಲೆತ್ತಬೇಕಾಗುತ್ತದೆಂದು ಅವರು ಮೀಸಲಾತಿಯನ್ನು ಸಂವಿಧಾನದಲ್ಲಿ ಅಳವಡಿಸಿದರು.

ಮೀಸಲಾತಿಯ ಹಿಂದಿನ ಅವರ ಉದ್ದೇಶ ಭಾರತವನ್ನು ಜಾತ್ಯತೀತ ರಾಷ್ಟ್ರವನ್ನಾಗಿ ರೂಪಿಸಬೇಕೆಂಬುದೇ ಹೊರತು ವರ್ಣಾಶ್ರಮ ಧರ್ಮದ ಜಾತೀಯ ರಾಷ್ಟ್ರವಾಗಿ ರೂಪಿಸಬೇಕೆಂಬುದಂತೂ ಅಲ್ಲ." ೨

ತೇಜಸ್ವಿಯವರ ಮಾತನ್ನು ಗಮನಿಸುತ್ತಾ ಸಾಗಿದಂತೆ ಅಂಬೇಡ್ಕರ್ ಅವರ ಮೀಸಲಾತಿ ಇಂದು ಜಾತಿಗಳ ಉದಯಕ್ಕೆ ಕಾರಣವಾಗಿ ಭಾರತ ಜಾತಿ ರಾಷ್ಟ್ರವಾಗುತ್ತಿದೆ. ಸಣ್ಣ ಪುಟ್ಟ ಜಾತಿಗಳಿಗೆ ಉಪಜಾತಿಗಳು ಹೆಚ್ಚಾಗಿ ರಾಜಕೀಯ ಆಶ್ರಯ ಕೇಂದ್ರವಾಗುತ್ತಿರುವುದು ಭಾರತದ ರಾಷ್ಟ್ರಕ್ಕೆ ಮಾರಕವಾಗಿ ಪರಿಣಮಿಸಿದೆ. ಉದ್ಯೋಗ ಮೀಸಲಾತಿ ಕಾರಣಕ್ಕಾಗಿ ಅಂತರ್ಜಾತಿಯ ವಿವಾಹಗಳು ನಡೆಯುತ್ತಿವೆಯೇ ಹೊರತು ಭಾರತದಲ್ಲಿ ಜಾತಿಯನ್ನು ಹೋಗಲಾಡಿಸಲು ಅಲ್ಲವೆಂಬುದು ಸತ್ಯವಾಗಿದೆ. ಮುಂದೆ ಸರ್ಕಾರದ ನೀತಿಗಳು ಅಂತರ್ಜಾತಿಯ ವಿವಾಹವನ್ನು ಪ್ರೋತ್ಸಾಹಿಸುವುದನ್ನು ಪರೋಕ್ಷವಾಗಿ ತಡೆಗಟ್ಟಲು ಅನೇಕ ತಂತ್ರಗಳನ್ನು ಮೇಲ್ವರ್ಗದ ಜನತೆಗೂ ಮೀಸಲಾತಿಯನ್ನು ನೀಡಲು ಮುಂದಾಗಿವೆ. ಪರಿಣಾಮವಾಗಿ ಮತ್ತದೆ ಆರ್ಥಿಕ ಮತ್ತು ಸಾಮಾಜಿಕ ಕಂದಕಗಳನ್ನು ನಿರ್ಮಿಸ ಹೊರಟಿದೆ.

ತೇಜಸ್ವಿಯವರ "ಹುಲಿಯೂರಿನ ಸರಹದ್ದು" ಕಥೆಯನ್ನು ಗಮನಿಸಿದಾಗ ಕೋಳಿ ಮರಿಯನ್ನು ಹಿಡಿಯಲು ಬರುವ 'ಹದ್ದು' ತನ್ನ ಎಲ್ಲೆಯನ್ನು ಮೀರಿ ನಿಲ್ಲುತ್ತದೆ. ಕಥೆಯಲ್ಲಿನ ಸೋಮು ಅನ್ಯಜಾತಿಯ ನಳಿನಾಕ್ಷಿಯನ್ನು ಮದುವೆಯಾಗಲು ಮುಂದಾಗುತ್ತಾನೆ. ಜಾತಿಯ ಎಲ್ಲೆಯನ್ನು ಮೀರಿ ಅಂತರ್‌ಜಾತಿಯ ವಿವಾಹಕ್ಕೆ ಮುಂದಾಗುತ್ತಾನೆ. ಈ ಕಥೆಯಲ್ಲಿ ಬಹುಮುಖ್ಯವಾಗಿ ಗಮನಿಸಬೇಕಾದುದು ನಗರದ ಆಧುನಿಕ ಶಿಕ್ಷಣದ ಪ್ರಭಾವವು ಸೋಮುವಿಗೆ ಆದ ಪರಿಣಾಮದಿಂದಲೇ ಆತನು ಜಾತಿ ಆಚಾರ ವಿಚಾರಗಳು ಕೇವಲ ಕೆಲವರ ಲಾಭಕ್ಕಾಗಿ ಎಂದು ನಿರ್ಧರಿಸುತ್ತಾನೆ. ಭಾರತೀಯ ಸಮಾಜದ ವೈಶಿಷ್ಟತೆಯಲ್ಲಿ ಆಧುನಿಕ ಶಿಕ್ಷಣ ಬಹುಮುಖ್ಯ ಪ್ರಭಾವ ಬೀರುವುದನ್ನು ಈ ಕಥೆ ಪ್ರತಿಬಿಂಬಿಸುತ್ತದೆ. ಜೊತೆಗೆ ಅಂತರ್ಜಾತಿಯ ವಿವಾಹವೂ ಸ್ವಲ್ಪ ಮಟ್ಟಿನ ಭಾರತೀಯ ಜಾತೀಯ ಸಮಸ್ಯೆಯನ್ನು ಬಗೆಹರಿಸುತ್ತದೆ ಎಂಬುದು ತೇಜಸ್ವಿಯವರ ಆಶಯವಾಗಿತ್ತು ಎಂಬುದನ್ನು ಕಥೆಯ ಮೂಲಕ ತಿಳಿಯುತ್ತದೆ.

ವಸಾಹತೋತ್ತರ ಭಾರತೀಯ ಸಮಾಜದಲ್ಲಿ ಜಾತಿಯ ಜೊತೆಗೆ ಅತಿದೊಡ್ಡ ಪಿಡುಗಾಗಿ ಕಂಡು ಬಂದಿರುವ ಮತ್ತೊಂದು ಸಮಸ್ಯೆ ಅಂತರ್‌ಧರ್ಮೀಯತೆಗಳ ನಡುವೆ ನಡೆಯುವ ಗಲಭೆಗಳು. ಅವುಗಳನ್ನೆ ಇಂದು ಕೋಮು ಗಲಭೆಗಳೆಂದು ಕರೆಯಲಾಗುತ್ತಿದೆ. ಅಂತರ್ ಧರ್ಮೀಯತೆಯ ಕಾರಣಗಳು ಭಾರತೀಯರು ರಾಜಕೀಯ ಮತ್ತು ಸಾಮಾಜಿಕವಾಗಿ ಅತಿ ದೊಡ್ಡ ಸಮಸ್ಯೆಯನ್ನು ಎದುರಿಸಲು ಕಾರಣವಾಗುತ್ತಿದೆ. ರಾಜಕೀಯ ಲಾಭಕ್ಕಾಗಿ, ಜಾತ್ಯಾತೀತ ಭಾರತೀಯ ಸಮಾಜದಲ್ಲಿ ಜಾತಿಯಷ್ಟೆ ಪ್ರಧಾನವಾಗಿ ಕೋಮುಗಲಭೆಗಳು

ಹೆಚ್ಚಾಗಿ ನಡೆಯುತ್ತಿವೆ. ಗ್ರಾಮೀಣ ಭಾಗದಲ್ಲಿ ಇದರ ವಾಸನೆ ಕಡಿಮೆಯಿದ್ದರೂ ಬದಲಾದ ಭಾರತೀಯ ಮನಸ್ಸುಗಳು ಇಂದು ಇದರ ಹಿಂದೆ ಬಿದ್ದಿವೆ.

ತೇಜಸ್ವಿಯವರ 'ಅಬಚೂರಿನ ಪೋಸ್ಟಾಫೀಸು' ಕಥೆಯು ಮಹತ್ವದ ಪಲ್ಲಟವನ್ನು ಸೂಚಿಸುತ್ತದೆ. ಈ ಕಥೆಯಲ್ಲಿ ಸಮಾಜ ಮುಖಿ ಮತ್ತು ಸಂಸ್ಕೃತಿ ಮುಖಿಯಾಗಿವೆ. ಭಾರತೀಯ ಸಾಮಾಜಿಕ ಹಿನ್ನೆಲೆಯಲ್ಲಿನ ಗ್ರಾಮೀಣ ಪ್ರದೇಶಗಳು ಆಧುನಿಕ ಸಂಸ್ಕೃತಿಯನ್ನು ಅಳವಡಿಸಿಕೊಳ್ಳುವಾಗ ಆಗುವ ಸಮಸ್ಯೆಗಳು ಮತ್ತು ಸವಾಲುಗಳು ಇದರಲ್ಲಿ ಕಂಡುಬರುತ್ತವೆ. ಭಾರತೀಯ ಸಮಾಜದ ಜನತೆಯ ಅತಿ ದೊಡ್ಡ ಸಮಸ್ಯೆಯೆಂದರೆ ಮೂಢನಂಬಿಕೆಗಳು. ಇಂದಿಗೂ ಈ ಮೂಢನಂಬಿಕೆಗಳು ಗ್ರಾಮೀಣ ಭಾಗದ ಭಾರತದಲ್ಲಿ ಜೀವಂತವಾಗಿವೆ ಯಾದರೂ, ನಗರವು ಇದರಿಂದೇನು ಮುಕ್ತವಾಗಿಲ್ಲ. ಇದರ ಜೊತೆಗೆ ಜಾತಿ, ವರ್ಗ ಮತ್ತು ರಾಜಕೀಯ ವಿಚಾರಗಳು ಒಂದೆಡೆ ಸೇರಿದರೆ ಆಗುವ ಪರಿಣಾಮಗಳು ವ್ಯಕ್ತಿಗಳ ನಾಶಕ್ಕೆ ಕಾರಣವಾಗುತ್ತವೆ ಎಂಬುದಕ್ಕೆ ಉದಾಹರಣೆಯಾಗಿ ತೇಜಸ್ವಿವರ "ಕುಬಿ ಮತ್ತು ಇಯಾಲ" ಕಥೆಯ ಎರಡು ಪಾತ್ರಗಳ ಸುತ್ತ ಹೆಣೆದಿರುವ ವಿಚಾರಗಳನ್ನು ಅವಲೋಕಿಸಬಹುದು. ಕುಬಿಯೂ ವೈದ್ಯನಾಗಿದ್ದು, ಭೈರಾಪಟ್ಟಣಕ್ಕೆ ಬರುತ್ತಾನೆ. ಅವನ ವೃತ್ತಿ ಧರ್ಮವೂ ರೋಗಿಗಳಿಗೆ ದೈವತ್ವವನ್ನು ತಂದುಕೊಡುತ್ತದೆ. ಮುಂದುವರೆದಂತೆ ಇಯಾಲಳ ಸಾವು ರೋಗಗ್ರಸ್ಥ ಸಮಾಜದ ಉಲ್ಬಣಕ್ಕೆ ಕಾರಣವಾಗುವುದನ್ನು ತೋರಿಸುತ್ತದೆ. ಈ ಕಥೆಯಲ್ಲಿ ಬರುವ ಪ್ರಬಲ ಜಾತಿಗಳಾದ ಗೌಡ ಮತ್ತು ಲಿಂಗಾಯಿತರ ಪ್ರತಿಷ್ಠೆಯಲ್ಲಿ ಅಲ್ಪಸಂಖ್ಯಾತನಾದ ರಹಮಾನ್ ಮತ್ತು ದುರ್ಬಲವರ್ಗದವನಾದ ರಂಗ ಕ್ರೌರ್ಯಕ್ಕೆ ಒಳಗಾಗುತ್ತಾರೆ. ಭಾರತದಂತಹ ಜಾತ್ಯಾತೀತ ರಾಷ್ಟ್ರದಲ್ಲಿ ಜಾತಿ-ಧರ್ಮದ ಅಡಿಯಲ್ಲಿ ಕ್ರೌರ್ಯ ನಡೆಯುವುದು ಸರ್ವೇಸಾಮಾನ್ಯವಾಗಿದೆ. ಬಲಿಷ್ಠ ವ್ಯಕ್ತಿಗಳು ದುರ್ಬಲ ವ್ಯಕ್ತಿಗಳ ಮೇಲೆ ಸದಾ ಸವಾರಿಯನ್ನು ಮಾಡುತ್ತಾರೆ. ಕಾನೂನು ಕೆಲವೊಮ್ಮೆ ಉಳ್ಳವರ ರಕ್ಷಣೆಗೆ ನಿಲ್ಲುತ್ತದೆ. ಅಮಾಯಕರನ್ನು ಹೊಡೆದು ಬಡಿದು ಬೆದರಿಸುವ ಕೆಲಸ ಮಾಡುತ್ತದೆ. ಇಲ್ಲಿ ರಹೆಮಾನ್ ಮತ್ತು ರಂಗನು ಅಸಹಾಯಕ ಪ್ರತಿನಿಧಿಗಳಂತೆ ಕಂಡುಬರುವ ಹಮಾಲರು. ಪೋಲಿಸರಿಗೆ ನಿಜವಾದ ಅಪರಾಧಿ ಯಾರೆಂದು ಗೊತ್ತಿದ್ದರೂ ಹಮಾಲರನ್ನು ದಂಡಿಸುವುದು ಭಾರತೀಯ ಸಮಾಜದ ಅತಿ ದೊಡ್ಡ ವ್ಯಂಗ್ಯ.

ತೇಜಸ್ವಿಯವರ ಕಥಾ ಸಾಹಿತ್ಯದಲ್ಲಿ ಕಾಣುವ ಅತಿ ದೊಡ್ಡ ಉಡುಗೊರೆಯೆಂದರೆ ಕೋಮು ಸೌಹಾರ್ದತೆಯ ಸಮಾಜ. ಅವರ ಕಥೆಗಳಲ್ಲಿ ಹಿಂದು-ಮುಸ್ಲಿಂ-ಕ್ರಿಶ್ಚಿಯನ್ ಪಾತ್ರಗಳು ಬರುತ್ತವೆ. ಆದರೆ ಅವೆಲ್ಲವೂ ಅಂತಿಮವಾಗಿ ಸೌಹಾರ್ದತೆಯ ಸಂಕೇತಗಳಾಗಿಯೇ ನಿಲ್ಲುತ್ತವೆ. ಗ್ರಾಮೀಣ ಭಾಗದ ಸಮಸ್ಯೆಗಳ ಕಡೆ ಗಮನ ಹರಿಸುತ್ತವೆಯೇ ಹೊರತು ಧರ್ಮದ ಹೆಸರಿನಲ್ಲಿ ಹೋರಾಟ ನಡೆಸುವ ಮಟ್ಟಕ್ಕೆ ಕಥೆಗಳು ರೂಪಿತವಾಗಿಲ್ಲ. ಅದು

ಆರೋಗ್ಯ ಸಮಾಜದ ಲಕ್ಷಣವೂ ಅಲ್ಲ. ಅವರ 'ಅಬಚೂರಿನ ಪೋಸ್ಟಾಫೀಸು', 'ಡೇರ್ ಡೆವಿಲ್ ಮುಸ್ತಫಾ', 'ಕಿರಗೂರಿನ ಗಯ್ಯಾಳಿಗಳು', 'ಕೃಷ್ಣೇಗೌಡರ ಆನೆ', ಕಥೆಗಳಲ್ಲಿ ಬರುವ ಪಾತ್ರಗಳು ಭಾರತೀಯ ಸಮಾಜದ ಕೋಮು ಸೌಹಾರ್ದತೆಯನ್ನು ಪ್ರತಿಬಿಂಬಿಸುತ್ತವೆ. ಇಲ್ಲಿನ ಪಾತ್ರಗಳು ಸಾಮಾಜಿಕ ಚೌಕಟ್ಟಿನಲ್ಲಿ ಆರ್ಥಿಕ ಸ್ಥಿತಿಗತಿಗಳು ಮತ್ತು ಜೀವನ ಕ್ರಮವನ್ನು ಪ್ರತಿನಿಧಿಸುತ್ತವೆ. ಸ್ಥಳೀಯ ಮೂಲಭೂತ ಸಮಸ್ಯೆಗಳ ಮೇಲೆ ಬೆಳಕನ್ನು ಚೆಲ್ಲುತ್ತವೆಯೇ ಹೊರತು ಧಾರ್ಮಿಕ ಸಂಘರ್ಷವನ್ನು ಪ್ರತಿನಿಧಿಸುವುದಿಲ್ಲ.

'ಅಬಚೂರಿನ ಪೋಸ್ಟಾಫೀಸು' ಕಥೆಯೂ ಆಧುನಿಕತೆಯ ಪ್ರಭಾವದಿಂದ ಗ್ರಾಮಗಳಲ್ಲಿ ಆಗುವ ಪಲ್ಲಟಗಳನ್ನು ತೋರಿಸುತ್ತದೆ. ಬೋಬಣ್ಣನು ಅಲ್ಲೀಜಾನ್ ಸಾಬರ ತೋಟದಲ್ಲಿ ರೈಟರ್ ಕೆಲಸ ಮಾಡಿಕೊಂಡಿರುತ್ತಾನೆ. ಹಾಗೆಯೇ ಅಲ್ಲಿಜಾನ್ ಸಾಬರ ಮಗ ಅಜೀಜ್‌ನ ವಿಚಾರಗಳು ಬರುತ್ತವೆ. ಎಲ್ಲಿಯೂ ಕೂಡ ಧರ್ಮದ ಸಂಘರ್ಷಗಳು ಕಂಡುಬರುವುದಿಲ್ಲ. ಅದು ಸಹಜವೂ ಕೂಡ ಹೌದು. ಭಾರತದಲ್ಲಿ ಆಧುನಿಕತೆ ಬೆಳೆದಂತೆ ರಾಜಕೀಯ ಹಿತಾಸಕ್ತಿಗಳು ಕೆಲಸ ಮಾಡತೊಡಗಿದವು. ಧರ್ಮವನ್ನು ಎತ್ತಿಕಟ್ಟಿ ಸಮಸ್ಯೆಯನ್ನು ಸೃಷ್ಟಿಸತೊಡಗಿದವು. ಅದರ ಪರಿಣಾಮವೇ ಇಂದು ಕೋಮು ಸಂಘರ್ಷಗಳು. ಇದರ ದುಷ್ಪರಿಣಾಮಗಳು ಎಲ್ಲಿ ಮತಾಂಧತೆ ಹೆಚ್ಚಿಗೆ ಇತ್ತೋ ಅಲ್ಲಿ ಅದರ ಬೇರುಗಳು ಗಟ್ಟಿಯಾಗತೊಡಗಿ ಗಲಾಟೆಗಳು ಆರಂಭಿಸಿದವೇ ಹೊರತು ಎಲ್ಲಾ ಕಡೆ ಇದರ ದುಷ್ಪರಿಣಾಮ ಹರಡಲಿಲ್ಲ. ದೇಶದಲ್ಲಿನ ಕೋಮು ಸಮಸ್ಯೆಗಳು ಹೇಗೆ ಪ್ರಾರಂಭವಾಗಬಹುದು ಎಂಬ ಮುನ್ಸೂಚನೆಯನ್ನು 'ಡೇರ್ ಡೆವಿಲ್ ಮುಸ್ತಫಾ' ಕಥೆಯಲ್ಲಿ ಕಥೆಗಾರರು ತರುತ್ತಾರೆ.

ಟಿ.ಪಿ.ಅಶೋಕ್ ತಮ್ಮ 'ತೇಜಸ್ವಿ ಕಥನ'ದಲ್ಲಿ "ಹಿಂದೂ-ಮುಸ್ಲಿಂ ವ್ಯಕ್ತಿಗಳ ಸಂಬಂಧದ ನಿರ್ವಹಣೆ ಪೂರ್ಣಚಂದ್ರ ತೇಜಸ್ವಿ ಅವರ ಕಥಾಸಾಹಿತ್ಯದಲ್ಲಿ ಗಮನ ಸೆಳೆಯುವ ಒಂದು ವಸ್ತು. ಇದು ಮೊತ್ತದಲ್ಲಿ ಎದ್ದು ಕಾಣುವಂಥದ್ದಲ್ಲವಾದರೂ ಮೌಲ್ಯದಲ್ಲಿ ಮುಖ್ಯವೆನಿಸುವಂಥದ್ದು. ಈ ಸಂಬಂಧಗಳನ್ನು ಅವರು ಪರಸ್ಪರ ಅನುಮಾನ ಮತ್ತು ಸಂಘರ್ಷಗಳ, ವ್ಯವಹಾರಿಕ ಮತ್ತು ಭಾವನಾತ್ಮಕ ಹಾಗೂ ಹದಿಹರೆಯದವರ ಮತ್ತು ವಯಸ್ಕರ ವೈವಿಧ್ಯಮಯ ನೆಲೆಗಳಲ್ಲಿ ವಿಶ್ಲೇಷಿಸಿದ್ದಾರೆ. ಈ ದೃಷ್ಟಿಯಿಂದ 'ಡೇರ್ ಡೆವಿಲ್ ಮುಸ್ತಾಫಾ' ಕಥೆಯನ್ನು ಮರು ಓದಿಗೆ ಒಳಪಡಿಸಬೇಕಾದುದು ಅಪೇಕ್ಷಣೀಯವಾಗಿದೆ."[೨೭] ಎಂದು ಅಭಿಪ್ರಾಯ ಪಡುತ್ತಾರೆ.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬ್ರಿಟಿಷರ ವಿರುದ್ಧ ಹೋರಾಡಲು ಯುವಕರು ಸಂಘಟನೆಗೊಳ್ಳಬೇಕೆಂಬ ಪ್ರಧಾನ ಆಶಯದೊಂದಿಗೆ ಆರಂಭವಾದ "ಗಣೇಶೋತ್ಸವ"ವು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಅದು ಮತೀಯ ಭಾವನೆಯನ್ನು ಸೃಷ್ಟಿಸಲು ಮುಂದುವರೆದುದು ವಿಷಾದನೀಯ ಸಂಗತಿಯಾಗಿದೆ. ಕಥೆಯಲ್ಲಿನ ಜಮಾಲ್ ಅಬ್ದುಲ್ ಮುಸ್ತಾಫಾ ಹುಸೇನ್

ನೆಂಬ ಉದ್ದನೆಯ ಹೆಸರೆ ವಿಚಿತ್ರ, ಆದರೆ ಅದು ಆಯಾ ಧರ್ಮದ ಹೆಸರುಗಳು ಬರುವುದೇನು ವಿಶೇಷವಲ್ಲ. ಈ ಮುಸ್ತಾಫಾನ ಬಗ್ಗೆ ಗೌರವ ಹೆಚ್ಚಲು ಒಂದು ಸನ್ನಿವೇಶವನ್ನು ಕಥೆಯಲ್ಲಿ ತರಲಾಗಿದೆ. "ಊರೊಳಗೆ ಮಹಾ ಗಣಪತಿ ಉತ್ಸವ ಮಾಡಬೇಕೆಂದು ಸಾವಿರಾರು ರೂಪಾಯಿ ಚಂದಾ ಎತ್ತಿದ್ದರು. ಭಾರಿ ಗಣಪತಿಯೊಂದನ್ನು ಮಾಡಿ ಕೂರಿಸಿದ್ದರು. ದಿನವೂ ಜನಜಂಗುಳಿ ನೆರೆದು ಸಂಗೀತ ಸಮಾರಂಭ, ಅನ್ನ ಸಂತರ್ಪಣೆ ಇತ್ಯಾದಿಗಳು ನಡೆಯುತ್ತಿದ್ದವು. ಗಣಪತಿಯನ್ನು ಒಯ್ದು ಹೊಳೆಗೆ ವಿಸರ್ಜನೆ ಮಾಡುವ ದಿನ ಹತ್ತಿರವಾದಂತೆ, ಪೋಲೀಸರಿಗೆ ಎದೆಯೊಳಗೆ ಪುಕ ಪುಕ ಎನ್ನತೊಡಗಿತು. ಹಿಂದುಗಳು ಮುಸಲ್ಮಾನರನ್ನು ಹಿಯ್ಯಾಳಿಸುವಂತೆ ವಿಜೃಂಭಿಸುವುದೂ ಮುಸಲ್ಮಾನರು ಹಿಂದುಗಳ ವಿಜೃಂಭಣೆಯನ್ನು ತಿರಸ್ಕಾರದಿಂದ ನೋಡುವುದೂ ನಡೆದೇ ಇತ್ತು."[೨೮] ಇದೇ ಸಂದರ್ಭದಲ್ಲಿ ಆಗುವ ಅಚಾತುರ್ಯಕ್ಕೆ ಮುಸಲ್ಮಾನರೆ ಕಾರಣವೆಂದು ದೊಡ್ಡ ಗಲಭೆ ಏರ್ಪಡುತ್ತದೆ. ನಿಜವಾದ ಸಂಗತಿಯೇನೆಂದರೆ ಕುಂಬಾರ ಕೇರಿಯವನೊಬ್ಬ ಕುಡಿದು ಪಂಜು ಹಿಡಿದು ಕುಣಿಯುತ್ತಾ ಗಣಪತಿಯ ಮುಂದೆ ಮೆರವಣಿಗೆ ಬರುತ್ತಿದ್ದ ಬಸವನ ಬೆನ್ನಿಗೆ ಪಂಜಿನ ಕೊಳ್ಳಿಯನ್ನು ತಾಗಿಸಿದ ಪರಿಣಾಮದಿಂದ ಬಸವ ಊರಿನಲ್ಲೆಲ್ಲಾ ಹುಚ್ಚು ಹಿಡಿದ ರೀತಿಯಲ್ಲಿ ಓಡತೊಡಗಿತು ಈ ಸಂದರ್ಭದಲ್ಲಿ ಮುಸ್ತಾಫನು ಅದನ್ನು ತಡೆದು ಹದ್ದುಬಸ್ತಿನಲ್ಲಿ ಇಡುತ್ತಾನೆ. ಇಂತಹ ಅದೆಷ್ಟು ಕಲ್ಪಿತ ಘಟನೆಗಳು ಹಿಂದೂ–ಮುಸ್ಲಿಂರ ನಡುವಿನ ಸೌಹರ್ದತೆಯನ್ನು ಕಿತ್ತುಕೊಂಡಿವೆ.

ಭಾರತದ ಬಹುಪಾಲು ಕೋಮು ಘರ್ಷಣೆಗಳು ಕಲ್ಪಿತವಾದ ಊಹಾಪೋಹಗಳಿಂದ ಕೂಡಿದ ಸಂಗತಿಗಳಿಂದಲೇ ಹೆಚ್ಚಾಗಿವೆ. ಆ ಸುಳ್ಳುಸಂಗತಿಗಳನ್ನು ಹಬ್ಬಿಸುವವರಿಗೆ ತಮ್ಮದೇ ಆದ ಹಿತಾಶಕ್ತಿಗಳು ಇರುತ್ತವೆ. ಆದರೆ ಅದರ ಪರಿಣಾಮ ಸಾಮಾನ್ಯರ ಮೇಲೆ ಬೀರುತ್ತದೆ. ಇಂತಹ ಒಂದು ಎಚ್ಚರಿಕೆಯನ್ನು 'ಡೇರ್ ಡೆವಿಲ್ ಮುಸ್ತಾಫಾ' ಕಥೆಯಲ್ಲಿ ಕಾಣುತ್ತದೆ. ಜೊತೆಗೆ ಅದರಲ್ಲಿ ಆದ ಅಚಾತುರ್ಯದ ಪರಿಣಾಮವನ್ನು ಕಥೆಗಾರ ತರುತ್ತಾನೆ. ಒಂದು ವೇಳೆ ಅದು ಸಮಸ್ಯೆಗೆ ನಿಂತಿದ್ದರೆ ಓದುಗನಿಗೆ ಧರ್ಮಕ್ಕೆ ಸಂಬಂಧಿಸಿದ ಸಂಗತಿಗಳು ಬೇರೆಯದೆ ಆದ ರೀತಿಯಲ್ಲಿ ವಿಚಾರಗಳು ರವಾನೆಯಾಗುತ್ತಿದ್ದವು. ಆದರೆ ಕಥೆಗಾರ ಈ ಕಥೆಯಲ್ಲಿ ಪರಿಹಾರವನ್ನು ಸೂಚಿಸುತ್ತಾನೆ.

ತೇಜಸ್ವಿಯವರ 'ಕೃಷ್ಣೇಗೌಡರ ಆನೆ' ಕಥೆಯಲ್ಲಿ ಅತಿಮುಖ್ಯ ಕೋಮು ಸೌಹರ್ದತೆಯ ವಿಷಯಕ್ಕೆ ಸಂಬಂಧಿಸಿದ ಸಂಗತಿಯೊಂದನ್ನು ಗಮನಿಸಬೇಕಾಗುತ್ತದೆ. ಭಾರತೀಯ ಗ್ರಾಮೀಣ ಪ್ರದೇಶದ ಜನರಲ್ಲಿ ಜೀವಂತವಾಗಿರುವ ಕೋಮು ಸೌಹರ್ದತೆ ಮತ್ತು ಅದರ ಆತಂಕದ ವಿಚಾರಗಳು ಈ ಕಥೆಯಲ್ಲಿದೆ. ಜಬ್ಬಾರನು ಅಂಚೆ ಇಲಾಖೆಯಲ್ಲಿ ಹಂಗಾಮಿ ನೌಕರನಾಗಿ ದುಡಿಯುವ ವ್ಯಕ್ತಿಯಾಗಿಯೂ, ಖಾನ್ ಸಾಹೇಬನು

ಮುನಿಸಿಪಾಲಿಟಿಯ ಪ್ರೆಸಿಡೆಂಟ್ ಆಗಿ ಕಾರ್ಯನಿರ್ವಸುತ್ತಿರುತ್ತಾನೆ. ಜಬ್ಬಾರನ ತನ್ನ ದುಡಿಮೆಯ ಕಷ್ಟವನ್ನು ಕಥೆಗಾರರಾದ ಸ್ವತಃ ತೇಜಸ್ವಿಯವರ ಬಳಿ ಹೇಳಿಕೊಳ್ಳುತ್ತಿರುತ್ತಾನೆ. ಊರಿನ ಆನೆಗೆ ಸಂಬಂಧಿಸಿದ ಒಂದು ಘಟನೆ ನಡೆಯುತ್ತದೆ. ಹುಚ್ಚು ನಾಯಿಗಳು ಮೂಡಿಗೆರೆಯಲ್ಲಿ ಹೆಚ್ಚಾಗಿರುವ ಕಾರಣ, ಅವುಗಳು ದನಗಳಿಗೆ ಕಚ್ಚುತ್ತಿವೆಯೆಂದು ಮುಂದುವರೆದಂತೆ ಆನೆಗೂ ಕಚ್ಚಿವೆ ಎಂದು ಪಶು ಇಲಾಖೆಯ ಪುಟ್ಟಯ್ಯನು ತೇಜಸ್ವಿಯರಿಗೆ ಒಪ್ಪಿಸುತ್ತಾನೆ. ಈ ಕಾರಣಕ್ಕಾಗಿ ನಾಯಿಗಳನ್ನು ಸಾಯಿಸಬೇಕೆಂದು ವರದಿ ನೀಡುತ್ತಾನೆ. ಇದರ ವಿಚಾರವಾಗಿ ಮುನ್ಸಿಪಾಲಿಟಿಯ ಪ್ರೆಸಿಡೆಂಟ್ ಖಾನ್ ಸಾಹೇಬನ ಬಳಿ ಲೇಖಕರು ಮಾತನಾಡುವಾಗ ಕೆಲವು ಸ್ವಾರಸ್ಯಕರವಾದ ಅಂಶಗಳನ್ನು ತರುತ್ತಾರೆ.

ಖಾನ್ ಸಾಹೇಬನು ಅನೇಕ ಕಂತ್ರಿ ನಾಯಿಗಳನ್ನು ಸಾಯಿಸಲು ತಮ್ಮ ಇಲಾಖೆಗೆ ಹೇಳಿದ್ದರೂ ಕೂಡ ಅನೇಕ ಬೇರೆ ಕಡೆಯ ಕಂತ್ರಿನಾಯಿಗಳು ಮೂಡಿಗೆರೆಗೆ ಬರುತ್ತಿರುತ್ತವೆ. ಇವು ಎಲ್ಲಿಂದ ಬಂದಿವೆ ಎಂದು ತಿಳಿದುಕೊಂಡಾಗ ಸುತ್ತಮುತ್ತಲಿನ ಜೈನ ಸಮುದಾಯದವರು ತಾವು ಅಹಿಂಸಾವಾದಿಗಳು ಆಗಿರುವ ಕಾರಣ ಇಲ್ಲಿಗೆ ತಂದು ಬಿಡುತ್ತಾರೆ. ಒಂದು ವೇಳೆ ಇದನ್ನು ತಾನು ಹೇಳಿದಂತೆ ತೇಜಸ್ವಿಯವರು ಪ್ರಕಟಿಸಿದರೆ ದೊಡ್ಡ ರಾದ್ಧಾಂತವಾಗುತ್ತದೆ. ಮುಸ್ಲಿಮರು ಧರ್ಮಸ್ಥಳದ ವಿರುದ್ಧ ಹೇಳಿಕೆ ಕೊಡುತ್ತಾರೆ ಎಂದು ಅಪಾರ್ಥ ಬರುತ್ತದೆ, ಹಿಂದೂಗಳ ಮನಸ್ಸಿಗೆ ನೋವಾಗದಂತೆ ನಡೆದುಕೊಳ್ಳಬೇಕು, ಪ್ರತಿಯೊಬ್ಬರಿಗೆ ಅವರವರ ಧರ್ಮ ದೊಡ್ಡದು ಎಂದು ಹೇಳುತ್ತಾನೆ. ಇದರಿಂದ ಜನರಿಗೆ ತೊಂದರೆಯಾಗುವುದಿಲ್ಲವೆಂದು ತೇಜಸ್ವಿಯವರು ಪ್ರಶ್ನೆ ಮಾಡಿದಾಗ ಅದಕ್ಕೆ ಉತ್ತರವಾಗಿ ಒಮ್ಮೆ ಆನೆಗೆ ಸಂಬಂಧಿಸಿದ ಸಂಗತಿಯನ್ನು ಲೇಖಕರ ಗಮನಕ್ಕೆ ತರುತ್ತಾನೆ. "ಮೊನ್ನೆ ನೋಡಿ ಆ ಕೃಷ್ಣೇಗೌಡರ ಆನೇನ ಪೇಟೆ ಬೀದೀಲಿ ಕರ್ಕೊಂಡು ಹೋಗಬೇಡಿ. ಅಂದಿದ್ದಕ್ಕೆ ನೀವು ರಂಜಾನ್ ದಿನ ಒಂಟೇನ ಪೇಟೆ ಬೀದೀಲಿ ಕರ್ಕೊಂಡು ಹೋಗಬಹುದು, ನಾವು ಆನೆ ಕರಕೊಂಡು ಹೋಗಬಾರದ ಎಂದು ಹೇಳಿ ಒಂದಷ್ಟು ಜನ ಜಗಳಕ್ಕೇ ಬಂದರು"[೨೯] ಎಂಬ ವಿಚಾರವನ್ನು ಹೇಳುತ್ತಾನೆ.

ಧರ್ಮದ ವಿಚಾರಕ್ಕೆ ಅಭಿವೃದ್ಧಿಗಳು ನಿಂತುಹೋಗುವ ಸ್ಥಿತಿಯನ್ನು ತೇಜಸ್ವಿಯವರು ಇಲ್ಲಿ ತರುತ್ತಾರೆ. ದೇಶದ ಎಷ್ಟೋ ಅಭಿವೃದ್ಧಿ ಕೆಲಸಗಳು ಧರ್ಮದ ಹೆಸರಿನಲ್ಲಿ ನಿಂತುಹೋಗಿರುವುದನ್ನು ಕಾಣಬಹುದಾಗಿದೆ. ಧರ್ಮಕ್ಕಾಗಿ ದೇವಸ್ಥಾನ-ಮಸೀದಿಗಳನ್ನು ನಿರ್ಮಿಸುತ್ತಾ ಹೊಡೆದಾಟ ಬಡಿದಾಟಗಳು ಭಾರತದಲ್ಲಿ ಹೆಚ್ಚಾಗಿವೆ.

ತೇಜಸ್ವಿಯವರಂತೆ ಲಂಕೇಶರು ಕೂಡ ತಮ್ಮ ಕಥೆಗಳಲ್ಲಿ ಜಾತಿಧರ್ಮದಿಂದ ಕೂಡಿದ ಭಾರತೀಯರ ಮನಸ್ಥಿತಿಗಳನ್ನು ತಂದಿದ್ದಾರೆ. ಜಾತಿ ಹಿಡಿತ, ಧರ್ಮ ಹಿಡಿತ, ರಾಜಕೀಯ ಹಿಡಿತದ ಸಮಾಜವು ಭಾರತೀಯ ಸಂಸ್ಕೃತಿಯನ್ನು ಹೇಗೆ ವ್ಯಾಖ್ಯಾನಿಸುತ್ತದೆ ಎಂಬ ನಿಲುವು ಅವರ ಕಥೆಗಳಲ್ಲಿ ಕಂಡುಬಂದಿವೆ.

ಲಂಕೇಶರಿಗೆ ಗಾಂಧಿಯ ಚಿಂತನೆಯ ಬಗ್ಗೆ ಅಪಾರ ಕಾಳಜಿ ಇತ್ತು. ಆ ಕಾರಣದಿಂದಲೇ ಗ್ರಾಮ ಸ್ವರಾಜ್ಯದ ಕಲ್ಪನೆಯನ್ನು ಅವರ ಕೃತಿಗಳಲ್ಲಿ ಕಾಣಬಹುದಾಗಿದೆ. ಮತೀಯ ವಾದಿಗಳು ಸೃಷ್ಟಿಸುವ ಉಗ್ರ ಹಿಂದೂ ರಾಷ್ಟ್ರದ ನೀತಿಯನ್ನು ತಮ್ಮ ಕೃತಿಗಳಲ್ಲಿ ಬಹುಪಾಲು ಸಂದರ್ಭದಲ್ಲಿ ಖಂಡಿಸಿದ್ದಾರೆ. ಹಾಗೆಯೇ ಜಾತಿಯ ಪ್ರಧಾನ ಸಮಾಜವನ್ನು ತಿರಸ್ಕರಿಸಿದ್ದಾರೆ. ಅವರ "ಡಿಸೋಜಾನ 'ಊವಿನ' ವೃತ್ತಿ" ಕಥೆಯಲ್ಲಿ ಅವರ ನಿಲುವನ್ನು ಸ್ಪಷ್ಟ ಪಡಿಸಿರುವುದನ್ನು ಕಾಣುತ್ತೇವೆ.

ಡಿಸೋಜನು "ಆಗಾಗ ಇಂಗ್ಲಿಷ್ ಬಳಸಿದರೂ ಅಪ್ಪಟ ಕನ್ನಡಿಗ. ನಿರುದ್ಯೋಗಿಯಾದ ಆತ ಮೊನ್ನೆಯ ಚುನಾವಣೆಯಲ್ಲಿ ಬಿಜೆಪಿ ಕಾರ್ಯಕರ್ತನಾಗಿ ಕೆಲಸ ಮಾಡಿದ್ದ. ಹೀಗಾಗಿ ಅವನಿಗೆ ನೂರಾರು ಜನ ಆರೆಸ್ಸೆಸ್ ವ್ಯಕ್ತಿಗಳ ಪರಿಚಯವಿತ್ತು. ಈ ಆರೆಸ್ಸೆಸ್‌ಗಳ ಬಗ್ಗೆ ಯಾರೇ ಏನೇ ಹೇಳಿದರೂ ಡಿಸೋಜನ ಪಾಲಿಗೆ ಮಾತ್ರ ಅವರು ಒಂದು ಬಗೆಯ ಮುಗ್ಧ ದೇಶಪ್ರೇಮಿಗಳಾಗಿದ್ದರು. ಖಾಕಿ ಚೆಡ್ಡಿ ಹಾಕುವುದು ಆರೆಸ್ಸೆಸ್‌ಗಳ ಶಿಸ್ತನ್ನು ಹೆಚ್ಚಿಸುತ್ತದಾದರೂ ಅವರು ದೊಣ್ಣೆ ಹಿಡಿದು ಕವಾಯತು ಮಾಡುವುದು ಅವನಿಗೆ ನಗೆ ತರಿಸುತ್ತಿತ್ತು. ಆದರೆ ಅವರು ಉತ್ಸಾಹಕ್ಕೆ ಭಂಗ ತರಬಾರದೆಂದು ಆತ ನಗುತ್ತಿರಲಿಲ್ಲ. ಇದು ಡಿಸೋಜ ಮತ್ತು ಆರೆಸ್ಸೆಸ್‌ಗಳ ಸಂಬಂಧ ಕುರಿತ ಮಾತಾಯಿತು. ಮೊನ್ನೆಯ ಲೋಕಸಭಾ ಚುನಾವಣೆಯಲ್ಲಿ ಆತ ಬೆಂಬಲಿಸಿ ಪ್ರಚಾರ ಮಾಡಿದ ಅಭ್ಯರ್ಥಿ ಗೆದ್ದಿದ್ದ. ಆದರೆ ಆ ಅಭ್ಯರ್ಥಿಯ ಗೆಲುವಾಗಲಿ, ಆತನ ವಿಜಯೋತ್ಸವವಾಗಲಿ ಡಿಸೋಜನ ಆರ್ಥಿಕ ಪರಿಸ್ಥಿತಿಯನ್ನು ಬದಲಾಯಿಸಿರಲಿಲ್ಲ. ತನ್ನಂತೆಯೇ ಬೇರೆ ಪಕ್ಷಗಳಿಗೆ ಕೆಲಸ ಮಾಡಿದವರೂ ಹಾಗೇ ಇದ್ದರು; ಅವರಲ್ಲಿ ಕೆಲವರು ಹಿಂದುಳಿದ ಸೆಲ್. ಯುವಕರ ಸೆಲ್ ಇತ್ಯಾದಿಯನ್ನು ಸೇರಿಕೊಂಡು ನೆಮ್ಮದಿಯಾಗಿರುವಂತೆ ಕಾಣುತ್ತಿದ್ದರೂ ಡಿಸೋಜಾನಿಗೆ ಅವರ ಬಗ್ಗೆ ಅಸೂಯೆಯಾಗಿರಲಿಲ್ಲ. ಅನಗತ್ಯವಾಗಿ ರಾಜಕಾರಣಿಗಳೊಂದಿಗೆ ಇದ್ದು ಅರ್ಥಹೀನವಾಗಿ ಮಾತಾಡುವುದು, ವರ್ತಿಸುವುದು ನಾಚಿಕೆಗೇಡು ಎಂದು ಅವನಿಗೆ ಅನ್ನಿಸುತ್ತಿತ್ತು."[೩೦]

ರಾಷ್ಟ್ರಪ್ರೇಮವನ್ನು ಹೊಂದಿರುವ ಯುವಕರಲ್ಲಿ ಡಿಸೋಜನಂತಹ ಜನ ಸಾಕಷ್ಟು ಇದ್ದಾರೆ. ಆರ್ಥಿಕ ಬಡತನವನ್ನು ಹೊಂದಿದ್ದರೂ ಅವರು ಸುಲಭವಾಗಿ ಹುಸಿ ರಾಷ್ಟ್ರಪ್ರೇಮವನ್ನು ಬಿತ್ತುವ ರಾಜಕಾರಣಿಗಳ ಮಾತಿನ ಮೋಡಿಯ ಮಾತಿಗೆ ಬಲಿಯಾಗುತ್ತಾರೆ. ತಂದೆ-ತಾಯಿಯನ್ನು, ಕುಟುಂಬವನ್ನು ಬಿಟ್ಟು ರಾಜಕಾರಣಿಗಳ ರಾಷ್ಟ್ರನಿರ್ಮಾಣ, ರಾಮರಾಜ್ಯದ ಕಲ್ಪನೆಗೆ ಮರುಳಾಗುತ್ತಾರೆ. ಕೆಲವರಿಗೆ ಮಾತೆ ಬಂಡವಾಳ. ಅಂತಹ ಪ್ರಭಾವಕ್ಕೆ ಒಳಗಾಗುವವರು ಮುಗ್ದ ಯುವಕರು. ಆ ಯುವಕರನ್ನು ಬಳಸಿಕೊಂಡು ಚುನಾವಣೆಯಲ್ಲಿ ಗೆಲ್ಲುವ ವ್ಯಕ್ತಿಗಳು ಕಿಂಚಿತ್ತೂ ಅವರ ಮುಂದಿನ ಬದುಕಿನ ಬಗ್ಗೆ

ಗಮನಹರಿಸುವ ಕೆಲಸಕ್ಕೆ ಹೋಗುವುದಿಲ್ಲ. ರಾಜಕೀಯವಾಗಿ ತಾವು ಬೆಳೆಯಲು ಅಮಾಯಕರನ್ನು ಬಳಸಿಕೊಳ್ಳುವ ಮೂಲಕ ಆ ಯುವಕರ ಭವಿಷ್ಯದ ಕನಸುಗಳನ್ನು ಹಾಳು ಮಾಡುತ್ತಾರೆ. ಡಿಸೋಜನು ಅಂತಹ ಒಬ್ಬ ಪ್ರತಿನಿಧಿ. ಆತನು ಪ್ರಚಾರ ಮಾಡಿದ ವ್ಯಕ್ತಿ ಚುನಾವಣೆಯಲ್ಲಿ ಗೆಲ್ಲುತ್ತಾನೆ. ಅದರಿಂದ ಯಾವುದೇ ಆರ್ಥಿಕ ಸಹಾಯ ಅಥವಾ ಉದ್ಯೋಗಕ್ಕೆ ಸಂಬಂಧಿಸಿದ ಆಶ್ವಾಸನೆ ದೊರಕುವುದಿಲ್ಲ. ಕೊನೆಗೆ ಡಿಸೋಜನು 'ಊವಿನ ವೃತ್ತಿ'ಯ ಕಾಯಕಕ್ಕೆ ತೊಡಗುತ್ತಾನೆ. ಡಿಸೋಜನಂತಹ ಎಷ್ಟೋ ಯುವಕರು ಆರ್ಥಿಕವಾಗಿ ಸಬಲರಾಗದೆ, ಆರೆಸ್ಸೆಸ್‌ನಂತಹ ಸಂಘಟನೆಯಿಂದ ಹೊರ ಬರಲಾರದೆ ನರಳುವ ವ್ಯಕ್ತಿಗಳಾಗಿ ಕಾಣುತ್ತಾರೆ.

ಭಾರತದಲ್ಲಿ ಅತಿ ದೊಡ್ಡ ಸಮಸ್ಯೆಯೆಂದರೆ ಧರ್ಮದ ವಿಚಾರವಾಗಿ ಹೋರಾಟದ ವೈಭವೀಕರಣ, ಆ ಹಿನ್ನೆಲೆಯಲ್ಲಿ ರಾಜಕೀಯವಾಗಿ ನೆಲೆಕಂಡುಕೊಳ್ಳುವ ಪ್ರಯತ್ನ ಮಾಡುವುದು. ಇದಕ್ಕಾಗಿ ಸೃಷ್ಟಿಸುವ ಮತೀಯ ಗಲಭೆಗಳ ಪರಿಣಾಮ ಮಾತ್ರ ಘೋರತರವಾಗಿರುತ್ತದೆ. ಇಂತಹ ಉಗ್ರವಾದ ಮತೀಯ ಸಂಘರ್ಷದಿಂದ, ಭಾರತೀಯ ಸಂಸ್ಕೃತಿಯ ಅಧಃಪತನವಾಗುತ್ತಿದೆ. ಕಥೆಯ ಮುಂದುವರೆದ ಭಾಗದಲ್ಲಿ ಆರೆಸ್ಸಸ್ ಮುಖ್ಯ ಸಂಚಾಲಕ ಶೇಷಗಿರಿ ಎಂಬುವವನು ಡಿಸೋಜನನ್ನು ಆರೆಸ್ಸಸ್ ತಂಡದ ಮುಂಚೂಣಿಯಲ್ಲಿದ್ದು ಅದನ್ನು ನಡೆಸುವಂತೆಯೂ ಇನ್ನೇನು ಭಾರತದಲ್ಲಿ ರಾಮರಾಜ್ಯ ಬರುತ್ತದೆ ಎಂದು, ತನಗೆ ಈಗ ಅರವತ್ತು ವರ್ಷವೆಂತಲೂ, ನನ್ನ ಈ ಆಸೆ ವೃದ್ಧಾಪ್ಯದಲ್ಲಿ ಈಡೇರುವಂತಿದೆ ಎಂಬ ಮಾತುಗಳನ್ನು ಹೇಳುತ್ತಾನೆ. ಹಾಗಾದರೆ ನಿಜವಾದ ರಾಮರಾಜ್ಯವೆಂದರೆ ಯಾವುದು? ಎಂಬ ಪ್ರಶ್ನೆ ಕಾಡದೆ ಇರದು. ಗಾಂಧೀ ಕಂಡ ರಾಮರಾಜ್ಯದ ಕನಸೋ ಅಥವಾ ಆರೆಸ್ಸಸ್‌ನ್ನು ರಾಜಕೀಯ ಲಾಭಕ್ಕಾಗಿ ಬಳಸಿಕೊಂಡು ರಾಮಮಂದಿರವನ್ನು ನಿರ್ಮಾಣ ಮಾಡಿ ಹಿಂದೂ ರಾಷ್ಟ್ರವನ್ನಾಗಿ ಮಾಡಬೇಕೆನ್ನುವ ರಣೋತ್ಸಾಹಿ ಮಾತುಗಳೋ ಓದುಗನಿಗೆ ನಿಜಕ್ಕೂ ಗೊಂದಲ ಉಂಟಾಗುತ್ತದೆ. ಆದರೆ ಓದುಗನ ಗೊಂದಲವನ್ನು ಡಿಸೋಜನು ಪರಿಹರಿಸುವ ರೀತಿಯಲ್ಲಿ ಬದುಕಿನ ನಿರ್ವಹಣೆಗಾಗಿ 'ಊವಿನ ಮಾರಾಟ'ವೃತ್ತಿಯನ್ನು ಕೈಗೊಳ್ಳುವ ನಿರ್ಧಾರಕ್ಕೆ ಬರುತ್ತಾನೆ. ಆತನಿಗೆ ಸಂಘಟನೆಯ ಅಜೆಂಡಾ 'ರಾಮ ರಾಜ್ಯ'ವೇ ಹೊರತು ನಿಜವಾದ ದೇಶದ ಕಲ್ಪನೆಯಾದ 'ರಾಮ ರಾಜ್ಯವಲ್ಲ'ವೆಂಬುದು ಆತನಿಗೆ ತಿಳಿಯುತ್ತದೆ. ಓದುಗನಿಗೂ ತಿಳಿಯುತ್ತದೆ ಇನ್ನೂ ಗಾಂಧಿಯ ಕಲ್ಪನೆಯ 'ರಾಮರಾಜ್ಯ' ದೇಶಕ್ಕೆ ಬಂದಿಲ್ಲ. ರಾಜಕಾರಣಿಗಳ ಮತಬ್ಯಾಂಕಿನ ಪರಿಣಾಮ ಅದು ಘೋಷಣೆ ಹೊರತು ವಾಸ್ತವಕ್ಕೆ ಹತ್ತಿರವಲ್ಲವೆಂಬುದು.

ಸಂಸ್ಕೃತಿಯ ಮತ್ತೊಂದು ಪ್ರತೀಕ 'ಭಾಷೆ.' ಭಾರತದಂತಹ ದೇಶದಲ್ಲಿ ಸ್ಥಳೀಯ ಭಾಷೆಗಳು ತಮ್ಮದೆ ಆದ ರೀತಿಯಲ್ಲಿ ಅಸ್ತಿತ್ವವನ್ನು ಹೊಂದಿವೆ. ಜಾಗತೀಕರಣ ಅಥವಾ

ದೇಶದ ಏಕ ಭಾಷೆಯ ಬಲವಂತದ ಒತ್ತಾಯ ಆಯ ಸ್ಥಳೀಯ ಭಾಷೆಯ ಮೇಲೆ ಹೇರಿಕೆಯಾದರೆ ಅದರ ದೂರಗಾಮಿ ಪರಿಣಾಮಗಳು ಯಾವಾಗಲು ದುಷ್ಪರಿಣಾಮಗಳನ್ನು ಬೀರುತ್ತವೆ. ಲಂಕೇಶ್‌ರವರು ಸ್ವತಃ ಇಂಗ್ಲೀಷ್ ಭಾಷೆಯ ಪ್ರಾಧ್ಯಾಪಕರಾಗಿದ್ದರೂ ಕೂಡ ಸ್ಥಳೀಯ ಭಾಷೆಯ ಉಳಿಯುವಿಕೆಯಲ್ಲಿ ಪ್ರಧಾನ ಪಾತ್ರವನ್ನು ವಹಿಸಿದವರು. ಅವರ ಕೃತಿಗಳಲ್ಲಿ ಇದರ ಕಾಳಜಿಯನ್ನು ನೋಡಬಹುದು.

'ಆಕ್ಟೋಪಸ್' ಕಥೆಯಲ್ಲಿ ಬರುವ ಭಾಷಿಕ ವಿಚಾರಗಳು ಓದುಗನಿಗೆ ಸ್ಥಳೀಯ ಭಾಷೆಗೆ ಆಗುತ್ತಿರುವ ಅಪಾಯಕಾರಿ ಸ್ಥಿತಿಗಳು ಮತ್ತು ಪರಿಹಾರಗಳನ್ನು ಸೂಚಿಸುತ್ತಾರೆ. "ನಮ್ಮ ಜನಕ್ಕೆ ಈ ಆಂಗ್ರೇಜಿ ರೋಗ ಬಂದು ಸುಮಾರು ಇನ್ನೂರು ವರ್ಷ ಆಯ್ತು. ಹೀಗೆ ಬಿಟ್ರೆ ಈ ಸಮಾಜವನ್ನ ಈ ರೋಗ ಕಬಳಿಸಬಿಡುತ್ತೆ. ದೊಡ್ಡ ಮಾತು, ಸಣ್ಣ ಕೆಲಸ.... ಇದೆಲ್ಲ ನಿಮಗೆ ಗೊತ್ತಾಗ್ಲಿ ಅಂತ ನಾನು ನಿಮ್ಮನ್ನು ಕಳಿಸಿದೆ. ಹೀಗೆ ಆದ್ರೆ ದೇಶದಲ್ಲಿ ವಿದ್ಯೆ ಬುದ್ಧಿಗೆ ಬೆಲೆಯೇ ಉಳಿಯೋಲ್ಲ."[೨೦] ಈ ಮಾತುಗಳಲ್ಲಿ ಸಂಸ್ಕೃತಿಯ ಜೀವಾಳ ಭಾಷೆ ಅದನ್ನು ಒಂದು ಪರಭಾಷೆ ಬಂದು ಅಧಿಕಾರ ಚಲಾಯಿಸುವುದಾದರೆ ಸ್ಥಳೀಯ ಸಂಸ್ಕೃತಿಯನ್ನೆ ನಾಶ ಮಾಡುತ್ತದೆ ಎಂಬುದು ಇಂದಿನ ಇಂಗ್ಲೀಷ್ ಭಾಷೆಯ ಅಪಾಯಕಾರಿಯನ್ನು ತೋರಿಸುತ್ತದೆ.

ಇಂದಿನ ಇಂಗ್ಲೀಷ್ ಭಾಷೆಯ ಆಕ್ರಮಣದಿಂದ ಸ್ಥಳೀಯ ಭಾಷಾ ಸಂಸ್ಕೃತಿಯ ಅವನತಿಯ ಅಪಾಯ ಉಂಟಾಗಿದೆ. ಕನ್ನಡತನ ಕೇವಲ ಒಂದು ವರ್ಗಕ್ಕೆ ಸೀಮಿತ ವಾಗುತ್ತಿದೆ. ಶಿಕ್ಷಣದಲ್ಲಿನ ಬಂಡವಾಳ ಹೂಡಿಕೆಯ ಪರಿಣಾಮದಿಂದ ಸರ್ಕಾರಗಳು ಅಸಹಾಯಕವಾಗಿರುವ ಸನ್ನಿವೇಶವಿದೆ. ಇಂಗ್ಲೀಷ್ ಸ್ಥಳೀಯವಾಗಿ ಭಾರತೀಯರಲ್ಲಿ ಬೇರೂರುತ್ತಿದೆ. ಜೊತೆಗೆ ಅನಿವಾರ್ಯವನ್ನಾಗಿ ಮಾಡುತ್ತಿದೆ. ಡಿ.ಆರ್. ನಾಗರಾಜ್‌ರವರು ತಮ್ಮ "ಕನ್ನಡ ಸಂವರ್ಧನೆ" ಲೇಖನದಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿಯ ವಿಚಾರವನ್ನು ಹೇಳುತ್ತಾ "ಸಂಸ್ಕೃತಿಯೊಂದು ಹೊರಗಿನವರಿಗೆ ಆಕರ್ಷಕವಾಗಲು ತನ್ನನ್ನು ತಾನು ವಾಣಿಜ್ಯೀಕರಿಸುವುದು ಸುಲಭ. ಆದರೆ ಅದು ರೋಗದ ಮಾರ್ಗ. ತನ್ನ ಕಲೆಗಳನ್ನೋ, ಜೀವನದ ಕ್ರಮದ ಉತ್ಸವಗಳನ್ನೋ ವಾಣಿಜ್ಯೀಕರಿಸಿ ಅದನ್ನು ರಫ್ತು ಮಾಡಲು ಪ್ರಯತ್ನಿಸುವುದು ಅಗ್ಗದ ದಾರಿ. ಇಲ್ಲಿ ಮುಖ್ಯ ಸಮಸ್ಯೆಯೆಂದರೆ ನಾಡಿನ ಆತ್ಮ ಗೌರವವನ್ನು ಉಳಿಸಿಕೊಳ್ಳುವುದು. ಕೇರಳ, ಕಾಶ್ಮೀರ, ಆದಿವಾಸಿ ಜನಾಂಗಗಳಲ್ಲಿ ಈಗಾಗಲೇ ಈ ರೀತಿಯ ಸಾಂಸ್ಕೃತಿಕ ವಾಣಿಜ್ಯೀಕರಣದ ಅಪಾಯಗಳು ಎದ್ದು ಕಾಣುತ್ತಿವೆ. ಇದನ್ನು 'ಸಾಂಸ್ಕೃತಿಕ ಸರಕೀಕರಣದ ದಾರಿ' ಎಂದು ಕರೆಯಬಹುದು" ಎಂದು ಹೇಳುತ್ತಾರೆ.

ಭಾಷಿಕ ಕುಲವೇ ಒಂದು ಸಂಸ್ಕೃತಿ. ಅದು ಇಂದು ಜಾಗತೀಕರಣದ ಪ್ರಭಾವದಿಂದ ನಾಶವಾಗುತ್ತಿರುವ ಅಪಾಯವನ್ನು ತೋರಿಸುತ್ತದೆ. ಲಂಕೇಶರ ಮತ್ತು ಡಿ.ಆರ್. ನಾಗರಾಜರವರ ಚಿಂತನೆಗಳು ಭಾರತೀಯ ಸಂಸ್ಕೃತಿಯ ವಿಷಯವಾಗಿ ಬೆಳಕನ್ನು ಚೆಲ್ಲುತ್ತವೆ.

ಭಾರತೀಯ ಬಹು ಸಂಸ್ಕೃತಿಯ ಪ್ರತೀಕ ನಡೆ–ನುಡಿಗಳು ಮತ್ತು ತಮ್ಮದೇ ಆದ ಆಚಾರ–ವಿಚಾರಗಳು, ಉಡುಗೆ–ತೊಡುಗೆಗಳು. ಇವುಗಳ ಒಂದು ಉದಾಹರಣೆಯ ವಿಚಾರ 'ಆಕ್ಟೋಪಸ್' ಕಥೆಯಲ್ಲಿ ಕಂಡು ಬರುತ್ತದೆ. ಕಥೆಯಲ್ಲಿನ ನರಸಯ್ಯ ಪ್ರೊಫೆಸರ್ ಆಗಿರುತ್ತಾನೆ. ಅವನ ದೈನಂದಿನ ಚಟುವಟಿಕೆಗಳು ಮತ್ತು ಆತನ ಹೆಂಡತಿಯಾದ ಅಲಮೇಲಮ್ಮನವರ ಚಟುವಟಿಕೆಗಳ ಬಗ್ಗೆ ಸಣ್ಣದೊಂದು ಟಿಪ್ಪಣಿಯನ್ನು ಕಥೆಗಾರರು ಕೊಡುತ್ತಾರೆ. "ಭಾರತೀಯ ರೀತಿಯ ಅವರ ಹೆಂಡತಿ ಅಲಮೇಲಮ್ಮನವರು ತಮ್ಮ ಪತಿ ಏಳುವುದಕ್ಕೆ ಮುಂಚೆಯೇ ಎದ್ದು, ಅಡಿಗೆಯ ಆಳು ಇದ್ದರೂ, ತಮ್ಮ ಸ್ವಂತ ಕೈಯಿಂದಲೇ ಒಲೆ ಹತ್ತಿಸಿ ಕಾಫಿ ತಯಾರಿಸಿದ್ದರು. ಅವರು ಕಾಫಿ ತಂದು ಕೊಟ್ಟಾಗ ಅವರ ಹಣೆಯ ಕುಂಕುಮ ನೋಡಿ ನರಸಯ್ಯನವರಿಗೆ ಹೆಮ್ಮೆ ಎನಿಸಿತು. ಇಂಗ್ಲೆಂಡಿನ ಯಾವ ಹೆಂಗಸಿಗೆ ಈ ರೀತಿಯ ಮುತ್ತೈದೆ ಗುಣವಿದೆ– ಎಂದು ಕೇಳಿಕೊಂಡರು."[೨]

ಪ್ರೊಫೆಸರ್ ನರಸಯ್ಯನವರ ಒಂದು ಮಾತು ವಿಶೇಷ ಮತ್ತು ವಿಚಿತ್ರವೆನಿಸುತ್ತದೆ. ಆತನ 'ಹೆಂಡತಿ ಹಣೆಯಲ್ಲಿ ಕುಂಕುಮ ಹಾಕಿಕೊಳ್ಳುವುದು ಆಕೆಯ ಕುಟುಂಬ ಮತ್ತು ಅವಳ ದೇಶದ ಸಂಸ್ಕೃತಿ' ಪ್ರತೀಕವಾಗಬಹುದು. ಇದು ವಿಶೇಷವೆನಿಸಿದರೆ, ಮತ್ತೊಂದು ವಿಚಿತ್ರವೆನಿಸುವ ಘಟನೆಯೆಂದರೆ 'ಇಂಗ್ಲೆಂಡಿನ ಮುತ್ತೈದೆ ಏಕೆ ಕುಂಕುಮ ಹಣೆಯಲ್ಲಿ ಧರಿಸಬೇಕು' ಎಂಬ ವಿಚಾರ. ಪ್ರದೇಶದಿಂದ ಪ್ರದೇಶಕ್ಕೆ ದೇಶದಿಂದ ದೇಶಕ್ಕೆ ಸಹಜವಾಗಿ ಸಂಸ್ಕೃತಿ ವಿಭಿನ್ನವಾಗಿರುತ್ತದೆ. ಅದುವೆ ಮಾನವ ಜನಾಂಗದ ಶ್ರೇಷ್ಠತೆಯ ಸಂಕೇತವಾಗಿರುತ್ತದೆ. ನರಸಯ್ಯನವರು ಹೆಮ್ಮೆಯ ವಿಚಾರ ಮಾತನಾಡುವವರು ಕಷಾಯ ಕುಡಿಯುವುದಿಲ್ಲ ಬದಲಿಗೆ 'ಕಾಫಿ'ಯನ್ನು ಕುಡಿಯುತ್ತಾರೆ. ಹಾಗಾದರೆ 'ಕಾಫಿ' ಪಾನೀಯ ಆತನ ದೇಶದ ಸಂಸ್ಕೃತಿಯಾಗಲಾರದು. ಸಂಸ್ಕೃತಿ ಎಂದರೆ ಕೊಡುಕೊಳ್ಳುವಿಕೆಯಿಂದ ಕೂಡಿರಬೇಕೆ ಹೊರತು ಅದು ವಾಣಿಜ್ಯೀಕರಣವಾಗಬಾರದು. ಯಾವಾಗಲೂ ಅದು ಅಪಾಯಕಾರಿಯಾಗಿರುತ್ತದೆ ಎಂಬುದನ್ನು ಗಮನಿಸಬೇಕು.

ಸಮಾಜದಲ್ಲಿನ ಅತಿ ಮಹತ್ವ ಸಂಗತಿಯೆಂದರೆ ಕೂಡಿ ಬಾಳುವುದು. ಅದರ ಪರಿಕಲ್ಪನೆ ಭಾರತೀಯತೆಯಲ್ಲಿ ಇದೆ ಎಂಬುದನ್ನು ಹೇಳುವ ನಿಟ್ಟಿನಲ್ಲಿ "ತೋಟದವನು" ಕಥೆಯಲ್ಲಿ ಒಂದು ಪ್ರಸಂಗವನ್ನು ತರುತ್ತಾರೆ. ಬಸವಯ್ಯ ಮತ್ತು ತಮ್ಮಣ್ಣನವರು ತೋಟದ ವಿಚಾರಕ್ಕೆ ಸಂಬಂಧಿಸಿದಂತೆ, ಒಬ್ಬರಿಗೊಬ್ಬರು ಪ್ರತಿಸ್ಪರ್ಧಿಗಳಾಗಿ, ಜಿದ್ದಿಗೆ ಬಿದ್ದು ತೋಟವನ್ನು ವಿಸ್ತರಿಸುತ್ತಾ ಹೋಗುತ್ತಾರೆ. ಅಂತಿಮವಾಗಿ ಎಲ್ಲ ರೀತಿಯ ಪಟ್ಟುಗಳನ್ನು ಹಾಕಿ ತಮ್ಮದೇ ಆದ ಹೊಗಳು ಭಟ್ಟರನ್ನು ನೇಮಿಸಿಕೊಂಡು ವ್ಯಭಿಚಾರಗಳ ಮೂಲಕವೂ ಶ್ರೀಮಂತರಾಗುತ್ತಾರೆ. ಆದರೆ ಇಬ್ಬರಿಗೂ ತೃಪ್ತಿಯಿರುವುದಿಲ್ಲ. ಒಮ್ಮೆ ತಮ್ಮಣ್ಣನು ಬಸವಯ್ಯನನ್ನು ಶಿಕ್ಷಿಸುವ ಕೆಲಸಕ್ಕೆ ಮುಂದಾಗುತ್ತಾನೆ. ಅರ್ಥಾತ್ ಒಂದು ದಿನ ತಮ್ಮಣ್ಣನು

ಸಾಯುವ ನಿರ್ಧಾರ ಕೈಗೊಳ್ಳುತ್ತಾನೆ. ವಿಚಿತ್ರವೆಂದರೆ ಇಬ್ಬರು ವಿದ್ಯಾವಂತರು, ಬುದ್ಧಿವಂತರು, ಆದರೆ ಪರಸ್ಪರ ಸ್ಪರ್ಧಿಗಳೆಂದು ಕಥೆಗಾರರು ಉಲ್ಲೇಖಿಸುತ್ತಾ, ಅಂತಿಮವಾಗಿ ಅಮೇರಿಕಾ ಮತ್ತು ರಷ್ಯಾದ ಮನಸ್ಥಿತಿಯನ್ನು ಆ ಇಬ್ಬರು ವ್ಯಕ್ತಿಗಳಿಗೆ ಹೋಲಿಕೆಯಾಗಿ ನೀಡುತ್ತಾರೆ. ಒಂದು ದೇಶದ, ಒಂದು ಪ್ರದೇಶದ ಸಂಸ್ಕೃತಿಯ ಮೇಲಿನ ದಾಳಿ ವಿನಾಶ ಇಂತಹ ಮನಸ್ಥಿತಿಗಳಿಂದಲೇ ಆಗುತ್ತಿರುವುದೆಂಬ ಎಚ್ಚರಿಕೆಯನ್ನು ಓದುಗನಿಗೆ ನೀಡಿದ್ದಾರೆ.

ಲಂಕೇಶರ ಮತ್ತು ತೇಜಸ್ವಿಯವರ ಭಾರತೀಯ ಪಾಶ್ಚಾತ್ಯ ಪರಿಕಲ್ಪನೆಗಿಂತ ತುಸು ಹೆಚ್ಚು ಎನಿಸಬಹುದಾದ ವಿಚಾರಗಳು ಅನಂತಮೂರ್ತಿಯವರ ಕಥೆಗಳಲ್ಲಿ ಕಂಡುಬರುತ್ತವೆ. ಅನಂತಮೂರ್ತಿಯವರ ಕೃತಿಗಳಲ್ಲಿ ಬಹು ದೊಡ್ಡ ವಿಚಾರವೆಂದರೆ ಮಾನವನ ಅಸ್ತಿತ್ವದ ಹುಡುಕಾಟ. ಅವರು ಜೀವನದ ಬಹುಪಾಲು ದಿನಗಳು ವಿದೇಶದಲ್ಲಿ ಕಳೆದು ಬಂದವರಾದ್ದರಿಂದ ಸಹಜವಾಗಿ ಭಾರತೀಯ ಮತ್ತು ವಿದೇಶಿ ಸಂಸ್ಕೃತಿಯ ಜನ ಜೀವನದ ಮುಖಾಮುಖಿಯನ್ನು ಅವರ ಕಥೆಗಳಲ್ಲಿ ದಾಖಲಿಸುತ್ತಾರೆ.

ಭಾರತೀಯ ಸಂಸ್ಕೃತಿಯ ಪರಿಕಲ್ಪನೆಯನ್ನು ತಮ್ಮ ಕೃತಿಯಲ್ಲಿ ವಿವರಿಸುವಾಗ ಭಾರತೀಯ ಸಂಸ್ಕೃತಿಗೆ ಸಂಬಂಧಿಸಿದಂತೆ ಅವರ ಅಭಿಪ್ರಾಯದಲ್ಲಿ "ನನ್ನಂಥವರಿಗೆ ಭಾರತದ ಕಲ್ಪನೆಯಲ್ಲಿ ಆದ ಅತ್ಯಂತ ದೊಡ್ಡ ಪರಿವರ್ತನೆಯೆಂದರೆ ಅದು ಪುರಾಣದ ನೆಲೆಯಿಂದ ರಾಜಕೀಯ ಮತ್ತು ಇತಿಹಾಸದ ನೆಲೆಗೆ ಬಂದಿದ್ದು. ಇದನ್ನು ಮಾಡಿದ್ದು ಮಹಾತ್ಮ ಗಾಂಧಿ. ಆದರೆ ನಾನು ಇಲ್ಲೊಂದು ಮಾತು ಹೇಳಬೇಕು. ಅದೇನೆಂದರೆ, ಗಾಂಧಿ ಪುರಾಣಗಳ ಕಲ್ಪನೆಯನ್ನು ಪರಿಷ್ಕರಿಸಿದವರೆ ವಿನಾ ಅದನ್ನು ಸಂಪೂರ್ಣವಾಗಿ ಕೈಬಿಡಲಿಲ್ಲ. ಅವರ ರಾಮ ಭಜನ್‌ನಲ್ಲಿರುವ 'ಈಶ್ವರ ಅಲ್ಲಾ ತೇರೇ ನಾಮ್' ಎಂಬ ಸಾಲು ಹಿಂದೂ ಮತ್ತು ಮುಸ್ಲಿಂ ಮೂಲಭೂತವಾದಿಗಳಿಬ್ಬರ ನಂಬಿಕೆಗೂ ಮೀರಿದ್ದು. ಆದರೆ ಈ ಸಾಲು ನಿಜವಾದ ಧಾರ್ಮಿಕ ಆಸಕ್ತಿಯನ್ನು ಉಳಿಸಿಕೊಂಡು, ಮೂಲಭೂತವಾದವನ್ನು ಸ್ಪಷ್ಟವಾಗಿ ವಿರೋಧಿಸುತ್ತದೆ. ಒಟ್ಟಿನಲ್ಲಿ ರಾಜಕೀಯ ಮತ್ತು ಧರ್ಮಗಳೆರಡೂ ಸೇರಿ ಭಾರತವನ್ನು ಒಂದಾಗಿಟ್ಟಿವೆ. ಒಂದು ಪ್ರಬಲವಾದ ರಾಷ್ಟ್ರವೆಂದರೆ ಒಂದೇ ಒಂದು ಭಾಷೆ. ಒಂದೇ ಒಂದು ಧರ್ಮ ಮತ್ತು ಒಂದೇ ಜನಾಂಗ ಇರಬೇಕೆಂಬ ಐರೋಪ್ಯ ಮಾದರಿಯ ರಾಷ್ಟ್ರದ ಕಲ್ಪನೆಯ ಬೆನ್ನು ಹತ್ತಿ ಹೋದರೆ, ಅದು ಭಾರತವನ್ನು ಚೂರುಚೂರು ಮಾಡಿಹಾಕುತ್ತದೆ."[೩೩] ಎನ್ನುತ್ತಾರೆ. ಸಂಸ್ಕೃತಿಯ ಹಿನ್ನೆಲೆಯಲ್ಲಿ ಅನಂತಮೂರ್ತಿಯವರ ವಿಚಾರಗಳನ್ನು ಗಮನಿಸಿದಾಗ ಒಂದು ದೇಶದ ಐಡೆಂಟಿಟಿ ಆ ದೇಶದ ಜನರು. ಅವರದೆ ಆದ ಕಲ್ಪನೆಯನ್ನು ಒಳಗೊಂಡ ಜೀವನ ಎಂಬುದಾಗಿದೆ. ಗಾಂಧೀಯ ಸಂಸ್ಕೃತಿಯ ಯೋಚನೆಗಳು ವಿಭಿನ್ನವಾಗಿವೆ ಎಂಬುದನ್ನು ಅವರ "ಈಶ್ವರ ಅಲ್ಲಾ ತೇರೇ ನಾಮ್" ಎಂಬ ಸಾಲು ಧರ್ಮವನ್ನು ಮೀರಿದ ವಿಚಾರವನ್ನು ತಿಳಿಸುತ್ತದೆ. ಇಂದು ಪ್ರತಿಯೊಂದು

ಧರ್ಮದ ಮೂಲಭೂತವಾದಿಗಳು ತಮ್ಮ ಧರ್ಮವನ್ನು ಪ್ರಧಾನಗೊಳಿಸುವ ಕಾರಣಕ್ಕಾಗಿ ಜನರಲ್ಲಿ ಭಯ ಮತ್ತು ಅಂಧ ಶ್ರದ್ದೆಯನ್ನು ಬಿತ್ತುತ್ತಿದ್ದಾರೆ. ಅದು ಭಾರತದಂತಹ ಬಹು ಸಂಸ್ಕೃತಿಯ ದೇಶಕ್ಕೆ ಮಾರಕ.

ಭಾರತವನ್ನು ಪಾಶ್ಚಾತ್ಯ ನೆಲೆಯಲ್ಲಿ ನಿಂತು ಯೋಚಿಸುವುದು, ಹಾಗೆಯೇ ಪಾಶ್ಚಾತ್ಯ ಚಿಂತನೆಯನ್ನು ಭಾರತದಲ್ಲಿ ಅಳವಡಿಸುವುದು ಸಂಸ್ಕೃತಿಯ ದೃಷ್ಟಿಯಿಂದ ಎಂದಿಗೂ ಶ್ರೇಷ್ಠವೆನಿಸಲಾರದು. ಅವರ ಕೆಲವು ಕಥೆಗಳನ್ನು ಗಮನಿಸಿದಾಗ ಭಾರತೀಯರ ಮತ್ತು ವಿದೇಶಿಯರ ಜೀವನಕ್ರಮದ ವಿಚಾರಗಳನ್ನು  ನೋಡಬಹುದಾಗಿದೆ.

ಭಾರತೀಯ ಹಿಂದೂ ಸಂಸ್ಕೃತಿಯಲ್ಲಿ 'ಕುಂಕುಮ' ಅತಿ ದೊಡ್ಡ ಸ್ಥಾನವನ್ನು ಪಡೆದಿದೆ. ಸಹಜವಾಗಿ ಹೆಣ್ಣಿಗೆ 'ಕುಂಕುಮ'ವೂ ಸೌಂದರ್ಯದ ಸಂಕೇತವೆಂತಲೂ, ರಕ್ಷಣೆಯ ಸಂಕೇತವೆಂತಲೂ, ಸೌಭಾಗ್ಯದ ಸಂಕೇತವೆಂತಲೂ ಗುರ್ತಿಸುತ್ತಾರೆ. ವಿವಾಹ ಸಂಬಂಧ ಗಳಲ್ಲಂತೂ ಇದರ ಮಹತ್ವ ಹೆಚ್ಚಾಗಿರುತ್ತದೆ. ಒಂದು ವೇಳೆ ಗಂಡ ಸತ್ತು ಹೆಣ್ಣಿಗೆ ವೈಧವ್ಯ ಪ್ರಾಪ್ತವಾದರಂತೂ 'ಕುಂಕುಮ'ವನ್ನೂ ಧರಿಸುವುದು ಅನೇಕ ಹೆಣ್ಣುಮಕ್ಕಳಿಗೆ ಇಲ್ಲವಾಗುತ್ತದೆ. ಆಧುನಿಕತೆಯ ಪರಿಕಲ್ಪನೆಯೂ ಹೆಚ್ಚಾದಂತೆ ಇದನ್ನು ನೋಡುವ ದೃಷ್ಟಿಕೋನ ಬದಲಾಗಿದೆ. ಅನಂತಮೂರ್ತಿಯವರು ಇಂತಹ ಒಂದು ಸಂಗತಿಯನ್ನು "ಪ್ರಕೃತಿ" ಕಥೆಯಲ್ಲಿ ಉಲ್ಲೇಖಿಸುತ್ತಾರೆ. ಚಿಕ್ಕವಯಸ್ಸಿನಲ್ಲಿಯೇ ಗಂಡನನ್ನು ಕಳಕೊಂಡ ಸಂಕಪ್ಪಯ್ಯನ ಮಗಳು ಲಕ್ಷ್ಮಿಯು ತವರು ಮನೆ ಸೇರುತ್ತಾಳೆ. ಸಂಕಪ್ಪಯ್ಯನಿಗೆ ತನ್ನ ಮಗಳು ಭಾರವೆನಿಸುವುದಿಲ್ಲ. " ಗಂಡ ಸತ್ತರೇನು ನಿನಗೆ ಯಾವುದಕ್ಕೂ ಕಡಿಮೆಯಾಗದಂತೆ ನೋಡಿಕೊಳ್ಳುವ  ನನ್ನಂತಹ ತಂದೆಯಿಲ್ಲವೇ? ಎಂದೆ, ಮಾತು ಹುಡುಕುವವರಂತೆ ಸುಮ್ಮನೆ ಅವಳ ಹಾಳು ಹಣೆ ನೋಡಿದರು."[೬೪] ಸಂಕಪ್ಪಯ್ಯನಿಗೆ ಮಗಳನ್ನು ತಾನು ಚೆನ್ನಾಗಿ ನೋಡಿಕೊಳ್ಳುತ್ತಿದ್ದೇನೆ ಎಂಬ ಹೆಮ್ಮೆಯಿದ್ದರೂ ಅವಳ ಹಣೆಯಲ್ಲಿ 'ಕುಂಕುಮ' ಇಲ್ಲದಿರುವುದು, ಅವರು ಯೋಚನೆಯನ್ನು ಮಾಡುವಂತ ಪ್ರಸಂಗ ಬಂದೊದಗುತ್ತದೆ. ಇಲ್ಲಿ ಕುಂಕುಮ ಸಂಸ್ಕೃತಿಯ ಸಂಕೇತವೆಂಬುದಕ್ಕೆ  ಭಾರತೀಯ ಜನಾಂಗ ಹಿಂದಿನಿಂದಲೂ ಅದಕ್ಕೊಂದು ವಿಶಿಷ್ಟ ಸ್ಥಾನ ಮಾನ ಕೊಟ್ಟಿರುವುದು ಭಾರತೀಯ ದೃಷ್ಟಿ ಕೋನದಲ್ಲಿ ನೋಡಿದಾಗ ತಿಳಿಯುತ್ತದೆ. ಆದರೆ ಇದು ಗುಲಾಮಿಯ ಸಂಕೇತವೆಂದರೆ ಅದನ್ನು ಕೂಡ ಬೇರೆ ದೃಷ್ಟಿಕೋನದಲ್ಲಿ ನೋಡಬಹುದು. ಗಂಡ ಸತ್ತ ಹೆಣ್ಣಿಗೆ ಕುಂಕುಮ ಭಾಗ್ಯವಿಲ್ಲವೆನ್ನುವುದಾದರೆ, ಹೆಂಡತಿ ಸತ್ತ ಗಂಡನಿಗೆ ಏನು ಎಂಬ ಪ್ರಶ್ನೆ ಸಹಜವಾಗಿ ಆಧುನಿಕ ಭಾರತೀಯರು ಯೋಚಿಸುವುದಕ್ಕೆ ಅವಕಾಶವಿದೆ. ಭಾರತದಲ್ಲಿ ಅತಿ ದೊಡ್ಡ ಸಮಸ್ಯೆಯೆಂದರೆ ಗಂಡಿನ ಸ್ವಾತಂತ್ರ್ಯ ಹೆಣ್ಣಿಗೆ ಇನ್ನೂ ದೊರಕದಿರುವುದು. ಅದಕ್ಕೆ 'ಪ್ರಕೃತಿ'ಯ ಲಕ್ಷ್ಮಿ ಉದಾಹರಣೆಯಾಗಿದ್ದಾಳೆ. ಆಕೆಯ ತಂದೆ ಅವಳ ಹಣೆಯಲ್ಲಿ ಕುಂಕುಮ ಇಲ್ಲದೆ ಹಾಳು ಹಣೆಯಂತೆ ಕಾಣುವುದನ್ನು

ನೋಡುತ್ತಾನೆ. ಆದರೆ ಆತನು ದುರ್ಗಿಗೆ ಪೂಜೆ ಮಾಡುವ ಸಂದರ್ಭವನ್ನು ಯೋಚಿಸುತ್ತಾ ಇದಕ್ಕೆ 'ಬಿಕನಾಸಿಯಂತೆ, ಪೂಜೆಯ ಮಧ್ಯದಲ್ಲಿ ಹೆಂಡತಿ ಅಡ್ಡ ಬಂದರೆ ಅವಳ ಕೊರಳಿನ ತಾಳಿ ಹರಿದು ಹೊರ ದಬ್ಬುತ್ತೇನೆ' ಎನ್ನುವ ಮನಸ್ಥಿತಿಯನ್ನು ಹೊಂದಿದವನಾಗುತ್ತಾನೆ. ಮಗಳ ರೀತಿಗೆ 'ಕುಂಕುಮ' ಪ್ರಾಧಾನ್ಯತೆಯನ್ನು ಹೊಂದಿದ್ದರೆ, ಹೆಂಡತಿಯ ವಿಚಾರಕ್ಕೆ 'ತಾಳಿ' ಅಷ್ಟೇನು ಮಹತ್ವವನ್ನು ಹೊಂದದೆ ಇರುವುದು ವ್ಯಕ್ತಿಯ ದ್ವಿಮುಖ ನೀತಿಯ ಧೋರಣೆಯನ್ನು ತೋರಿಸುತ್ತದೆ. ಗಂಡನಿದ್ದಾಗಲೇ ಹೆಂಡತಿಯ ತಾಳಿಯನ್ನು ಕೀಳುವುದು ಅವನ ಕೋಪದ ಪ್ರಮಾಣವನ್ನು ತೋರಿಸುತ್ತದೆ. ಹಿಂದೂ ಧರ್ಮದ ಹೆಣ್ಣಿಗೆ ತಾಳಿ, ಕುಂಕುಮ, ಹೂವು ಸಾಂಪ್ರದಾಯಿಕ ಮಹತ್ವವನ್ನು ಹೊಂದಿವೆ.

ಭಾರತೀಯ ಸಂಸ್ಕೃತಿಯ ಹೆಸರಿನಲ್ಲಿ ಆಗುತ್ತಿರುವ ಅನ್ಯಾಯ ಅತಿ ಹೆಚ್ಚು ಮಹಿಳೆಯರ ಮೇಲೆ ಆಗಿದೆ. ಧರ್ಮದ ಹೆಸರಿನಲ್ಲಿ ಹೆಣ್ಣನ್ನು ಬಂಧಿಸುವುದು, ಸಂಸ್ಕೃತಿಯ ಆಚಾರದ ಹೆಸರಿನಲ್ಲಿ ಆಕೆಯನ್ನು ಬಂಧಿಸುವುದು ಹಿಂದಿನಿಂದಲೂ ಬಂದಿದೆ. ಸ್ವಾತಂತ್ರ್ಯೋತ್ತರ ಕಾಲದವರಿಗೂ ಇದರ ಪ್ರಮಾಣ ಹೆಚ್ಚಾಗಿಯೇ ಇತ್ತು. ಚಿಕ್ಕ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡರೆ, ಹೆಣ್ಣು ಆಶ್ರಯವನ್ನು ಗಂಡನ ಮನೆಯಲ್ಲಿ ಅಥವಾ ತವರಿನಲ್ಲಿ ಜೀವನ ಮುಗಿಯವವರೆಗೂ ಕಳೆಯುವ ದುರಂತ ಸ್ಥಿತಿ ನಗರಕ್ಕಿಂತ ಹೆಚ್ಚಾಗಿ ಗ್ರಾಮೀಣ ಭಾಗದಲ್ಲಿ ಕಂಡುಬರುತ್ತದೆ. ಭಾರತೀಯ ಸಂಸ್ಕೃತಿಯ ದೃಷ್ಟಿಯಿಂದ 'ಘಟಶ್ರಾದ್ಧ' ಅನಂತಮೂರ್ತಿಯವರ ಅನೇಕ ಕಥೆಗಳಲ್ಲಿ ಹೆಚ್ಚಿನ ಮಹತ್ವವನ್ನು ಹೊಂದಿದೆ.

'ಘಟಶ್ರಾದ್ಧ' ಕಥೆಯ ಯಮುನಾ ಭಾರತೀಯ ಸಂಪ್ರದಾಯ ಎಂಬ ಅನಿಷ್ಟ ಪದ್ಧತಿಯ ಅಡಿಯಲ್ಲಿ ನರಳುವ ಹೆಣ್ಣಾಗಿ ಕಾಣುತ್ತಾಳೆ. ಚಿಕ್ಕ ವಯಸ್ಸಿನಲ್ಲಿಯೇ ವೈಧವ್ಯ ಪ್ರಾಪ್ತಿಯಾದ ಆ ಹೆಣ್ಣು ಸಂಪ್ರದಾಯದ ಕಟ್ಟಳೆಯಲ್ಲಿ ಬದುಕನ್ನು ಸಾಗಿಸುತ್ತಾಳೆ. ಭಾರತದ ಅನಿಷ್ಟ ಪದ್ಧತಿಯೆಂದರೆ 'ಸಂಪ್ರದಾಯ ಹೆಸರಿನಲ್ಲಿ ಹೆಣ್ಣಿನ ಶೋಷಣೆ' ಅದು ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಅನಿಷ್ಟ ಪದ್ಧತಿ. ಭಾರತೀಯ ಹೆಣ್ಣು ಇಂಥ ಪದ್ಧತಿಯಿಂದ ಇಂದಿಗೂ ಕೂಡ ಸಂಪೂರ್ಣವಾಗಿ ಹೊರ ಬಂದಿಲ್ಲ. ಆಧುನಿಕತೆ ಬೆಳೆದಂತೆ ಹೊಸ ಚಿಂತನೆಗಳು ಬೆಳೆದು ಭಾರತೀಯರೂ ಬದಲಾಗಬೇಕು. ಆದರೆ ಶತಶತಮಾನಗಳಿಂದ ಸಂಪ್ರದಾಯ ಹೆಸರಿನಲ್ಲಿ ಆಗುತ್ತಿರುವ ಅನ್ಯಾಯಗಳಿಂದ ಇನ್ನೂ ಮುಕ್ತಿ ಸಿಕ್ಕಿಲ್ಲ.

ಅನಂತಮೂರ್ತಿಯವರು ತಮ್ಮ ಸುತ್ತಮುತ್ತಲಿನ ಘಟನೆಗಳನ್ನು ಕಥೆಗಳ ರೂಪದಲ್ಲಿ ನಿರೂಪಿಸುತ್ತಾ ಒಂದೊಂದು ಚೌಕಟ್ಟನ್ನು ಕಟ್ಟಿಕೊಟ್ಟಿದ್ದಾರೆ. ಕಥೆಗಾರನ ಮನಸ್ಸು ಸದಾ ಭಾರತೀಯತೆಯ ಕಡೆಗೆ ತವಕಿಸುತ್ತಿರುತ್ತದೆ ಎಂಬುದನ್ನು ಒಂದೊಂದು ಕಥೆಗಳನ್ನು ನೋಡುತ್ತಾ ಹೋದಂತೆ ತಿಳಿಯುತ್ತದೆ.

ಅನಂತಮೂರ್ತಿಯವರ 'ಕ್ಲಿಪ್ ಜಾಯಿಂಟ್', 'ಆಕ್ರಮಣ', 'ರೂತ್ ಮತ್ತು ರಸೂಲ್,' 'ಅಕ್ಕಯ್ಯ,' ಕಥೆಗಳು ಬಹುಪಾಲು ಪಶ್ಚಿಮ ದೇಶಗಳು ಮತ್ತು ಭಾರತೀಯರ ಬದುಕಿನ ಸುತ್ತ ಹೆಣೆದ ಕಥೆಗಳಾಗಿವೆ. ಇಲ್ಲಿ ನಡೆಯುವ ಚರ್ಚೆಗಳು ಎರಡು ದೇಶಗಳ ಸಾಂಸ್ಕೃತಿಕ ಮನಸ್ಥಿತಿಯನ್ನು ಕುರಿತ ವಿಚಾರಗಳಾಗಿವೆ. ಭಾರತೀಯ ಸಮಾಜಕ್ಕೆ ಚೈನಾ ಅಥವಾ ರಷ್ಯಾದ ಕಮ್ಯೂನಿಸ್ಟ್ ತತ್ವಗಳು ಏಕೆ ಒಗ್ಗುವುದಿಲ್ಲವೆಂಬುದನ್ನು ಬದುಕಿನ ರೀತಿನೀತಿಗಳ ಮೂಲಕ ವಿವಿಧ ಪಾತ್ರಗಳಲ್ಲಿ ಕಟ್ಟಿಕೊಟ್ಟಿದ್ದಾರೆ.

'ಕ್ಲಿಪ್ ಜಾಯಿಂಟ್' ಅನಂತಮೂರ್ತಿಯವರ ದೀರ್ಘವಾದ ಕಥೆಗಳಲ್ಲೊಂದು. ಎರಡು ವಿಭಿನ್ನ ದೇಶಗಳ, ವಿಭಿನ ಮನಸ್ಸಿನ ವ್ಯಕ್ತಿಗಳನ್ನು ಕಥೆಯ ಚೌಕಟ್ಟಿನಲ್ಲಿ ಕಟ್ಟಿಕೊಟ್ಟಿದ್ದಾರೆ. ಕಥೆಯಲ್ಲಿನ ನಾಯಕ ಕೇಶವನು ಭಾರತದಿಂದ ಇಂಗ್ಲೆಂಡಿಗೆ ಉನ್ನತ ವ್ಯಾಸಂಗಕ್ಕೆ ಬಂದಿರುತ್ತಾನೆ. ಮುಂದೆ ಇಂಗ್ಲೆಂಡಿನಲ್ಲಿರುವ ಸ್ಟೂಆರ್ಟ್‌ನು ಕೇಶವನ ಗೆಳೆಯನಾಗುತ್ತಾನೆ. ಇಬ್ಬರು ತಮ್ಮ ದೇಶಗಳ ಜೀವನದ ಬಗ್ಗೆ ಜಿಗುಪ್ಸೆಯನ್ನು ಹೊಂದಿರುತ್ತಾರೆ. ಹಾಗೆಯೇ ಸ್ಟೂಆರ್ಟ್‌ನು ಭಾರತದ ಜೀವನದ ಶೈಲಿಯನ್ನು, ಕೇಶವನು ಇಂಗ್ಲೆಂಡ್ ದೇಶದ ಜೀವನದ ಶೈಲಿಯನ್ನು ಇಷ್ಟಪಡುವ ವ್ಯಕ್ತಿಗಳಾಗಿರುತ್ತಾರೆ. ಎರಡು ವಿಭಿನ್ನ ಧರ್ಮಗಳ ಸಂಸ್ಕೃತಿಯು ಇಲ್ಲಿ ಅನಾವರಣಗೊಳ್ಳುತ್ತದೆ. ಒಂದು ಭಾರತೀಯ ಹಿಂದೂ ಸಂಸ್ಕೃತಿಯ ನೆಲೆಯಲ್ಲಿ ಬದುಕುತ್ತಿರುವ ಜೀವನ ಕ್ರಮವಾದರೆ, ಮತ್ತೊಂದು ಮುಂದುವರೆದ ದೇಶವಾದ ಇಂಗ್ಲೆಂಡಿನ ಕ್ರಿಶ್ಚಿಯನ್ ಧರ್ಮದ ಸಂಸ್ಕೃತಿಯ ವಿಚಾರಗಳಾಗಿವೆ.

ಕೇಶವನು ಭಾರತದಲ್ಲಿ ತನ್ನ ಬದುಕಿನ ಇರುವಿಕೆಯನ್ನು ನೆನೆಯುತ್ತಾನೆ. ಕೆಲವನ್ನು ಸೂಆರ್ಟ್‌ಗೆ ತಿಳಿಸುತ್ತಾನೆ. ಇನ್ನೂ ಕೆಲವನ್ನು ತಾನೇ ಸ್ವಗತವಾಗಿ ಹೇಳಿಕೊಳ್ಳುತ್ತಾನೆ. ಕೇಶವನು ತನ್ನಾದಿಯಾಗಿ ಭಾರತದ ಅತೃಪ್ತ ಕಾಮಿಗಳಾಗಿರುವ ತನ್ನ ದೇಶದ ಯುವ ಜನತೆಯ ಬಗ್ಗೆ ಯೋಚಿಸುತ್ತಾನೆ. ಕನ್ಯಾ ಮಾಸದಲ್ಲಿ ನಾಯಿಗಳು ಕಾಮ ಕೇಳಿಯ ರೀತಿಯಲ್ಲಿ, ಲಂಡನ್‌ನಗರದ ಬೆಂಚೊಂದರ ಮೇಲೆ ಹುಡುಗ-ಹುಡುಗಿಯರು ಸಲ್ಲಾಪದಿಂದ ನರಳುವುದನ್ನು ಕದ್ದುಮುಚ್ಚಿ ನೋಡುತ್ತಾನೆ. ತನಗೆ ಮೂವತ್ತೆರಡು ವರ್ಷವಾಗಿದೆ. ಆದರೆ ಒಂದು ಹುಡುಗಿಯನ್ನು ಮುಟ್ಟಿಲ್ಲ ಎಂದು ಅತೃಪ್ತ ಮನಸ್ಸಿನಿಂದ ಸ್ಟೂಆರ್ಟ್‌ನಿಗೆ ಹೇಳುತ್ತಾನೆ.

ಕೇಶವನು ತನ್ನ ಚಿಕ್ಕಪ್ಪನನ್ನು ಸ್ಟೂಆರ್ಟ್‌ನಿಗೆ ಹೋಲಿಸುತ್ತಾನೆ. "ನನಗೊಬ್ಬ ಚಿಕ್ಕಪ್ಪನಿದ್ದ. ಒಂದು ದಿನ ಅವ ಮನೆ ಮಠ ಎಲ್ಲ ಬಿಟ್ಟು ಬದರಿಕಾಶ್ರಮಕ್ಕೆ ತಪಸ್ಸಿಗೆ ಹೋದ..... ಆದರೆ ನಿನ್ನ ರೀತಿ ಬೇರೆ; ನೀನು ಇಂಗ್ಲೆಂಡಿನ ಸಭ್ಯ ನಾಗರಿಕತೆಯ ಅತ್ಯುತ್ತಮ ಫಲವಿದ್ದ ಹಾಗೆ. ಒಬ್ಬ ಸಂತ, ಇನ್ನೊಬ್ಬ ಸಭ್ಯ. ಸಭ್ಯ ತನ್ನ ಜೀವನದ ಓರೆ-ಕೋರೆಗಳನ್ನು ತಿದ್ದಿಕೊಂಡು ಬಾಳನ್ನು ಒಂದು ಹದ್ದಿನಲ್ಲಿ, ಕೌಶಲ್ಯದಲ್ಲಿ ನಡೆಸಿಕೊಂಡು ಹೋಗ್ತಾನೆ....

ನಾನು ಹೇಳ್ತಿರೋದು ನನಗೇ ಇನ್ನೂ ತಿಳಿಯಾಗಿಲ್ಲ.... ಆದರೂ ಇಷ್ಟು ಅನ್ನಿಸುತ್ತೆ; ನೀನು ಸಭ್ಯ, ಅವನು ಸಂತ, ನಾನು...."[೩೫] ಇವುಗಳಲ್ಲಿ ನಾನು ಯಾವುದರಲ್ಲೂ ನಾನು ಆಗಿಲ್ಲ ಎನ್ನುತ್ತಾನೆ.

ಭಾರತೀಯ ಹಿಂದೂ ಸಂಸ್ಕೃತಿಯಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ 'ಸಂತ' ಎನ್ನುವ ಪದ. ಬದುಕಿನಲ್ಲಿ ಸಾಂಸಾರಿಕ ಬದುಕನ್ನು ತ್ಯಜಿಸಿ ಅಥವಾ ತಿರಸ್ಕರಿಸಿ ಸನ್ಯಾಸಿಯಾಗಿ ಬದುಕುವುದು. ಅದು ಕೇಶವನ ಚಿಕ್ಕಪ್ಪನ ಬದುಕಿನಲ್ಲಿ ಜರುಗುತ್ತದೆ.

ಕೇಶವನಿಗೆ ಮನೆಯ ಜವಾಬ್ದಾರಿಯು ಇರುತ್ತದೆ. ಅಮ್ಮನ ಮಾತಿನಂತೆ, ತಾನು ಸ್ವಂತ ಅಕ್ಕನ ಮಗಳು ಭಾಗೀರತಿಯನ್ನು ಮದುವೆಯಾಗಬೇಕು. ನಾಲ್ಕು ಜನ ತಂಗಿಯರಿಗೆ ಮದುವೆ ಮಾಡಬೇಕು. ತನ್ನ ತಮ್ಮಂದಿರಾದ ಮಾಧು, ಸುಧೀಂದ್ರರು ಜವಾಬ್ದಾರಿಯಿಂದ ದೂರ. ಬದುಕಿನ ಮುಂದಿನ ಘಟನೆಗಳೆಲ್ಲವೂ ಗೋಜಲುಗೋಜಲು. ಲಂಡನ್ನಿನ ನೆಲದಲ್ಲಿ ನಿಂತು ಭಾರತದ ಬದುಕಿನ ಬಗ್ಗೆ ಯೋಚಿಸುತ್ತಿರುತ್ತಾನೆ. ತಂಗಿಯರು ಪಾಶ್ಚಾತ್ಯರಂತೆ ಅವರವರ ಹುಡುಗರನ್ನು ನೋಡಿಕೊಂಡಿದ್ದರೆ ತನ್ನ ಜವಬ್ದಾರಿ ದೂರವಾಗುತ್ತಿತ್ತು. ತನ್ನ ಕಾಮದಂತಹ ಪ್ರಬಲವಾದ ಆಸೆಯೂ ಸಫಲವಾಗುತ್ತಿದೆಂದು ಯೋಚಿಸುತ್ತಾನೆ.

ಸೂಅರ್ಟ್ಸನು ತನ್ನ ಮುಂದುವರೆದ ದೇಶದ ಅರ್ಥಹೀನದ ಬದುಕನ್ನು ಹೇಳುತ್ತಾನೆ. ಹುಡುಗ-ಹುಡುಗಿಯರ ಜೀವನ, ಗಂಡ-ಹೆಂಡತಿ-ಮಗನ ಜೀವನ ಇಂಗ್ಲೆಂಡಿನಂತಹ ದೇಶದಲ್ಲಿ ನಿಜವಾದ ಜೀವನವೇ ಅಲ್ಲವೆಂದು ಹೇಳುತ್ತಾನೆ. ಹಾಗಾದರೆ ತನ್ನ ಜೀವನವೆಂದರೆ ಹೇಗಿರಬೇಕು? ಈಗ ಹೇಗಿದೆ ಎಂದು ಹೇಳುತ್ತಾನೆ. "ಜೀವನದಲ್ಲಿ ತಿಕ್ಕಾಟ ಬೇಕು, ಬಿರುಸು ಬೇಕು, ಸುಖ ದುಃಖ ಬೇಕು- ಸಲೀಸಾಗಿ ಜಾರಿಬಿಡೋದಲ್ಲ. Oh! I am bored, torribly bored, ಇಂಗ್ಲೆಂಡಿನಲ್ಲಿ ಜೀವವಿಲ್ಲ- ಈ ಸುಖೀ ಸಮಾಜದಲ್ಲಿ ಜೀವನಕ್ಕೊಂದು ಉದ್ದೇಶ ಇಲ್ಲ. ಹೇಳ್ತಿ- ನಿನ್ನ ಜೀವನ ಬಡತನದ ವಿರುದ್ಧ ಹೋರಾಡೋದರಲ್ಲೆ ವ್ಯಯವಾಯಿತು. ಕಾಮದ ಅನುಭವವಿಲ್ಲದೆ ಮುರುಟಿತೂಂತ. ನನ್ನನ್ನೆ ತಗೊ, ಕೇಶವ್: ನನಗೆ ಬಡತನದ ಅನುಭವ ಇಲ್ಲ; ಹಸಿವೆಂದರೆ ಏನೂಂತ ಗೊತ್ತಿಲ್ಲ; ಹದಿನಾರನೇ ವರ್ಷದಿಂದ ಈವರೆಗೆ ಹೆಣ್ಣು ಬೇಕೂಂತ ಅನ್ನಿಸಿದಾಗೆಲ್ಲ ಹೆಣ್ಣಿನ ಸುಖ ಅಲಭ್ಯ ಅಂತ ಅನ್ನಿಸಿದ್ದಿಲ್ಲ- ಸಂತಾನ ನಿರೋಧ ಎಲ್ಲರಿಗೂ ಗೊತ್ತಿರೋ ಈ ದೇಶದಲ್ಲಿ ಹುಡುಗಿಯರ ಜೊತೆ ಮಲಗೋದು ಭಯದ ವಿಷಯವಲ್ಲ, ಎಲ್ಲ ಆಯಿತು- ತಿಂದೆ, ಉಂಡೆ, ಮಲಗಿದೆ, ಸಂಭೋಗಿಸಿದೆ, ಇನ್ನಷ್ಟು ತಿಂದೆ, ಮಲಗಿದೆ, ಸಂಭೋಗಿಸಿದೆ- ಆಮೇಲೆ? ಬದುಕಿನಲ್ಲಿ ಇನ್ನು ಯಾವ thrill ಇದೆ?"[೩೬]

ಕೇಶವನು ಸಭ್ಯ ನಾಗರಿಕನೆಂದು ಸ್ಟೂಅರ್ಟ್ಸನನ್ನು ಕರೆಯುತ್ತಾನೆ. ಆದರೆ 'ಸಭ್ಯ ನಾಗರೀಕನೆಂದರೆ' ಯಾರು ಎಂಬ ಪ್ರಶ್ನೆ ಭಾರತದಲ್ಲಿಯೇ ಒಂದು ವ್ಯಾಖ್ಯಾನವನ್ನು

ಹೊಂದಿದ್ದರೆ ಅದು ಪಾಶ್ಚಾತ್ಯರಲ್ಲಿಯೇ ಮತ್ತೊಂದು ವ್ಯಾಖ್ಯಾನವೊಂದಿದೆ. ಕೇಶವನು ಭಾರತೀಯ ಪ್ರಜೆಯಾದರೂ ಅವನು ಯೋಚಿಸುವುದು ಇಂಗ್ಲೆಂಡಿನ ನೆಲೆಗಟ್ಟಿನಲ್ಲಿ ಎಂಬುದನ್ನು ಗಮನಸಿಬೇಕಾಗುತ್ತದೆ. ಇಂಗ್ಲೆಂಡಿನಂತಹ ಬದುಕು ನಿಜವಾದ ಬದುಕೇ ಅಲ್ಲ ಎನ್ನುವ ಸ್ಟೂಅರ್ಟ್‌ನ ಮಾತು ಕೂಡ ಅಷ್ಟೇ ಮಹತ್ವವನ್ನು ಪಡೆಯುತ್ತದೆ. ಶ್ರೀಮಂತಿಕೆಯೇ ನಿಜವಾದ ಬದುಕಲ್ಲ. ಅದರಲ್ಲಿ ಬಡತನ, ಬದುಕಿನ ಘರ್ಷಣೆಯೇ ನಿಜವಾದ ಬದುಕು. ಅದನ್ನು ಯೋಚಿಸದೆ ಶ್ರೀಮಂತಿಕೆಯ ಜೀವನದಲ್ಲಿ ತಿನ್ನುವುದು–ಮಲಗುವುದು–ಸಂಭೋಗಿಸುವುದು ನಿಜವಾದ ಬದುಕಲ್ಲವೆನ್ನುವ ಸ್ಟೂಅರ್ಟ್‌ನ ತರ್ಕ ಮುಂದುವರೆದ ದೇಶದ ಮನಸ್ಥಿತಿಯನ್ನು ತೋರಿಸುತ್ತದೆ. ಸ್ಟೂಅರ್ಟ್‌ನು, ಪ್ರತಿಯೊಂದು ಹಂತದಲ್ಲೂ ಆತನ ಮುಂದುವರೆದ ವರ್ತಕ ದೇಶದ ದುರಂತ ಸ್ಥಿತಿಯನ್ನು ಹೇಳುತ್ತಾನೆ. ಇಂಗ್ಲೆಂಡ್‌ನಂತಹ ದೇಶದಲ್ಲಿ ಅನಂತಮೂರ್ತಿಯವರು ಆಧುನಿಕತೆಯ ವರ್ತಕ ದೇಶದ ವ್ಯಾಪಾರೀಕರಣದ ಮನಸ್ಥಿತಿಯನ್ನು 'ಪೂರ್ವಕ್ಕೆ ಮುಖ; ಪಶ್ಚಿಮಕ್ಕೆ ಪ್ರಯಾಣ' ಎಂಬ ಲೇಖನದಲ್ಲಿ ಮೆನೂಹಿನ್‌ನ ಅಭಿಪ್ರಾಯವನ್ನು ಉಲ್ಲೇಖಿಸುತ್ತಾರೆ. "ಪಾಶ್ಚಿಮಾತ್ಯ ನಾಗರಿಕತೆ ತನ್ನ ಜನಸಮೂಹದ ಆಸೆಬುರುಕತನದಲ್ಲಿ ತನ್ನ ಕ್ರಿಯಶೀಲತೆಯನ್ನು ಕಳೆದುಕೊಂಡಿದೆ. ಕುಟುಂಬ ಪ್ರಜ್ಞೆಯಾಗಲೀ, ತಾನೊಂದು ಸಮುದಾಯವೆಂಬ ಭಾವನೆಯಾಗಲೀ ಅದಕ್ಕೆ ಇಲ್ಲ. ಎಲ್ಲರೂ ಬಿಡಿಬಿಡಿಯಾದ ವ್ಯಕ್ತಿಗಳು. ತನ್ನ ಸುಖ ತನಗೆ ಎಂದುಕೊಳ್ಳುವವರು. ಆದ್ದರಿಂದ ಲೋಕೋಪಯೋಗಿಯಾದ ಹೊಸದೇನನ್ನೂ ಅದು ಸೃಷ್ಟಿಸಲಾರದು. ಮನೆಯಲ್ಲಿ ಗಂಡ ಹೆಂಡತಿ ಒಬ್ಬ ಮಗ ಇದ್ದರೆ ಮೂವರಿಗೂ ಮೂರು ಕಾರುಗಳು ಬೇಕು: ಮೂರು ಟೆಲಿವಿಷನ್‌ಗಳು ಬೇಕು. ನಿಮ್ಮ ಭಾರತ ಹಾಗಿಲ್ಲ. ನಿಮಗಿನ್ನೂ ಸಮುದಾಯದ ಪ್ರಜ್ಞೆಯಿದೆ; ಹುಟ್ಟಿದ ಊರಿನಲ್ಲೇ ಬದುಕಿ ಬಾಳಿ ಸಾಯಬೇಕೆಂಬುವವರೇ ನಿಮ್ಮಲ್ಲಿ ಹೆಚ್ಚಾಗಿದ್ದಾರೆ. ಹೊಟ್ಟೆತುಂಬ ಉಂಡು, ಸೂರಿನ ಕೆಳಗೆ ನೆಲದ ಮೇಲೆ ಚಾಪೆಹಾಸಿ ಮಲಗಿ ಸುಖವಾಗಿ ನಿದ್ರೆ ಮಾಡಿ ವರ್ಷಕ್ಕೊಮ್ಮೆ ತೀರ್ಥಸ್ನಾನ ಮಾಡಿ ಬರುವುದರಲ್ಲೇ ಸಾರ್ಥಕತೆ ಕಾಣುವ ಈ ಜನ ಆಳುವವರ ಮೇಲೆ ಇಲ್ಲಸಲ್ಲದ ಸೌಕರ್ಯಗಳಿಗಾಗಿ ಒತ್ತಡ ತರುತ್ತಿಲ್ಲ."[೩೭] ಎಂಬುದಾಗಿದೆ.

ಅನಂತಮೂರ್ತಿಯವರು, ಸ್ಟೂಅರ್ಟ್‌ನ ಪಾತ್ರದ ಮೂಲಕ ಇಂಗ್ಲೆಂಡ್ ದೇಶದ ಸ್ಥಿತಿಗತಿಗಳನ್ನು, ಹಾಗೆಯೇ ಕೇಶವನೆಂಬ ಪಾತ್ರದ ಮೂಲಕ ಭಾರತೀಯರ ಮನಸ್ಥಿತಿಯನ್ನು ತಿಳಿಸುವ ಕೆಲಸವನ್ನು ಮಾಡುತ್ತಾರೆ. ಆದರೂ ವಯಸ್ಸಿನ ಸಹಜವಾದ ಕಾಮವನ್ನು ತಡೆ ಹಿಡಿಯಲಾರದ ಕೇಶವನು ತನ್ನ ಸಂಪಾದನೆಯನ್ನು ಕಳೆದುಕೊಳ್ಳುವ ರೀತಿಯೇ ಇಡೀ ಕಥೆಯ ಶೀರ್ಷಿಕೆಯಾಗಿದೆ. ಕೇಶವನು, ಸ್ಟೂಅರ್ಟ್‌ನ ಜೊತೆಗೂಡಿ ಬಾರ್‌ವೊಂದಕ್ಕೆ ಕುಡಿಯಲು ಹೋಗುತ್ತಾನೆ. ಕುಡಿತ ಮುಂದುವರೆದಂತೆ ತನ್ನ ಮನಸ್ಸಿನಲ್ಲಿ ಹುದುಗಿದ್ದ

ಕಾಮದ ಬಯಕೆಯನ್ನು ರೋಸಿಯೆಂಬ ನೃತ್ಯಗಾರ್ತಿಯ ಮೂಲಕ ಈಡೇರಿಸಿಕೊಳ್ಳಲು ಬಯಸಿ, ಗೆಳೆಯನ ಮಾತನ್ನು ಮೀರಿ ಅವಳ ಹತ್ತಿರ ಹೋಗುತ್ತಾ ತನಗೆ ಗೊತ್ತಿಲ್ಲದಂತೆ ತನ್ನ ಹಣವನ್ನೆಲ್ಲಾ ಕಳೆದುಕೊಳ್ಳುತ್ತಾನೆ. ಕೊನೆಗೆ ರೋಸಿಯ ದೇಹವೂ ಸಿಗುವುದಿಲ್ಲ. ತನ್ನ ಬಳಿ ಹಣವೂ ಉಳಿಯುವುದಿಲ್ಲ. ತನ್ನ ದುಡುಕಿನಿಂದ ತನ್ನ ಅಮ್ಮ ಎರಡು ತಿಂಗಳ ಸಂಸಾರವನ್ನು ಮಾಡುವ ಖರ್ಚುನ್ನು ಕಳೆದ ಬಗ್ಗೆ ಅವನಲ್ಲಿ ಚಿಂತೆ ಪುನಃ ಮುಂದುವರೆಯುತ್ತದೆ. ಎರಡು ಅತೃಪ್ತ ಮನಸ್ಸಿನ ಭಾವನೆಗಳು ಹೇಗೆ ಅನಾವರಣಗೊಂಡಿದೆ ಎಂಬುದನ್ನು ಕಥೆಗಾರರು ಈ ಕಥೆಯ ಮೂಲಕ ಕಟ್ಟಿಕೊಟ್ಟಿದ್ದಾರೆ.

ಅನಂತಮೂರ್ತಿಯವರು ವಿದ್ಯಾಭ್ಯಾಸ, ವೃತ್ತಿ, ಪ್ರವಾಸ, ಹವ್ಯಾಸಗಾರನಾಗುವ ಮೂಲಕ ವಿದೇಶಗಳನ್ನು ಸುತ್ತಿದ್ದಾರೆ. ಹಾಗೆಯೇ ಅಲ್ಲಿನ ಜನಜೀವನವನ್ನು, ಕಥೆಯ ಮೂಲಕ ಹೇಳಿದ್ದಾರೆ. ಇವರ ಬಹುಪಾಲು ಕಥೆಗಳಲ್ಲಿ ತಾವೇ ನಿರೂಪಕರಾಗಿ ಕಥೆಯನ್ನು ಮುಂದುವರಿಸುತ್ತಾರೆ. ಇಂಥ ಕಥೆಗಳಲ್ಲಿ 'ಆಕ್ರಮಣ'ವು ಒಂದಾಗಿದೆ.

'ಆಕ್ರಮಣ' ಕಥೆಯು, ಮೂರು ಪಾತ್ರಗಳ ಮೂಲಕ ಮುಂದುವರೆಯುತ್ತದೆ. ಭಾರತೀಯನಾದ ನಿರೂಪಕ, ಇಂಗ್ಲೆಂಡ್‌ನ ದಂಪತಿಗಳಾದ ಟಾಮ್ ಮತ್ತು ಶೀಲಾ. ಶೀಲಾ ಮೂಲತಃ ಐರ್ಲೆಂಡ್‌ನವಳು. ಮೂರು ಜನ ಒಂದು ಬಾರಿನಲ್ಲಿ ಸೇರಿದಾಗ ಕಥೆಯೂ ಮುಂದುವರೆಯುತ್ತದೆ. ಗಂಡ ಹೆಂಡತಿಯರ ನಡುವೆ ಆರೋಪ ಪ್ರತ್ಯಾರೋಪವಿರುತ್ತದೆ. ಆದರೆ ಒಬ್ಬರ ಗೈರು ಹಾಜರಿಯಲ್ಲಿ ಮತ್ತೊಬ್ಬರು ಅಭಿಮಾನದ ಮಾತುಗಳನ್ನು ಆಡುವ ಸಂದರ್ಭವನ್ನು ನಿರೂಪಕ ತಿಳಿಯುತ್ತಾನೆ. ಟಾಮ್ ಹೆವಿ ಎಲೆಕ್ಟ್ರಿಕಲ್ ಇಂಜಿನಿಯರ್ ಆಗಿರುತ್ತಾನೆ. ಆದರೆ ಇಮ್ಯಾಜಿನೇಶನ್ ಇಲ್ಲವೆಂದು ಹೆಂಡತಿ ಶೀಲಾ ಟಾಮ್‌ನನ್ನು ನಿಂದಿಸುತ್ತಾಳೆ. ಆದರೆ ನಿರೂಪಕನು ಇಬ್ಬರನ್ನು ಕುರಿತು 'ಹೌದು ನೀನು ಐರಿಷ್ ಕಾವ್ಯ, ಅವನು ಬ್ರಿಟಿಷ್ ಗದ್ಯ' ಎನ್ನುತ್ತಾನೆ. ಆದರೂ ಶೀಲಾ ನಿರೂಪಕನ ಜೊತೆ ನೀವು ನಮ್ಮ ಐರಿಷ್ ಜನರಿದ್ದಂತೆ ಎಂದು ಹೇಳುತ್ತಾಳೆ. ಗಂಡ ಹೆಂಡತಿಯರ ನಡುವೆ ಮಾತುಗಳು ಮುಂದುವರೆಯುತ್ತದೆಯಾದರೂ ಮಧ್ಯೆ ನಿರೂಪಕನ ದೇಶವಾದ ಭಾರತವನ್ನು ಕುರಿತು ಹೇಳಲಾರಂಭಿಸುತ್ತಾರೆ. ಶೀಲಾಳು " ಭಾರತೀಯರಿಗೆ ಇಮ್ಯಾಜಿನೇಶನ್ ಇದೆ. ನಮ್ಮ ಹಾಗೇ ನೀವು ಸ್ನೇಹಪರರು, ಚೆನ್ನಾಗಿ ಮಾತಾಡ್ತೀರಿ. ಬಟ್ ಐರಿಷ್ ಜನರಿಗೆ ಇಂಗ್ಲಿಷ್ ಬರಲ್ಲ ಅನ್ನೋ ಈ ಬ್ರಿಟಿಷ್ ಜನ ಮಾತಾಡೋದನ್ನ ನೀನು ಕೇಳಬೇಕು. ಮಾತಾಡೋಕೆ ಏನಾದರೂ ಇದ್ರೆ ತಾನೆ ಇವರಿಗೆ ಭಾಷೆ ಬರೋದು?"[೩೮] ಎನ್ನುತ್ತಾಳೆ.

ಒಂದು ದೇಶದ ಶ್ರೀಮಂತಿಕೆ ಸಂಸ್ಕೃತಿಯು ಅಲ್ಲಿನ ಭಾಷೆಯಲ್ಲಿ ಅಡಗಿರುತ್ತದೆ ಎಂಬುದಕ್ಕೆ ಐರಿಷ್ ಮತ್ತು ಇಂಗ್ಲೆಂಡಿನ ಒಂದೇ ಭಾಷೆಯ ವಿಭಿನ್ನ ಬಳಕೆಯನ್ನು

ಕಥೆಗಾರರು 'ಆಕ್ರಮಣ' ಕಥೆಯಲ್ಲಿ ತಂದಿದ್ದಾರೆ. ಮುಂದುವರೆದಂತೆ ಎಲ್ಲಾ ದೇಶಗಳಲ್ಲೂ ಹೆಂಡತಿಯ ಕಲ್ಪನೆ ಇದ್ದೇ ಇರುತ್ತದೆ. ಗಂಡಂದಿರಿಗೆ ಅವರವರ ಹೆಂಡತಿಯರ ಬಗ್ಗೆ ಹೆಮ್ಮೆ ಇದ್ದೇ ಇರುತ್ತದೆ. ಇದು ಜಗತ್ತಿನ ಎಲ್ಲಾ ರಾಷ್ಟ್ರಗಳ ಸಹಜವಾದ ನಡವಳಿಕೆಯಾಗಿದೆ.

ಟಾಮ್ ಮುಂದುವರೆದ ದೇಶದ ಪ್ರತಿನಿಧಿಯಾದರೂ ನಿರೂಪಕನ ಬಳಿ ತನ್ನ ಹೆಂಡತಿಯ ಬಗ್ಗೆ ಅಭಿಮಾನದ ಮಾತುಗಳನ್ನೆ ಹೇಳುತ್ತಾನೆ. "ಶೀಲ ನೋಡಲು ಈಗಲೂ ಎಷ್ಟು ಚೆನ್ನಾಗಿದ್ದಾಳೆ ಅಲ್ವ? ನಾಲ್ಕು ಜನ ಸುಂದರ ಯುವಕರನ್ನು ತಿರಸ್ಕರಿಸಿ ನನ್ನನ್ನು ಅವಳು ಮದುವೆಯಾದಳು. ಇಂಗ್ಲಿಷ್ ಹುಡುಗಿಯರಂತಲ್ಲ. ಈ ಐರಿಷ್ ಹುಡುಗಿಗೆ ನಿಜವಾದ ಟೇಸ್ಟ್ ಇದೆ. ಸಂಗೀತ, ಕಾವ್ಯ ಎಲ್ಲದರಲ್ಲೂ ಫಸ್ಟ್‌ಕ್ಲಾಸ್ ಟೇಸ್ಟ್"[೬೯] ಎಂದು ಹೇಳುತ್ತಾ ತನ್ನ ಹೆಂಡತಿಯ ಬಗ್ಗೆ ಹೆಮ್ಮೆ ಪಡುತ್ತಾನೆ. ಟಾಮ್‌ನ ಹೇಳಿಕೆಯಲ್ಲಿ ತನ್ನ ದೇಶದ ಹುಡುಗಿಯರಿಗೆ ಐರಿಷ್ ದೇಶದ ಹೆಣ್ಣುಗಳ ರೀತಿಯಲ್ಲಿ ಗೌರವ ಕಾಣುವುದಿಲ್ಲ. ಜೊತೆಗೆ ಸಹಜವಾಗಿ ಹೆಂಡತಿಯ ಪ್ರೀತಿ ಕಾಣುತ್ತದೆ.

ಶೀಲಾಳಲ್ಲಿ ಗಂಡನ ಬಗ್ಗೆ ಅಭಿಮಾನವಿರುತ್ತದೆ. ಟಾಮ್ ತುಂಬ ಜಾಣನೆಂದು, ಮಕ್ಕಳೆಂದರೆ ಅವನಿಗೆ ಆಸೆಯೆಂದು, ಕೆಲಸದಲ್ಲಿ ಹೆಚ್ಚಿನ ಸಂಬಳದ ಇಂಜಿನಿಯರ್ ಎಂದು ಹೇಳುತ್ತಾಳೆ. ದೇಶಗಳು ಬೇರೆಯಾದರೂ ಪ್ರೀತಿ ಮಾತ್ರ ಇಬ್ಬರಲ್ಲೂ ಇರುವುದನ್ನು ನಿರೂಪಕನು ಕಥೆಯುದ್ದಕ್ಕೂ ತಿಳಿಸುತ್ತಾನೆ. ನಿರೂಪಕನು ಕೂಡ ತನ್ನ ಬಗ್ಗೆ ಶೀಲಾಳ ಬಳಿ ಹೇಳುತ್ತಾನೆ. " ಹದಿನಾರು ವರ್ಷಗಳ ತನಕ ನಾನು ರೈಲು, ಎಲೆಕ್ಟ್ರಿಸಿಟಿ ಕಂಡಿರದಿದ್ದ ಹಳ್ಳಿಮುಕ್ಕ. ಉಪನಯನದ ಹಿಂದಿನ ದಿನ ತೊಡೆ ಕೊಯ್ದು ಕಪ್ಪೆ ತುಂಬುತ್ತಾರೆಂದು ಕೇಳಿ ನಾನು ತುಂಬ ಹೆದರಿದ್ದೆ. ಹುಡುಗನಾಗಿದ್ದಾಗ ಬಲು ಆಚಾರವಂತನಾಗಿದ್ದೆ. ಆಮೇಲೆ ಜನಿವಾರ ಕಿತ್ತೆಸೆದೆ. ಐರಿಷ್ ಕ್ಯಾಥೊಲಿಕರಾದ ನಿಮಗೆ ಇಂಥ ಅನುಭವ ಗೊತ್ತಾಗುತ್ತಲ್ಲವೆ? ಶತಮಾನಗಳ ಕಾಲ ಇಲ್ಲಿದ್ದರೂ ಬ್ರಿಟಿಷರು ಇಂಡಿಯಾವನ್ನ ತಿಳಿಯಲೇ ಇಲ್ಲ."[೭೦] ಎಂದು ನಿರೂಪಕನು ತನ್ನ ಪೂರ್ವ ಬದುಕಿನ ಬಗ್ಗೆ ಹೆಮ್ಮೆಯಿಂದ ಹೇಳುತ್ತಾನೆ.

'ಆಕ್ರಮಣ' ಕಥೆಯ ಮೂರು ಜನರು ಕೂಡ ತಮ್ಮ ವಿಚಾರಗಳನ್ನು ಹೇಳುತ್ತಾರೆ. ಈ ಮಧ್ಯೆ ಶೀಲಾಳು ನಿರೂಪಕನ ಬಳಿಯೇ "ಯುರೋಪನ್ನು ನೋಡಿರದ ಭಾರತೀಯರು ವಿದೇಶಿ ಹೆಣ್ಣುಗಳ ಸಲುಗೆಯನ್ನು ಅಪಾರ್ಥ ಮಾಡಿಕೊಳ್ಳುತ್ತಾರೆಂದು" ಹೇಳುತ್ತಾಳೆ. ಆದರೆ ಅವಳ ಹತ್ತಿರದ ಸ್ಪರ್ಶದಿಂದ ನಿರೂಪಕನು ರೋಮಾಂಚನಗೊಂಡು ಅವಳ ಸೊಂಟ ಬಳಸಿ ಕಣ್ಣು ಮುಚ್ಚಿ ಮೈಗೆ ಮೈ ಇನ್ನಷ್ಟು ಒತ್ತಿ ನಿಲ್ಲುತ್ತಾನೆ. ಸಹಜವಾದ ಕಾಮದ ಚಂಚಲತೆಯನ್ನು ವ್ಯಕ್ತಪಡಿಸುತ್ತಾನೆ. ನಿರೂಪಕನು ಯುರೋಪಿಗೆ ಹೋಗಿ ವಿದೇಶಿ ಹೆಣ್ಣುಗಳ ಸಲುಗೆಯ ಅನುಭವವನ್ನು ಹೊಂದಿರುವ ನಿರೂಪಕನು ಕೂಡ ಅದೇ ರೀತಿ ಯೋಚಿಸುತ್ತಾನೆ ಎಂಬುದಾದರೆ. ಯಾವ ದೇಶಕ್ಕೆ ಹೋದರೂ ವಯಸ್ಸಿನ

ಆಕರ್ಷಣೆಗೆ ಒಳಗಾಗುವ ವಿಚಾರದಲ್ಲಿ ಎಲ್ಲರೂ ಒಂದೇ ಎಂಬುದನ್ನು ಈ ಕಥೆಯಲ್ಲಿ ತಿಳಿಸಲಾಗಿದೆ. ಹಾಗೆಯೇ ವಿದೇಶಿ ನೆಲದಲ್ಲಿ ಆಧುನಿಕ ಕಲ್ಪನೆಯಲ್ಲಿ ಯೋಚಿಸುವ ದಂಪತಿಗಳು ಸಹಜವಾಗಿಯೇ ಪ್ರೀತಿ ಅಭಿಮಾನ ಒಬ್ಬರು ಮತ್ತೊಬ್ಬರ ನಡುವೆ ಹೊಂದಿರುತ್ತಾರೆ.

ವಿದೇಶದಲ್ಲಿ ಬದುಕನ್ನು ಕಟ್ಟಿಕೊಂಡಿರುವ ಭಾರತೀಯ ಮನಸ್ಸುಗಳ ಬೇರುಗಳು ತಾವು ಬೆಳೆದ ದೇಶದಲ್ಲಿಯೇ ಜೀವಂತವಾಗಿವೆಂಬುದನ್ನು ತಿಳಿಸುತ್ತಾ ಹೋಗುತ್ತಾರೆ. ಅಂಥ ಕಥೆಗಳಲ್ಲೊಂದು 'ರೂತ್ ಮತ್ತು ರಸುಲ್.' ಈ ಕಥೆಯು ಮೂರು ಅಂಶಗಳ ಸುತ್ತಾ ವಿವರಣೆಯನ್ನು ಹೆಣೆಯುತ್ತಲೇ ಹೋಗುತ್ತದೆ. ಒಂದು ಭಾರತದಂತಹ ಬಡದೇಶದಲ್ಲಿ ನೆಹರೂರವರ ಸಮಾಜವಾದಿ ಚಿಂತನೆಯ ಅಗತ್ಯತೆ ಇದೆಯೇ ಹೊರತು ಅದಕ್ಕೆ ಸಂಪೂರ್ಣ ಇಂಗ್ಲೆಂಡ್ ದೇಶದಂತಹ ಬಂಡವಾಳಶಾಹಿ ನೀತಿ ಅಥವಾ ಚೈನಾ ದೇಶದಂತಹ ಕ್ರಾಂತಿಕಾರಿ ಕಮ್ಯುನಿಸ್ಟ್ ಚಿಂತನೆಗಳು ಸಾಧ್ಯವಿಲ್ಲ. ಎರಡನೆಯದು ಬದುಕಿನ ಕ್ರಮಗಳು ಇಂಗ್ಲೆಂಡ್‌ಗಿಂತ ಭಾರತದ ಬದುಕು ವಿಭಿನ್ನ ನೆಲೆಯುಳ್ಳವು. ಮೂರನೆಯದು ದೇಶ ಯಾವುದಾದರೇನೂ ಪ್ರೀತಿ – ದೈಹಿಕ ಕಾಮನೆಗಳೆಲ್ಲವೂ ಒಂದೇ ಎಂದು ಹೇಳುವ ಪಾತ್ರಗಳು.

ರೂತ್‌ಳು ತಾತನೊಡನೆ ಜರ್ಮನಿಯಿಂದ ಇಂಗ್ಲೆಂಡಿಗೆ ಬಂದವಳು. ಇವಳು ದಿನೇಶ್‌ನನ್ನು ಇಷ್ಟಪಟ್ಟು ಭಾರತದಲ್ಲಿ ಮದುವೆಯಾಗಲು ಬಯಸಿರುತ್ತಾಳೆ. ಆದರೆ ಚೈನಾದ ಕಮ್ಯೂನಿಸ್ಟ್ ಚಿಂತನೆಯ ರೀತಿಯಲ್ಲಿ ಭಾರತದಲ್ಲಿ ಇರಬೇಕೆಂದು ಯೋಚಿಸಿರುತ್ತಾಳೆ. ದಿನೇಶ್‌ನು ಪಂಜಾಬಿನ ಜಮ್ದೀನ್ದಾರರ ಕುಟುಂಬದವನು. ಈತನು ಇಂಗ್ಲೆಂಡ್‌ನಲ್ಲಿಯೇ ರೂತ್‌ಳನ್ನು ಮದುವೆಯಾಗಲು ಬಯಸಿರುತ್ತಾನೆ. ಆತನಿಗೆ ಭಾರತದಲ್ಲಿ ಮದುವೆಯಾಗಲು ಭಯ. ಅಂತಿಮವಾಗಿ ಇಬ್ಬರಿಗೂ ಮದುವೆಯೇ ಆಗುವುದಿಲ್ಲ.

ಕಥೆಯ ಮತ್ತೊಂದು ಪಾತ್ರವೇ ರಸುಲ್. ಪೂರ್ವ ಬಂಗಾಳದಿಂದ ಮೂವತ್ತು ವರ್ಷಗಳ ಹಿಂದೆಯೇ ಇಂಗ್ಲೆಂಡಿಗೆ ಬಂದಿರುತ್ತಾನೆ. ಅವನು ಐವತ್ತು ವರ್ಷದ ಮುದುಕ. ಅವನು ಯೌವ್ವನದಲ್ಲಿ ಸಾಕಷ್ಟು ದೈಹಿಕ ಕಾಮನೆಗಳನ್ನು ಈಡೇರಿಸಿಕೊಂಡಿರುತ್ತಾನೆ. ಸಾಯಲು ಹೋದ ಹುಡುಗಿಯನ್ನು ರಕ್ಷಣೆ ಮಾಡುವ ನೆಪದಲ್ಲಿ ಅವಳ ಸಹವಾಸ ಮಾಡಿದ್ದು, ಕಲ್ಕತ್ತದ ಕಲೆಕ್ಟರ್ ಮಗಳ ಡ್ರೆಸ್ಸನ್ನು ಸರಿಪಡಿಸಲು ಹೋದಾಗ ಅವಳ ಸೌಂದರ್ಯವನ್ನು ಸವಿದದ್ದು, ಡೇನಿಷ್ ದೇಶದ ಜೇನ್‌ಳ ಜೊತೆ ಕಾಲ ಕಳೆದದ್ದು, ಹಾಗೆಯೇ ರೂತ್‌ಳನ್ನು ಕೂಡ ಆಸೆ ಪಟ್ಟಿದ್ದರೂ ಅವಳ ಜೊತೆ ತನ್ನ ದೈಹಿಕ ಬಯಕೆ ಈಡೇರಿಸಿಕೊಳ್ಳಲಿಲ್ಲ. ಇವನು, ಆಗಾಗ್ಗೆ ನೆಹರೂ–ಜಿನ್ನಾರ ಚಿಂತನೆಗಳ ಬಗ್ಗೆ ಮಾತನಾಡುವ ವ್ಯಕ್ತಿಯಾಗಿ ಕಾಣುತ್ತಾನೆ.

ಅನಂತಮೂರ್ತಿಯವರ ಕಥೆಗಳಲ್ಲಿ ಧರ್ಮಗಳ ಪ್ರಧಾನ ಸಮಸ್ಯೆಗಳು ಕಾಣುವುದಿಲ್ಲ. ಆದರೆ ಭಾರತ ಹಾಗೂ ಪಾಕಿಸ್ತಾನ ವಿಷಯದಲ್ಲಿ ಸಮಸ್ಯೆಯನ್ನು ತೋರಿಸುತ್ತಾರೆ. 'ರೂತ್ ಮತ್ತು ರಸುಲ್' ಕಥೆಯಲ್ಲಿ ಬರುವ ರೂತ್, ರಸುಲ್, ಜೆನ್ ಮತ್ತು ಈಕೆಯ ಪ್ರಿಯಕರ ರಿಚರ್ಡ್, ದಿನೇಶ್ ಪಾತ್ರಗಳೆಲ್ಲವೂ ಕ್ರಿಶ್ಚಿಯನ್, ಮುಸ್ಲಿಂ, ಹಿಂದೂ ಧರ್ಮದವರಾಗಿದ್ದರೂ ಕೂಡ ಧರ್ಮಗಳ ವಿಷಯದಲ್ಲಿ ತಿಕ್ಕಾಟವೇನು ಕಾಣುವುದಿಲ್ಲ. ಈ ಕಥೆಯಲ್ಲಿ ಸಮಾಜವಾದಿ–ಬಂಡವಾಳ–ಕಮ್ಯುನಿಷ್ಟ್ ಚಿಂತನೆಗಳಿಗೆ ಹೆಚ್ಚಿನ ಒತ್ತನ್ನು ಕೊಡುವ ಕಥೆಯಾಗಿ ಹೊರಹೊಮ್ಮಿದೆ. ಈ ಕಥೆಯಲ್ಲಿ ಬರುವ ಖಾನ್‌ನು ಸಾಮ್ರಾಜ್ಯಶಾಹಿಯ ಬಗ್ಗೆ ತನ್ನದೇ ಆದ ವ್ಯಾಖ್ಯಾನ ನೀಡುತ್ತಾನೆ. "ಚೈನಾ ಹೇಳೋದನ್ನು ನಾನು ಒಪ್ತೇನೆ. ರೂತ್ ಎಂದರೆ ಅದಕ್ಕೇ ನನಗೆ ಪ್ರೀತಿ. ಬ್ರಿಟಿಷರು ಮುಸ್ಲಿಮರ ಕೈಯಿಂದ ಅಧಿಕಾರ ಕಿತ್ತುಕೊಂಡರು. ನಮ್ಮನ್ನ ತುಳಿದರು. ಇಲ್ದೆ ಇದ್ರೆ ಇಂಡಿಯಾದ ಕಥೇನೇ ಬೇರೆಯಾಗಿರ್ತಿತ್ತು."[೬೧] ಎನ್ನುತ್ತಾನೆ. ಇದಕ್ಕೆ ಭಾರತದ ಪ್ರತಿನಿಧಿಯಂತಿದ್ದ ದಿನೇಶ್ ಕೂಡ ಕೋಪದಿಂದ ಜಿನ್ನಾ ಬ್ರಿಟಿಷರ ಏಜೆಂಟು ಎಂದು ಜರಿಯುತ್ತಾನೆ. ಮುಂದುವರೆದ ಉತ್ತರವಾಗಿ ಖಾನ್‌ನು ಹಿಂದುಗಳಿಗಿಂತ ಮುಸ್ಲಿಮರು ಏನು ಕಡಿಮೆ ಇರಲಿಲ್ಲ. ತನ್ನ ತಂದೆ ಪಂಜಾಬಿನಲ್ಲಿ ದೊಡ್ಡ ಲಾಯರ್ ಆಗಿದ್ದ ಎನ್ನುತ್ತಾನೆ. ಇಬ್ಬರಿಗೂ ಜಗಳವೂ ಕೂಡ ಆಗುತ್ತದೆ. ಇಬ್ಬರೂ ಪಾಕಿಸ್ತಾನ ಮತ್ತು ಭಾರತದ ಪ್ರತಿನಿಧಿಗಳಂತೆ ತಮ್ಮ ದೇಶಗಳ ಬಗ್ಗೆ ಸಂತೋಷಕೂಟದಲ್ಲಿ ವಿವರಣೆ ಕೊಡುತ್ತಾ ಹೋಗುವ ರೀತಿ ಮಾತ್ರ ಭಿನ್ನವಾಗಿದೆ.

"ಅನಂತಮೂರ್ತಿಯವರ ಬದುಕಿನ ಸುತ್ತಮುತ್ತಲಿನ ಜನರ ಬದುಕೇ ಬಹು ಪಾಲು ಪಾತ್ರಗಳಾಗಿ ಬಂದಿವೆ. ಅಂಥ ಪಾತ್ರಗಳಲ್ಲಿ ಅಕ್ಕಯ್ಯ ಪಾತ್ರವೂ ಒಂದಾಗಿದೆ. ಅಕ್ಕಯ್ಯಳು ಅನಂತಮೂರ್ತಿಯವರ ತಾಯಿಯ ಅಕ್ಕ."[೬೨] ಈಕೆಯ ಬದುಕಿನ ಎಳೆಯನ್ನು 'ಅಕ್ಕಯ್ಯ' ಕಥೆಯಲ್ಲಿ ತಂದಿದ್ದಾರೆ. ಕಥೆಯಲ್ಲಿರುವ ಅಕ್ಕಯ್ಯಳು ಅನಂತಮೂರ್ತಿಯ ಬಾಲ್ಯ ಸ್ನೇಹಿತನಾದ ಶ್ರೀನಿವಾಸನ ಅಕ್ಕ. ಶ್ರೀನಿವಾಸನು ಫಿಲೆಡಲ್ಫಿಯಾದಲ್ಲಿ ಇಂಗ್ಲಿಷ್ ಪ್ರೊಫೆಸರ್. ಆದರೆ ಶ್ರೀನಿವಾಸನ ನಿಜವಾದ ಹೆಸರೇ ಬೇರೆ ಎಂದು ಕಥೆಯಲ್ಲಿನ ನಿರೂಪಕನಾದ ಅನಂತಮೂರ್ತಿಯವರು ಕಥೆಯ ಆರಂಭದಲ್ಲಿಯೇ ತಿಳಿಸುತ್ತಾರೆ.

ಅಕ್ಕಯ್ಯಳು ತೀರ್ಥಹಳ್ಳಿಯಲ್ಲಿಯೇ ಇದ್ದವಳು. ಶ್ರೀನಿವಾಸನ ಪರವಾಗಿ ನಿಂತವಳು. ಅವನ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದವಳು. ಆಕೆಗೆ ಬಾಲ್ಯದಲ್ಲಿಯೇ ಮದುವೆ ಮಾಡಿರುತ್ತಾರೆ. ಆದರೆ ಅಕ್ಕಯ್ಯಳು ಗಂಡನ ಜೊತೆ ಇರದೆ ತವರು ಮನೆಯನ್ನು ಸೇರಿರುತ್ತಾಳೆ. ದನಗಳೆಂದರೆ ಬಲು ಪ್ರೀತಿ. ಮನೆಯಲ್ಲಿ ಇರುವ ಹಿಂದಿನ ಎಲ್ಲಾ ದನಗಳ ಬಗ್ಗೆ, ಅವುಗಳ ಬಣ್ಣ ಆಕಾರಗಳ ಬಗೆ ಹೇಳಬಲ್ಲವಳಾಗಿರುತ್ತಾಳೆ. ಒಂದು ರೀತಿಯಲ್ಲಿ ಆಕೆಯೂ ಕೂಡ ದನದ ಮನಸ್ಸಿನವಳಾಗಿರುತ್ತಾಳೆ. ಅಕ್ಕಯ್ಯಳ ತಂದೆ ಶ್ರೀಮಂತ

ಜಮೀನುದಾರರು. ಹನ್ನೆರಡು ಮಕ್ಕಳ ತಂದೆಯಾಗಿರುತ್ತಾನೆ. ತಾಯಿ ಸತ್ತ ನಂತರ ಎಲ್ಲರಿಗೂ ಅಕ್ಕಯ್ಯನಾಗಿಬಿಟ್ಟವಳೇ ಮೊದಲನೆಯ ಮಗಳು. ಶ್ರೀನಿವಾಸನೇ ಕೊನೆಯವನು. ಅಕ್ಕಯ್ಯಳಿಗೆ ಶ್ರೀನಿವಾಸನನ್ನು ಕಂಡರೆ ಪ್ರೀತಿ. ಒಮ್ಮೆಯಂತೂ ಆತನು ಬೀಡಿ ಸೇದಿ ಎಸೆದಾಗ ಹುಲ್ಲಿನ ಗೊಣಬೆಗೆ ಬೆಂಕಿ ಬೀಳುತ್ತದೆ. ಅದು ಪಕ್ಕದ ಗುಡಿಸಲನ್ನು ಸುಡುತ್ತದೆ. ಆ ಕಾರಣಕ್ಕಾಗಿ ಅಕ್ಕಯ್ಯಳು ತನ್ನ ಎರಡು ಬಳೆಗಳನ್ನು ಗುಡಿಸಲಿಗೆ ಪರಿಹಾರವಾಗಿ ನೀಡಿ ಶ್ರೀನಿವಾಸನನ್ನು ರಕ್ಷಿಸುತ್ತಾಳೆ. ಅಕ್ಕಯ್ಯಳು ಶ್ರೀನಿವಾಸನ 'ತಾತ್ವಿಕ ಅರಿವಿನ ಸ್ಫೋಟಕ್ಕೆ' ಕಾರಣಳಾಗಿರುತ್ತಾಳೆ. ತನ್ನನ್ನು ಶ್ರೀನಿವಾಸನೇ ಒಬ್ಬ ಬರಹಗಾರನಾಗಿ ಮಾಡಿದವನು ಎಂದು ಅನಂತಮೂರ್ತಿಯವರು ಹೇಳುತ್ತಾರೆ. ಅವನಲ್ಲಿ " ಹಿಂದೂ ಸಂಸ್ಕೃತಿಯ ಗೊಡ್ಡು ನಂಬಿಕೆಗಳ ಬಗ್ಗೆ ಅವನ ನಿಷ್ಠುರವಾದ, ಕೋಪಗ್ರಸ್ತವಾದ ನಿಲುವಿನಿಂದಲೇ ನಾನು ಆ ದಿನಗಳಲ್ಲಿ ನನ್ನ ಸ್ಫೂರ್ತಿಯನ್ನು ಪಡೆಯುತ್ತಿದ್ದುದು."[೪೩] ಎನ್ನುತ್ತಾರೆ. ಮುಂದೆ ಬಂಡಾಯ ಮನಸ್ಥಿತಿಯುವನಾಗಿ ಶ್ರೀನಿವಾಸನು ಬೆಳೆಯುತ್ತಾನೆ. ಹಾಗೆಯೇ ಮಾಂಸಾಹಾರಿಯೂ ಕೂಡ ಆಗುತ್ತಾನೆ. ಒಬ್ಬ ಪಂಜಾಬಿ ವೈದ್ಯಳನ್ನು ಪ್ರೇಮ ವಿವಾಹ ಆಗುತ್ತಾನೆ. ಹೆಚ್ಚಿನ ವಿದ್ಯಾಭ್ಯಾಸವಿಲ್ಲದ ಅವನ ಅಣ್ಣಂದಿರ ಪ್ರತಿಭಟನೆಯನ್ನು ಎದುರಿಸುತ್ತಾನೆ. ಸರಿ, ತಪ್ಪುಗಳನ್ನು ತಿಳಿಯದ ಅಕ್ಕಯ್ಯಳು ಅವನ ಪರವಾಗಿ ನಿಲ್ಲುತ್ತಾಳೆ. ಅಕ್ಕಯ್ಯನ ಜಗತ್ತು ದನಗಳು, ಕೌಲಿ, ನಂದಿ. ಹಾಗೆಯೇ ಅಕ್ಕಯ್ಯಳ ಜೊತೆಯಿದ್ದ ಪಿಳ್ಳ ಎಂಬುವವನು. ಈತನು ಹೊಲೆಯನಾದರೂ ಅಕ್ಕಯ್ಯನ ಪ್ರಕಾರ ಒಬ್ಬ ಸಾಧು. ಹಿಂದಿನ ಜನ್ಮದಲ್ಲಿ ಅಕ್ಕಯ್ಯನ ಗಂಡನ ತಮ್ಮನಾಗಿದ್ದನು. ಮೈದುನನೆಂದು ಭಾವಿಸಿರುತ್ತಾಳೆ. ಮುಂದೊಂದು ದಿನ ಆಕೆ ಸಾಯುತ್ತಾಳೆ.

ಅಕ್ಕಯ್ಯ ಮತ್ತು ಶ್ರೀನಿವಾಸ ಎಂಬ ಪಾತ್ರದ ಮೂಲಕ ತಾನು ಕೂಡ ಒಂದು ಭಾಗವಾಗಿ ಕಥೆ ಮುಂದುವರಿಸುತ್ತಾ ಹೋಗುವ ಅನಂತಮೂರ್ತಿಯು ಪಾಶ್ಚಾತ್ಯ ದೃಷ್ಟಿಕೋನದಿಂದ ಇಂಡಿಯಾದ ಬದುಕನ್ನು ನೋಡಬೇಡವೆಂದು ಶ್ರೀನಿವಾಸನಿಗೆ ಹೇಳುವ ಮನಸ್ಸಾಗಿದ್ದರೂ ಹೇಳಲಿಲ್ಲ. ಶ್ರೀನಿವಾಸನ ಬದುಕಿಗೆ ತಿರುವನ್ನು ನೀಡಿದವಳು ಅಕ್ಕಯ್ಯ. ತಾನು ಪಾಠ ಹೇಳಿಕೊಡಲು ಹೋದಾಗ ಪೆದ್ದು ಪೆದ್ದಾಗಿ ವರ್ತಿಸಿದ ಐರಿಷ್ ಹುಡುಗನಿಗೆ ಅಕ್ಕಯ್ಯಳನ್ನು ಹೋಲಿಸುವ ಸ್ಥಿತಿ ಕಾಣುತ್ತದೆ. ಪಾಶ್ಚಿಮಾತ್ಯರ ಕ್ಯಾಪಿಟಲಿಸ್ಟ್ ಎಫಿಶಿಯನ್ಸಿ ದೃಷ್ಟಿಯಿಂದ ನೋಡಿದಾಗ ಹುಡುಗ ಮತ್ತು ಅಕ್ಕಯ್ಯಳು ಒಂದೇ ಎಂದು ಯೋಚಿಸುವ ರೀತಿ ಉಂಟಾಗುತ್ತದೆ.

ಶ್ರೀನಿವಾಸ ಮತ್ತು ಆತನ ಹೆಂಡತಿ ಭಾರತೀಯರಾಗಿದ್ದು ಫಿಲಿಡೆಲ್ಫಿಯಾದಲ್ಲಿ ವೃತ್ತಿ ಬದುಕನ್ನು ಕಟ್ಟಿಕೊಂಡು ಅಲ್ಲಿಯೇ ಶಾಶ್ವತವಾಗಿ ನೆಲೆನಿಂತವರು. ಆದರೆ ಅವರ ಮಗಳು ಪಾಶ್ಚಾತ್ಯ ದೇಶದಲ್ಲಿ ಹುಟ್ಟಿಬೆಳೆದು ಭಾರತದ ಬದುಕಿನ ಬಗ್ಗೆ ದೂರವಾದವಳು. ಅಕ್ಕಯ್ಯಳು

ಭಾರತೀಯಳಾಗಿದ್ದು ತೀರ್ಥಹಳ್ಳಿಯಲ್ಲಿಯೇ ಬದುಕನ್ನು ರೂಪಿಸಿಕೊಂಡು ಅಂತಿಮವಾಗಿ ಅಲ್ಲಿಯೇ ಕೊನೆಯಾದವಳು. ಮೂರು ಪಾತ್ರಗಳು ಮೂರು ವಿಭಿನ್ನ ಬದುಕಿನ ದೃಷ್ಟಿಕೋನಗಳನ್ನ ಪರಿಚಯಿಸುತ್ತವೆ.

ಯುರೋಪ್ ರಾಷ್ಟ್ರಗಳಲ್ಲಿನ ಜೀವನಕ್ಕಿಂತ ಭಾರತದ ಜನಜೀವನ ಭಿನ್ನವಾದ ಪರಿಕಲ್ಪನೆಯಿಂದ ಕೂಡಿದ್ದಾಗಿದೆ. ಅನಂತಮೂರ್ತಿಯು ಎರಡು ದೇಶಗಳ ಚಿಂತನೆಗಳನ್ನು ಆಯಾಯ ದೇಶಗಳ ನೆಲೆಗಟ್ಟಿನಲ್ಲಿಯೇ ನಿಂತು ನೋಡಬೇಕು ಎಂಬ ಅಭಿಪ್ರಾಯವನ್ನು ಹೊಂದಿದ್ದಾರೆ. ಅವರ ಪಾಶ್ಚಾತ್ಯ ಕಲ್ಪನೆಯ ಈ ಎಲ್ಲಾ ಕಥೆಗಳಲ್ಲಿ, ಕುಡಿತ, ಸಿಗರೇಟ್ ಸೇವನೆ ಸಾಮಾನ್ಯವಾದ ವಿಷಯವಾಗಿ ಕಂಡುಬರುತ್ತದೆ. ಹಾಗೆಯೇ ದೈಹಿಕ ಬೇಡಿಕೆ ಸಹಜವಾಗಿದ್ದರೂ ಕೂಡ ಅಲ್ಲಿ ತಮ್ಮದೇ ಆದ ವ್ಯಾಪ್ತಿ ಇರುತ್ತದೆಂಬುದನ್ನು ಆಯಾ ದೇಶಗಳ ಹಿನ್ನೆಲೆಯಲ್ಲಿ ನೋಡಬೇಕಾಗುತ್ತದೆ. 'ಕ್ಲಿಪ್ ಜಾಯಿಂಟ್ ಕಥೆಯ ಕೇಶವನು ಭಾರತೀಯನಾಗಿದ್ದು, ತನ್ನ ಜವಾಬ್ದಾರಿ ಹಾಗೂ ವಯಸ್ಸಿನ ಸಹಜ ದೈಹಿಕ ಹತಾಶೆಯನ್ನು ಅಭಿವ್ಯಕ್ತ ಪಡಿಸುವ ಪಾತ್ರವಾಗುತ್ತಾನೆ. ಕಥೆಗಾರನು 'ಆಕ್ರಮಣ'ದ ಕಥೆಯಲ್ಲಿ ಭಾರತೀಯ ಘನತೆಯನ್ನು ಪಾಶ್ಚಾತ್ಯರ ಪರಿಕಲ್ಪನೆಯಲ್ಲಿ ತೋರಿಸಿಕೊಡುತ್ತಾನೆ. ಹಾಗೆಯೇ ತನ್ನ ಸಹಜವಾದ ಕಾಮನೆಯನ್ನು ಶೀಲಾಳನ್ನು ಸ್ಪರ್ಶಿಸುತ್ತಾ ತನ್ನ ಉತ್ಕಟವಾದ ದೇಹದ ಬಯಕೆಯನ್ನು ಕನಿಷ್ಠ ಮಟ್ಟದಲ್ಲಾದರೂ ತೀರಿಸಿಕೊಳ್ಳುವ ಭಾರತೀಯನಾಗುತ್ತಾನೆ. ಕ್ಲಿಪ್ ಜಾಯಿಂಟ್‌ನ ಸ್ಟೂಅರ್ಟ್‌ನು, 'ಆಕ್ರಮಣ' ಕಥೆಯ ಟಾಮ್ ಮತ್ತು ಶೀಲಾರ ಅಭಿಪ್ರಾಯದಲ್ಲಿ ಭಾರತೀಯತೆ ವಿಶೇಷವಾದ ಸ್ಥಾನಮಾನ ಪಡೆದಿದೆ. ಆದರೆ ಅದೇ ಕಥೆಗಳಲ್ಲಿ ಬರುವ ಕೇಶವನು ಮತ್ತು ನಿರೂಪಕನ ದೃಷ್ಟಿಯಲ್ಲಿ ಇಲ್ಲಿನ ಸಮಾಜದಲ್ಲಿನ ಮನೆಯಲ್ಲಿನ ತಂಗಿಯರ, ತಮ್ಮ, ಸಂಸಾರದ ಜವಾಬ್ದಾರಿಗಳು, ಉಪನಯನದಂತಹ ಆಚರಣೆಗಳು ಸಹಜವಾದ ಬದುಕಿನ ಬೆಳವಣಿಗೆಗಳಿಗೆ ತಡೆಯೆಂದೇ ಭಾವಿಸುತ್ತಾರೆ. ಅಕ್ಕಯ್ಯಳು ನಾಗರಿಕ ಸಮಾಜದ ಮುಗ್ಧತೆಯ ಪ್ರತಿನಿಧಿಯಾಗಿ ಕಂಡರೆ ಶ್ರೀನಿವಾಸನು ಭಾರತದಲ್ಲಿಯೇ ಹುಟ್ಟಿ ಬೆಳೆದರೂ ಮುಂದುವರೆದ ದೇಶದಲ್ಲಿ ನಿಂತು ಸಹಜವಾಗಿ ತನ್ನ ದೇಶದ ಪರಿಕಲ್ಪನೆಯಿಂದ ದೂರವಾಗಿರುವುದನ್ನು ನೋಡಬಹುದು.

ಅನಂತಮೂರ್ತಿಯವರ ಭಾರತ ಹಾಗೂ ಪಾಶ್ಚಿಮಾತ್ಯ ಪ್ರಧಾನತೆಯನ್ನು ಹೊಂದಿರುವ ಕಥೆಗಳಲ್ಲಿ ಹಿಂದೂ-ಮುಸ್ಲಿಂ-ಕ್ರಿಶ್ಚಿಯನ್ ಧರ್ಮಗಳ ಸಂಸ್ಕೃತಿಗಳು ಮುಖಾಮುಖಿಯಾಗಿ ಘರ್ಷಣೆಯುಂಟಾದರೂ ಅವುಗಳು ತಾತ್ವಿಕ ವಿಚಾರಗಳನ್ನಷ್ಟೆ ತಿಳಿಸುತ್ತವೆಯೇ ಹೊರತು ಕೋಮು ವಾದವನಲ್ಲ. ಅದು ಪ್ರಧಾನವಾಗಿ ಭಾರತದಂತಹ ದೇಶದಲ್ಲಿ ಮತೀಯವಾಗಿ ಯೋಚನೆಯನ್ನು ಮಾಡಿದವರಲ್ಲಿ ಮಾತ್ರ ಕೋಮುವಾದ ಉಂಟಾಗುತ್ತದೆ ಎಂಬ ಅಪವಾದವಿದೆ.

ಒಟ್ಟಾರೆಯಾಗಿ ತೇಜಸ್ವಿ, ಲಂಕೇಶ ಹಾಗೂ ಅನಂತಮೂರ್ತಿಯವರ ಕಥೆಗಳಲ್ಲಿ ಗ್ರಾಮೀಣ–ನಗರದ ಜೀವನ ಕ್ರಮಗಳು, ಭಾರತೀಯ ಮತ್ತು ಪಾಶ್ಚಮಾತ್ಯ ಸಂಸ್ಕೃತಿಗಳಲ್ಲಿ ಜನಜೀವನ ಕ್ರಮಗಳಲ್ಲಿ ಬರುವ ಧರ್ಮ, ಆಚಾರ–ವಿಚಾರಗಳು, ಭಾಷೆ, ಸಾಂಸ್ಕೃತಿಕ ಯೋಚನೆಯ ರೀತಿಯನ್ನು ಈ ಅಧ್ಯಯನ ಒಳಗೊಂಡಿದೆ.

* * * *

**ಕೊನೆ ಟಿಪ್ಪಣಿ:**

೧. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ–೧೦, ೨೦೦೧.
೨. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ–೧೨, ೨೦೦೧.
೪. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ–೪, ೨೦೧೬.
೫. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ–೧೯, ೨೦೧೬.
೬. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ–೩೬, ೨೦೧೬.
೭. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ–೫೬,೫೭, ೨೦೧೬.
೮. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ–೭೧, ೨೦೧೬.
೯. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ–೮೯, ೨೦೧೬.
೧೦. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ–೧೧೯, ೨೦೧೬.
೧೧. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ–೬೭, ೨೦೧೫
೧೨. ಪೂರ್ಣಚಂದ್ರ ತೇಜಸ್ವಿ, ಪಾಕ ಕ್ರಾಂತಿ, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ–೧೦೦, ೨೦೧೬.
೧೩. ಪೂರ್ಣಚಂದ್ರ ತೇಜಸ್ವಿ, ಪಾಕ ಕ್ರಾಂತಿ, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ–೭೩, ೨೦೧೬.
೧೪. ಲಂಕೇಶ್ ಪಿ. ನಾನಲ್ಲ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ–೩, ೨೦೧೧.
೧೫. ಅನಂತಮೂರ್ತಿ ಯು.ಆರ್, ಋಜುವಾತು, ಅಂಕಿತ ಪ್ರಕಾಶನ, ಪುಟ–೧೭೬, ೨೦೦೭.
೧೬. ಊರು ಕಂಡಂತೆ ಅನಂತ....ಮೂರ್ತಿ., ಸೂರ್ಯ ಕುದುರೆ ಪ್ರಕಾಶನ, ಪುಟ–೨೨, ೨೦೧೬.
೧೭. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ–೨೪, ೨೦೦೧.
೧೮. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ–೩೮, ೨೦೦೧.
೧೯. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ–೯೪, ೨೦೦೧.
೨೦. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ–೯೫, ೨೦೦೧.

೨೧. ಅನಂತಮೂರ್ತಿಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೫೪,೨೦೦೧.
೨೨. ಶ್ರೀಮತಿ ಎಚ್.ಎಸ್. (ಅನು), ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಪುಟ-೧೬೨. ೨೦೦೯.
೨೩. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೨೬೨, ೨೦೦೧.
೨೪. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೩೩೨, ೨೦೦೧.
೨೫. ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಪುಟ-೪೯, ೨೦೦೮.
೨೬. ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಹೊಸ ವಿಚಾರಗಳು, ಪುಸ್ತಕ ಪ್ರಕಾಶನ, ಪುಟ ೬೨೬,೨೦೧೨.
೨೭ ಅಶೋಕ ಟಿ.ಪಿ., ತೇಜಸ್ವಿ ಕಥನ, ಅಕ್ಷರ ಪ್ರಕಾಶನ, ಪುಟ-೬೩, ೨೦೧೫.
೨೮. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ- ೯೦, ೨೦೧೫.
೨೯. ಪೂರ್ಣಚಂದ್ರ ತೇಜಸ್ವಿ, ಕಿರಗೂರಿನ ಗಯ್ಯಾಳಿಗಳು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೭೬, ೨೦೦೫.
೩೦. ಲಂಕೇಶ್ ಪಿ. ಮಂಜು ಕವಿದ ಸಂಜೆ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೭, ೨೦೧೫.
೩೧. ಲಂಕೇಶ್ ಪಿ. ನಾನಲ್ಲ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೫೪, ೨೦೧೧.
೩೨. ಲಂಕೇಶ್ ಪಿ. ನಾನಲ್ಲ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೪೬, ೨೦೧೧.
೩೩. ಅನಂತಮೂರ್ತಿ ಯು.ಆರ್, ಮಾತು ಸೋತ ಭಾರತ, ಅಭಿನವ ಪ್ರಕಾಶನ, ಪುಟ-೨೨, ೨೦೦೭.
೩೪. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೯೭, ೨೦೦೧.
೩೫. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೨೦೮, ೨೦೦೧.
೩೬. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೨೧೨, ೨೦೦೧.
೩೭. ಅನಂತಮೂರ್ತಿ ಯು.ಆರ್, ಋಜುವಾತು, ಅಂಕಿತ ಪ್ರಕಾಶನ, ಪುಟ-೧೪೯, ೨೦೦೭.
೩೮. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೨೭೧, ೨೦೦೧.
೩೯. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೨೭೩, ೨೦೦೧.
೪೦. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೨೭೪, ೨೦೦೧.
೪೧. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೨೯೩, ೨೦೦೧.
೪೨. ತೇಜಶ್ರೀ ಜ.ನಾ., ಸುರಗಿ, (ಯು.ಆರ್. ಅನಂತಮೂರ್ತಿಯವರ ಆತ್ಮಕಥನ), ಅಕ್ಷರ ಪ್ರಕಾಶನ, ಪುಟ-೩೯, ೨೦೧೨.
೪೩. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೪೨೬, ೨೦೦೧.

* * * * * *

## ಅಧ್ಯಾಯ–೫

# ಸಮಾಜದಲ್ಲಿನ ವರ್ಗಾಧಾರಿತ ಸಂಬಂಧಗಳು

---

## ಅಧ್ಯಾಯ-೫

# ಸಮಾಜದಲ್ಲಿನ ವರ್ಗಾಧಾರಿತ ಸಂಬಂಧಗಳು

ದುಡಿಯುವ ವರ್ಗ ಮಾಲೀಕನ ಅಧೀನದಲ್ಲಿ ಬದುಕುವ ಸಂದರ್ಭಗಳು ಹೆಚ್ಚಾಗಿರುತ್ತವೆ. ಉತ್ತಮ ಬದುಕಿನ ಅಸ್ತಿತ್ವಕ್ಕಾಗಿ ದುಡಿಮೆ ಅನಿವಾರ್ಯ. ಜಾತಿ ಮತ್ತು ವರ್ಗಗಳ ಮೂಲಕ ಕೂಡಿದ ಬಹುಪಾಲು ದುಡಿಮೆಗಳು ನಿರ್ಧರಿತವಾದರೂ ಸಂಪೂರ್ಣವಾಗಿ ಸ್ವತಂತ್ರವಾಗಿಲ್ಲ.

ಮಾಲೀಕನ ಮತ್ತು ದುಡಿಯುವ ವರ್ಗದವರ ಸಂಬಂಧಗಳು ಉತ್ತಮವಾಗಿದ್ದರೆ ಬದುಕಿನ ಆರ್ಥಿಕ ಮತ್ತು ಸಾಮಾಜಿಕ ಅಸ್ತಿತ್ವಕ್ಕೆ ಧಕ್ಕೆ ಬರುವುದಿಲ್ಲ. ಅವಶ್ಯಕವಾಗಿ ಶ್ರಮಿಕ ವರ್ಗವು ಮೇಲ್ವರ್ಗವನ್ನು ಓಲೈಸುವ ಅನಿವಾರ್ಯತೆ ಇರುತ್ತದೆ. ಬದಲಾದ ಕಾಲಮಾನದಲ್ಲೂ ಕೂಡ  ವರ್ಗ ವ್ಯವಸ್ಥೆ, ಭಾರತದಂತಹ ದೇಶದಲ್ಲಿ ಇನ್ನೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಜಾತಿಯಿಂದ ಅಥವಾ ದುಡಿಮೆಯ ಒತ್ತಡದಿಂದ ತಮಗೆ ಆಗುತ್ತಿರುವ ಅನ್ಯಾಯಗಳ ವಿರುದ್ಧ ಹೋರಾಟ ನಡೆಸಬೇಕೆನ್ನುವ ವರ್ಗ ನಿರೀಕ್ಷಿತ ಮಟ್ಟದಲ್ಲಿ ಯಶಸ್ಸನ್ನು ಸಾಧಿಸಿಲ್ಲ. ಇಂತಹ ಹೋರಾಟವನ್ನು ಹತ್ತಿಕ್ಕುವ ಪ್ರಯತ್ನಗಳು ಹಿಂದಿನಿಂದಲೂ ನಡೆದು ಬಂದಿವೆ. ಸಮಾಜದಲ್ಲಿ ವರ್ಗಾಧಾರಿತ ಸಂಬಂಧಗಳು ಆಧುನಿಕತೆಯ ವಿಭಿನ್ನ ನೆಲೆಗಟ್ಟುಗಳಲ್ಲಿ ನಿಲ್ಲುವುದನ್ನು ಕಥೆಗಳ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ.

**೫.೧. ಅವಶ್ಯಕವಾಗುವ ವರ್ಗ ಸಂಬಂಧಗಳು.**

ಭಾರತೀಯ ಜನಜೀವನದಲ್ಲಿ 'ವರ್ಗಾಧಾರಿತ ಸಮಾಜ' ಅತಿ ಹೆಚ್ಚಿನ ಪ್ರಭಾವವನ್ನು ಬೀರಿದೆ. 'ವರ್ಗ' ಎಂದರೇನು ಎಂಬುದಕ್ಕೆ ಸಾಮಾನ್ಯವಾಗಿ ಸಮಾಜದ ಜಾತಿ ಪದ್ಧತಿಯಲ್ಲಿರುವ ಶ್ರೇಣಿಯಾಗಿದೆ. ಅರ್ಥಾತ್ ಮೇಲ್ವರ್ಗ, ಮಧ್ಯಮವರ್ಗ, ಕೆಳವರ್ಗವೆಂದು ಸಹಜವಾಗಿ ಕರೆಯುವ ಜಾತಿ ಪದ್ಧತಿಯನ್ನು ಹೊಂದಿದೆ. ಅದನ್ನು ಇನ್ನೂ ವಿಸ್ತೃತವಾಗಿ ಅರ್ಥೈಸುವುದಾದರೆ ಮುಂದುವರೆದ ಮೇಲ್ವರ್ಗದ ಜನಾಂಗ, ಹಿಂದುಳಿದ ಜನಾಂಗ, ದಲಿತ ವರ್ಗದ ಜನಾಂಗ.  ಭಾರತೀಯ ಸಮಾಜದ ಬೆಳವಣಿಗೆಯ ದೃಷ್ಟಿಯಲ್ಲಿ ಈ ರೀತಿಯ ಶ್ರೇಣಿಕೃತ ವ್ಯವಸ್ಥೆ  ಸೂಕ್ತವಾಗದಿದ್ದರೂ ಹಿಂದಿನಿಂದಲೂ ಇದರ ವಿಂಗಡಣೆ ಪ್ರಭಾವವನ್ನು  ಹೊಂದಿದ್ದು, ಇಂದಿಗೂ, ಮುಂದಿನ ಜನಾಂಗಕ್ಕೂ ಇದರ ಪ್ರಕ್ರಿಯೆ ಮುಂದುವರೆದಿದೆ. ನಗರ ಪ್ರದೇಶಕ್ಕಿಂತಲೂ ಹೆಚ್ಚಾಗಿ ಗ್ರಾಮೀಣ ಭಾಗದಲ್ಲಿ ಜೀವಂತಿಕೆಯನ್ನು ಹೊಂದಿದೆ. ಇದನ್ನು ಹೋಗಲಾಡಿಸುವಲ್ಲಿ ಸಾಹಿತ್ಯದ ಪಾತ್ರ ಮಹತ್ವದಾಗಿರುತ್ತದೆ.

ಜಯಲಕ್ಷ್ಮಿಯವರು ತಮ್ಮ 'ಜಾತ್ಯತೀತ ಸಂವೇದನೆಯ ನಿಜ ಸೃಜನೆ' ಎಂಬ ಲೇಖನದಲ್ಲಿ "ಹಳ್ಳಿಗಳಲ್ಲಿರುವ ಅಸಂಖ್ಯಾತ ಜನಸಾಮಾನ್ಯರು ಒಂದೆಡೆ ತಮಗಿಂತ ಮೇಲ್ವರ್ಗದವರಿಂದ, ಮತ್ತೊಂದೆಡೆ ಭ್ರಷ್ಟ ರಾಜಕಾರಣಿಗಳಿಂದ, ಹಾಗೂ ಅಧಿಕಾರಶಾಹಿ, ಪುರೋಹಿತಶಾಹಿ ಕುತಂತ್ರಗಳಿಂದ ತುಳಿತಕ್ಕೆ ಹಾಗೂ ಶೋಷಣೆಗೆ ಒಳಗಾಗಿದ್ದರೆ, ಇಂತಹ ನೀಚ ಸಂಸ್ಕೃತಿಯನ್ನು ಪ್ರತಿಭಟಿಸಲು ಸಾಹಿತ್ಯ ನೆರವಾಗುತ್ತದೆ. ಜಾತಿ ಜಾತಿಗಳ ನಡುವೆ ಇರುವ ತಾಕಲಾಟವನ್ನು ಹೋಗಲಾಡಿಸಿ, ಸಾಮಾಜಿಕ ಕಳಕಳಿಯನ್ನು ಜನತೆಯ ಮನದಲ್ಲಿ ಮೂಡಿಸುವಲ್ಲಿ ಸಾಹಿತ್ಯ ಸ್ನೇಹ ಸೌಹಾರ್ದತೆಯನ್ನು ಪ್ರಚೋದಿಸುತ್ತದೆ. ದಲಿತ ಮತ್ತು ಬಂಡಾಯ ಎರಡು ಗ್ರಹಿಕೆಗಳಲ್ಲೂ ಇಂದು ಸಾಹಿತ್ಯ ಸೃಷ್ಟಿ ನಡೆಯುತ್ತಿದೆ. ಎಡರನ್ನೂ ಒಂದೇ ಸಾಮಾಜಿಕ ನೆಲೆಗಟ್ಟಿನಲ್ಲಿ ನಿಂತು ನೋಡುವ ಧೋರಣೆ ರೂಪುಗೊಳ್ಳುತ್ತಿದೆ. ಬದುಕಿನಲ್ಲಿ ಜಾತಿಯ ಸಮಸ್ಯೆಯಿಂದಾಗಿ ಇರುವ ಕ್ರೌರ್ಯದ ವಿರುದ್ಧ ಹೋರಾಡುತ್ತಾ, ಸಕಲರಿಗೂ ಒಂದೇ ಮತ ಎಂಬ ತತ್ವನ್ನು ಪ್ರಚಾರ ಮಾಡುವುದು ಸಾಹಿತ್ಯದ ಮೂಲ ಉದ್ದೇಶ."[೧] ಎಂದು ಅಭಿಪ್ರಾಯ ಪಡುತ್ತಾರೆ.

ಬರವಣಿಗೆಯ ಮೂಲಕ ಮಾತ್ರ ಸಮಾಜದಲ್ಲಿರುವ ವರ್ಗವನ್ನು ತೊಡೆದು ಹಾಕಲು ಸಾಧ್ಯವಿಲ್ಲ. ಸಮಾಜದಲ್ಲಿ ಬೇರು ಬಿಟ್ಟಿರುವ ಜಾತಿಯಲ್ಲಿರುವ ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಸಾಮಾಜಿಕ ಆಂದೋಲನಕ್ಕೆ ಅವಕಾಶವನ್ನು ಸಾಹಿತ್ಯ ಮಾಡಿಕೊಡುತ್ತದೆ ಎಂಬುದನ್ನು ಒಪ್ಪಬಹುದು.

ಒಂದು ಜಾತ್ಯಾಧಾರಿತ ವರ್ಗ ಸಮಾಜ ನಿರ್ಮಿತವಾದರೆ, ಇನ್ನೊಂದು ದೃಷ್ಟಿಕೋನದಲ್ಲಿ ದುಡಿಮೆಯಾಧಾರಿತ ವರ್ಗ ಸಮಾಜವನ್ನು ನೋಡಲಾಗಿದೆ. ಜಾತಿಯಾಧಾರಿತ ವರ್ಗ ಸಮಾಜದಲ್ಲಿ ಶೋಷಣೆ ಹೇಗೆ ನಿರಂತರವಾಗಿರುತ್ತದೋ, ಹಾಗೆಯೇ ಮಾಲೀಕನು ದುಡಿಯುವವನ ಮೇಲೆ ದಬ್ಬಾಳಿಕೆ ನಡೆಸುತ್ತಾನೆ. ಇಲ್ಲಿ ಜಾತಿ ಗೌಣ, ಆರ್ಥಿಕತೆಯೇ ಪ್ರಧಾನವಾಗಿರುವ ಸಮಾಜವಿರುತ್ತದೆ.

ತೇಜಸ್ವಿಯವರು ವರ್ಗಾಧಾರಿತ ಸಮಾಜದಲ್ಲಿನ ಜಾತಿ ಪದ್ಧತಿಯ ದುಸ್ಥಿತಿಯನ್ನು ಕುರಿತು "ನಮ್ಮಲ್ಲಿ ಜಾತಿಪದ್ಧತಿ ಕೇವಲ ಜೀವನವನ್ನು ಕುರಿತ ಒಂದು ನಿಲುವನ್ನು ಮಾತ್ರ ಬೋಧಿಸುವುದಿಲ್ಲ, ಜೀವಿಸುವ ಕ್ರಮಕ್ಕೇ ನಿರ್ದಿಷ್ಟ ನಿಯಮಾವಳಿಗಳ ಮೂಲಕ ಚೌಕಟ್ಟು ಹಾಕುತ್ತದೆ. ಎಂದರೆ ಯಾರು ಮೇಲ್ಜಾತಿಯವನ ಮನೆ ಮೆಟ್ಟಿಲು ಹೊರಗೇ ನಿಲ್ಲಬೇಕು, ಯಾರು ಹಜಾರದವರೆಗೆ ಬರಬಹುದು, ಯಾರು ಅಡುಗೆಮನೆಯವರೆಗೂ ಬರಬಹುದು, ಯಾರ ಕೇರಿಗೆ ಯಾರು ಕಾಲಿಕ್ಕುವುದೂ ನಿಷಿದ್ಧ, ಯಾವ್ಯಾವ ಕೆಲಸವನ್ನು ಯಾರ್ಯಾರು ಮಾಡಲೇ ಕೂಡದು, ಹೆಂಗಸು ತನ್ನ ಜೀವಮಾನವನ್ನು ಎಲ್ಲಿ ಕಳೆಯಬೇಕು, ಯಾವ್ಯಾವ ವಯಸ್ಸಿನಲ್ಲಿ ಯಾರ್ಯಾರ ಅಧೀನದಲ್ಲಿ ಕಳೆಯಬೇಕು ಇತ್ಯಾದಿ ಕಟ್ಟುಕಟ್ಟಳೆಗಳ

ಮುಖಾಂತರ ಜಾತಿಪದ್ಧತಿ ಪ್ರತಿ ಜಾತಿಯವರ ಅನುಭವ ವಿಶ್ವವನ್ನೂ ಪ್ರತ್ಯೇಕೀಕರಿಸುತ್ತಾ ಹೋಗುತ್ತದೆ. ಎಂದರೆ ಒಂದೇ ಕಾಲದಲ್ಲಿ, ಭೌಗೋಳಿಕವಾಗಿ ಒಂದೇ ಜಾಗದಲ್ಲಿ ಬೇರೆ ಬೇರೆ ಜಾತಿಯವರು ವಿವಿಧ ಆಯಾಮಗಳ ತಮ್ಮತಮ್ಮದೇ ಆದ ವಿಶ್ವದಲ್ಲಿ ಬಂಧಿಗಳಾಗುತ್ತಾ ಹೋಗುತ್ತಾರೆ. ಜಾತಿ ಜಾತಿಗಳ ಅನುಭವ ವಿಶ್ವದಲ್ಲಿ ಸಮಾನಾಂಶ ವಿವಿಧ ಪ್ರಮಾಣದಲ್ಲಿ ಇರುವುದು ನಿಜವಾದರೂ ಅದು ಆಯಾ ಜಾತಿಯವರ ಧರ್ಮ ನಿಷ್ಠೆ ಹೆಚ್ಚಾದಂತೆಯೂ ಕ್ಷೀಣಿಸುತ್ತಾ ಹೋಗುತ್ತದೆ. ಇತರ ಜಾತಿಯವರು ಹೆಚ್ಚು ಹೆಚ್ಚು ಅಪರಿಚಿತರಾಗುತ್ತಾ ಹೋಗುತ್ತಾರೆ"[೨] ಎಂದು ಹೇಳುತ್ತಾರೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ವರ್ಗಾಧಾರಿತ ಸಮಾಜವನ್ನು ಕುರಿತು ಹಿಂದಿನಿಂದಲೂ ಇದರ ಬಗ್ಗೆ ಚರ್ಚಿಸುತ್ತಾ ಬಂದಿದೆ. ನವ್ಯ ಸಾಹಿತ್ಯ ಪರಂಪರೆಯಲ್ಲಿ ಬಂದತಹ ಸಾಹಿತಿಗಳು ಈ ಜಾತಿಯಾಧಾರಿತ ವರ್ಗ ಸಮಾಜದ ವಿರುದ್ದ ತಮ್ಮದೇ ಆದ ಬರವಣಿಗೆ ಹಾಗೂ ಆಂದೋಲನಗಳ ಮೂಲಕ ಜಾತಿ ನಿರ್ಮಿತ ವರ್ಗ ಸಮಾಜದ ವಿರುದ್ದ ಹೋರಾಡುತ್ತಾ ಬಂದಿದ್ದಾರೆ. ತೇಜಸ್ವಿ, ಲಂಕೇಶ್, ಅನಂತಮೂರ್ತಿಯವರು ತಮ್ಮ ಕಥೆಗಳಲ್ಲಿ ಇದರ ಸಂಬಂಧ ಮತ್ತು ಹೋರಾಟಗಳನ್ನು ಉಲ್ಲೇಖಿಸಿದ್ದಾರೆ.

ಜಾತಿಯಾಧಾರಿತ ವರ್ಗಾ ಸಮಾಜದಲ್ಲಿ ಸಂಬಂಧಗಳು ಅತಿ ಮುಖ್ಯವಾಗಿರುತ್ತವೆ. ಅವುಗಳು ಒಂದಕ್ಕೊಂದು ಕೊಂಡಿಯಂತೆ ಕೆಲಸ ಮಾಡುತ್ತವೆ. ತೇಜಸ್ವಿಯವರ ಕಥೆಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ 'ವರ್ಗಾಧಾರಿತ ಸಂಬಂಧ'ಗಳ ಮಹತ್ವನ್ನು ತಿಳಿಯಬಹುದು. ಇಲ್ಲಿ ಜಾತಿಯಾಧಾರಿತ ವರ್ಗ ಸಮಾಜ ಹಾಗೂ ದುಡಿಮೆ ಆಧಾರಿತ ವರ್ಗ ಸಮಾಜದ ಅಂಶಗಳನ್ನು ಕಾಣಬಹುದಾಗಿದೆ.

ತೇಜಸ್ವಿಯವರ ಕಥೆಗಳಲ್ಲಿ ವ್ಯಕ್ತಿ ಸಮಷ್ಠಿಗುಣವನ್ನು ಹೊಂದಿರುವ ವಿಚಾರಗಳು ಸಾಕಷ್ಟು ಸನ್ನಿವೇಶಗಳಲ್ಲಿ ಬರುತ್ತವೆ. ಅವರ 'ಹುಲಿಯೂರಿನ ಸರಹದ್ದು' ಕಥಾ ಸಂಕಲನದಲ್ಲಿನ 'ಗುಡುಗು ಹೇಳಿದ್ದೇನು', 'ಹುಲಿಯೂರಿನ ಸರಹದ್ದು', 'ಸ್ವರೂಪ', 'ನಿಗೂಢ ಮನುಷ್ಯರು' ಕಥೆಗಳು ಆರಂಭ ಕಾಲದ ಬರವಣಿಗೆಗಳಾಗಿದ್ದರೂ ಕೂಡ ಗ್ರಾಮೀಣ ಭಾಗದಲ್ಲಿ ಮಾಲೀಕ ಮತ್ತು ಕೂಲಿಗಾರನ ನಡುವಿನ ಸಂಬಂಧಗಳನ್ನು ಸಹಜವಾಗಿ ನಿರೂಪಿಸುತ್ತಾರೆ. ಆಧುನಿಕ ಜಗತ್ತಿನಲ್ಲಿ ಬಂಡವಾಳ ಶಾಹಿ ಮತ್ತು ಕಾರ್ಮಿಕ ವರ್ಗವೆಂದು ಗುರುತಿಸುವ ಮೂಲಕ ಕಾರ್ಮಿಕನ ದುಡಿಮೆ ಮಾಲೀಕನ ಸಂಪತ್ತು ಎಂಬ ವ್ಯಾಖ್ಯಾನ ಬರುತ್ತದೆಯೋ ಹಾಗೆಯೇ ಗ್ರಾಮೀಣ ಭಾಗದಲ್ಲಿನ ಕೂಲಿಗಾರನ ದುಡಿಮೆ ಶ್ರೀಮಂತನ ಸಂಪತ್ತು ಎಂಬ ಸಾಮಾನ್ಯ ಸಂಗತಿಯನ್ನು ಕಾಣಬಹುದಾಗಿದೆ. ಇಂತಹ ಅಂಶಗಳು ಸಹಜ ಪ್ರಕ್ರಿಯೆಂಬಂತೆ ತೇಜಸ್ವಿಯವರ ಕಥೆಗಳಲ್ಲಿ ಬರುತ್ತವೆ.

'ಗುಡುಗು ಹೇಳಿದ್ದೇನು' ಕಥೆಯಲ್ಲಿನ ಲಕ್ಕ ಮತ್ತು ಸೋಮ ಅಣ್ಣತಮ್ಮಂದಿರಾಗಿದ್ದರೂ ಇಬ್ಬರು ಬೆಕ್ಕನೂರು ಸುಬ್ಬೇಗೌಡನ ಒಕ್ಕಲಾಗಿರುತ್ತಾರೆ. ದುಡಿಯುವಕ್ಕಿಂತ ಹೆಚ್ಚಾಗಿ ಸೋಮಾರಿಗಳಾಗಿರುತ್ತಾರೆ. ಖರ್ಚಿಗೆ ಹಣ ಬೇಕು ಅದಕ್ಕಾಗಿ ಮನೆಯಲ್ಲಿರುವ ವಸ್ತುಗಳನ್ನು ಮಾರಾಟ ಮಾಡುತ್ತಾ ಬರುತ್ತಾರೆ. ಗೌಡನ ಬಳಿ ಕೆಲಸಕ್ಕೆ ಹೋಗಲು ಸುತರಾಂ ಇಷ್ಟವಿಲ್ಲದೆ ಕಾಲ ಹರಣ ಮಾಡುತ್ತಿರುತ್ತಾರೆ. ಇವರು ಕಡಿಕಲ್ಲಿಗೆ ಹೋಗುತ್ತಾರೆ ಎಂಬ ಸುದ್ದಿ ಗೌಡನಿಗೆ ಗೊತ್ತಾದಾಗ ಕೋಪಕ್ಕಿಂತ ಸಂತೋಷಗೊಳ್ಳುವ ವಿಚಿತ್ರ ಸನ್ನಿವೇಶವನ್ನು ತೇಜಸ್ವಿಯವರು ಕಥೆಯಲ್ಲಿ ತರುತ್ತಾರೆ.

ಸುಬ್ಬೇಗೌಡನಿಗೆ "ಈ ಸೋಮಾರಿಗಳಿಂದ ಕೆಲಸ ತೆಗೆಯುವ ಕಷ್ಟ ತಪ್ಪಿದ್ದಕ್ಕಾಗಿ ಅವರ ಹೃದಯ ಹಿಗ್ಗಿ ಹಗುರವಾಗಿತ್ತು."[೩] ವರ್ಗ ಸಮಾಜದಲ್ಲಿ ಗೌಡನು ಯಾವಾಗಲೂ ಮೇಲ್ಪಂಕ್ತಿಯಲ್ಲಿ ಅಧಿಕಾರವನ್ನು ಚಲಾಯಿಸಿದರೆ ದುಡಿಯುವ ಆಳು ಗೌಡನ ಅಧಿಕಾರವನ್ನು ಪಾಲಿಸುವ ವ್ಯಕ್ತಿಯಾಗಿ ಕಂಡುಬರುತ್ತಾನೆ. ಸುಬ್ಬೇಗೌಡನಿಗೆ ಸೋಮ ಮತ್ತು ಲಕ್ಕ ಇಬ್ಬರು ಊರನ್ನು ಬಿಡುತ್ತಾರೆ ಎಂಬ ಸಂಗತಿಯಿಂದ ಸಂತೋಷಗೊಳ್ಳಲು ಕಾರಣ ಅವರು ಸೋಮಾರಿಗಳಾಗಿರುವುದರಿಂದ ಯಾವ ಪ್ರಯೋಜನವೂ ಇಲ್ಲ ಎಂಬುದಾಗಿದೆ.

'ಹುಲಿಯೂರಿನ ಸರಹದ್ದು' ಕಥೆಯಲ್ಲಿ ಗೌಡ ಮತ್ತು ಆಳಿನ ವಿಚಾರಕ್ಕೆ ಸಂಬಂಧಿಸಿದ ಅಂಶಗಳನ್ನು ಗಮನಿಸಿದಾಗ ಗೌಡ ಮತ್ತು ಆಳಿನ ನಡುವೆ ಸಂಭಾಷಣೆಯ ವಿಚಾರಕ್ಕೆ ಸಂಬಂಧಿಸಿದಂತೆ ಮಾತುಗಳಲ್ಲಿ ಏರಿಳಿತ ಕಂಡರೂ ಅಲ್ಲಿ ಸಹಜವಾದ 'ವರ್ಗ ಸಂಬಂಧ'ವನ್ನು ಕಾಣಬಹುದು. ಬದುಕಿನ ಅನಿವಾರ್ಯತೆ ದುಡಿಮೆಯೇ ಆಧಾರ. ಅದು ಎಲ್ಲಿಯಾದರೂ, ಯಾರ ಬಳಿಯಾದರೂ ದುಡಿಯಲೇ ಬೇಕು. ಶೋಷಣೆಯೆಂಬ ಪದ ಮಾಲೀಕನದ್ದಾಗಿರುತ್ತದೆ. ಅನಿವಾರ್ಯತೆಯ ಪದ ಕಾರ್ಮಿಕನದ್ದಾಗಿರುತ್ತದೆ. ಆದರೂ ಗೌಡನ ದರ್ಪಗಳಿಗೆ ಕೊನೆಯಿಲ್ಲ. ಜೊತೆಗೆ ವಂಶ ಮುಂದುವರೆದಂತೆ ಗೌಡನ ಮುಂದಿನ ವಾರಸುದಾರನಿಂದಲೂ ಇದೇ ರೀತಿಯ ನಡವಳಿಕೆ ಕಾಣಲಾಗುತ್ತದೆ.

ಕಥೆಯಲ್ಲಿನ ರಂಗಪ್ಪಗೌಡನ ಮಗ ಸೋಮು ಮತ್ತು ಲಿಂಗನನ್ನು ಮಾತನಾಡಿಸುವ ಪರಿಯನ್ನು ಗಮನಿಸಿದಾಗ ಬದುಕಿನ ಅಸಹಾಯಕತೆ ಕಾಣುತ್ತದೆ.

"ಅಲ್ಯಾಕೆ ನಿಂತಿದೆಯೋ ಮಂಗಾ?" ಸೋಮು ದಬಾಯಿಸಿದ.

"ಹಿ, ಹಿ, ಸುಮ್ನೆ."

"ಯಂತ ಸುಮ್ನೆ, ಸುಂಸುಮ್ನೆ ಯಾಕೆ ನಿಲ್ಬೇಕು ಹಂಗೆ?"

"ಹಿ, ಹಿ, ಸುಮ್ನೆ."

"ಹಂಗಾರೆ ಇಲ್ಲಿ ನಿಲ್ಬೇಡ ಮಳೆ ಬರ ಹಾಂಗಿದೆ ಹೋಗು"

"ಹಿ, ಹಿ, ಸುಮ್ನೆ."

"ಸುಮ್ನೆ, ಸುಮ್ನೆ! ಎಂತದೋ ಸುಮ್ನೆ. ಹೋಗೋ ಇಲ್ಲಿಂದ ತರ್ಲೆ."[೪]

ಸೋಮುವಿನ ಮಾತಿನ ರೀತಿ–ನೀತಿಗೂ, ಲಿಂಗನ ಮಾತಿನ ರೀತಿ–ನೀತಿಗೂ ಸಾಕಷ್ಟು ಬದಲಾವಣೆಯನ್ನು ಕಾಣಲಾಗುತ್ತದೆ. ಸೋಮುವಿನ ಮಾತಿನ ಗರ್ವ, ಲಿಂಗನ ಅಸಹಾಯಕತೆಯನ್ನು ಸಂಭಾಷಣೆಯಲ್ಲಿ ನೋಡಬಹುದಾಗಿದೆ. ಸೋಮು ಎಷ್ಟೇ ರೀತಿಯ ಮಾತುಗಳನ್ನು ಹೇಳಿದರೂ ಲಿಂಗನ ಒಂದೇ ರೀತಿ ಪ್ರತಿಕ್ರಿಯೆ ಅದು "ಹಿ, ಹಿ, ಸುಮ್ಮೆ" ಎಂಬ ಮಾತಾಗಿದೆ. ಕೆಲವೊಮ್ಮೆ ಯಜಮಾನನ ಬಳಿ ಆಳು ಹೆಚ್ಚಿನ ಮಾತುಗಳನ್ನು ಆಡಿದರೂ ಅದು ಸಮಸ್ಯೆಯನ್ನು ಉಂಟುಮಾಡುತ್ತದೆಯಾದ ಕಾರಣ ಲಿಂಗನು ಅಸಹಾಯಕ ಪ್ರತಿನಿಧಿಯಾಗಿ ಕಾಣುತ್ತಾನೆ. ವರ್ಗ ಸಂಬಂಧಗಳು ಬಹುಪಾಲು ಈ ನೆಲೆಯಲ್ಲಿಯೇ ಕಂಡುಬರುತ್ತವೆ. ಯಜಮಾನ ಒಂದು ವೇಳೆ ತಪ್ಪಾಗಿ ನಡೆದುಕೊಂಡರೂ ಅದನ್ನು ಪ್ರಶ್ನಿಸುವಂತಿಲ್ಲ. ಹಾಗಯೇ ಅಸಭ್ಯ ಮಾತುಗಳನ್ನು ಹೇಳಿದರೂ ಅದಕ್ಕೆ ವಿರುದ್ಧವಾಗಿ ಮಾತನಾಡ ಬಾರದೆಂಬ ಅಲಿಖಿತ ಕಾನೂನುಗಳು ಗ್ರಾಮೀಣ ಭಾಗದಲ್ಲಿ ಸಹಜವಾದ ವಿಚಾರಗಳಾಗಿವೆ.

ಜಾತಿ ಅತಿ ದೊಡ್ಡ ಕಂದಕವನ್ನು ವರ್ಗ ಸಮಾಜದಲ್ಲಿ ಉಂಟುಮಾಡುತ್ತದೆ. ಸಂಬಂಧಗಳು ಬಹುಪಾಲು ಸಂದರ್ಭದಲ್ಲಿ ಬಲವಂತವಾದ ಶೋಷಣೆಯನ್ನು ಉಂಟು ಮಾಡುತ್ತವೆ. ಮುಂದುವರೆದಂತೆ ಈ ಶೋಷಣೆಯ ವಿರುದ್ಧ ಸೇಡಿನ ಕ್ರಮ ವರ್ಗಗಳ ನಡುವೆ ಉಂಟಾಗುತ್ತದೆ. ಈ ನಿಟ್ಟಿನಲ್ಲಿ 'ಸ್ವರೂಪ' ಕಥೆಯಲ್ಲಿ ಕೊಂಡಪ್ಪಗೌಡರು "ನಮ್ಮ ಜಾತಿಯ ಹೆಂಗಸರು ಬ್ರಾಹ್ಮಣರ ಮನೆ ಮುಸುರೆ ತಿಕ್ಕುವ ವಂಶವಾಗಿ ಹೋಗಿದ್ದಾರೆ, ಅವರ ಹೆಂಗಸರು ನಮ್ಮ ಮನೆ ಮುಸುರೆ ತಿಕ್ಕುವುದೇ ಇದಕ್ಕೆ ಪ್ರಾಯಶ್ಚಿತ್ತ."[೫] ಎನ್ನುವ ಮಾತು ಹಿಂದುಳಿದ ಮತ್ತು ಮುಂದುವರೆದ ವರ್ಗ ಸಮಾಜದ ಮನಸ್ಥಿತಿಯನ್ನು ತೋರುತ್ತದೆ. ಅಂಬೇಡ್ಕರ್‌ರವರ ಭಾರತೀಯ ಸಂವಿಧಾನ ಕಾನೂನು ಆಗುವವರೆಗೂ ಇಂತಹ ಸಹಜವಾದ ಶೋಷಣೆಗಳು ಜಾತಿ ಹಿನ್ನೆಲೆಯಲ್ಲಿ ನಡೆದೆ ಇತ್ತು. ಸ್ವಾತಂತ್ರ್ಯೋತ್ತರದ ನಂತರ ಬ್ರಾಹ್ಮಣರ ಯಜಮಾನಿಕೆಯ ಪ್ರಮಾಣ ಕಾಲ ಕ್ರಮೇಣ ಕಡಿಮೆಯಾಗುತ್ತಾ ಬಂದಿತು. ಅದಕ್ಕೆ ಹಿಂದಿನ ಕಾರಣವಾದರೂ ಏನು? ಎಂಬ ಸಂಗತಿಯನ್ನು ಸಂಕ್ಷಿಪ್ತವಾಗಿ ನೋಡಿದಾಗ ಬ್ರಾಹ್ಮಣರಿಗೆ, ಶ್ರೀಮಂತ ಕುಟಂಬಕ್ಕೆ ಸಿಕ್ಕಷ್ಟೂ ಸವಲತ್ತು ಇತರೆ ವರ್ಗಗಳಿಗೆ ಸಿಗಲಿಲ್ಲ. ಸಹಜವಾದ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ವಿಚಾರಗಳಲ್ಲಿ ವಂಚಿತರಾಗಿಯೇ ಬಂದದ್ದು ಪ್ರಮುಖ ಕಾರಣವಾಗಿತ್ತು. ಸ್ವಾತಂತ್ರ್ಯೋತ್ತರ ನಂತರದ ದಿನಗಳಲ್ಲಿ ಆಯಾಯ ಕಾಲದಲ್ಲಿ ಬಂದ ಬಹುಪಾಲು ಬ್ರಾಹ್ಮಣೇತರ ಪ್ರತಿನಿಧಿಗಳ ಸರ್ಕಾರಗಳು ಸ್ವಲ್ಪಮಟ್ಟಿಗೆ ವರ್ಗ ಸಮಾಜದಲ್ಲಿ ಸಮಾನತೆಯನ್ನು ತರಲು ಶೈಕ್ಷಣಿಕ, ಆರ್ಥಿಕ ಸವಲತ್ತುಗಳನ್ನು ತಮ್ಮ ವ್ಯಾಪ್ತಿಯಲ್ಲಿ ನೀಡುತ್ತಾ ಬಂದಾಗ ಜಾತಿಗಳಿಂದ ಕೂಡಿದ ವರ್ಗ ಸಮಾಜದ

ದರ್ಪ ಕಡಿಮೆಯಾಗುತ್ತಾ ಬಂದಿದೆ ಎಂಬ ಅಂಶವನ್ನು ಕೊಂಡಪ್ಪಗೌಡರ ಮಾತಿನಲ್ಲಿ ತಿಳಿಯಬಹುದು. ನಮ್ಮ ಜಾತಿಯ ಹೆಂಗಸರು ಮಾಡುತ್ತಿದ್ದ ಕೆಲಸವನ್ನು ಬ್ರಾಹ್ಮಣರ ಹೆಂಗಸರು ಮಾಡಿದರೆ ತಪ್ಪೇನು ಎಂಬ ಅರ್ಥ, ಬದಲಾವಣೆಯ ಸನ್ನಿವೇಶವನ್ನು ತೋರುತ್ತದೆ.

ತೇಜಸ್ವಿಯವರ ಮೊದಲ ಕಥಾ ಸಂಕಲನದ 'ನಿಗೂಢ ಮನುಷ್ಯರು' ಎಂಬ ದೀರ್ಘ ಕಥೆಯಲ್ಲಿ ಬಹುಪಾಲು ವರ್ಗಾಧಾರಿತ ಸಮಾಜದಲ್ಲಿನ ಸಂಬಂಧಗಳನ್ನು ಜಾತಿ–ದುಡಿಮೆಯ ಕೂಲಿ ಆಳುಗಳ ಹಿನ್ನೆಲೆಯಲ್ಲಿ ನೋಡಬಹುದಾಗಿದೆ. ಕ್ರಾಂಪ ಮತ್ತು ಮರಸರರು ಗೋಪಾಲಯ್ಯನ ಬಳಿ ಒಕ್ಕಲಿನ ಕೆಲಸ ಮಾಡಿಕೊಂಡು ಇದ್ದರು. ಕ್ರಾಂಪ ಮತ್ತು ಮರಸರನ್ನು ಒಕ್ಕಲುತನದ ಕೆಲಸಕ್ಕೇನು ಕರೆದುಕೊಂಡು ಬಂದವನಲ್ಲ. ಸಹಜವಾಗಿ ಗದ್ದೆ ಕುಯಿಲು  ಮಾಡಿಕೊಟ್ಟು ಹೋಗುತ್ತೇವೆಂದು ಬಂದವರು ಗೋಪಾಲಯ್ಯನ ಒಕ್ಕಲುಗಳಾಗಿ ನಿಂತರು.  ಮಂಗಗಳನ್ನು ತಿನ್ನುವ ಮರಸರ ಆಹಾರದ ವಿಚಾರದಲ್ಲಿ ಕ್ರಾಂಪನು ತಗಾದೆಯನ್ನು ತೆಗೆಯುತ್ತಾನೆ. ಕ್ರಾಂಪನು ಕೂಡ ದುಡಿಯುವ ಕೆಲಸಕ್ಕೆ ಬಂದಿದ್ದರೂ ಮರಸರನು ಮಂಗಗಳನ್ನು ಬೇಟೆಯಾಡಿ ತಿನ್ನುವ ರೀತಿಯಿಂದ ರೋಷಿ ಹೋಗಿರುತ್ತಾನೆ. ಒಂದು ವೇಳೆ ಕಾಂಪ್ರನು ಮರಸರ ಮಂಗಗಳನ್ನು ತಿನ್ನುವುದನ್ನು ಬಿಡದೆ ಹೋದರೆ ತಾನು ಒಕ್ಕಲು ತನದಿಂದ ಹೊರ ನಡೆಯುವ ವಿಚಾರವನ್ನು ಗೋಪಾಲಯ್ಯನ ಬಳಿ ಹೇಳಿಕೊಳ್ಳುತ್ತಾನೆ. ಮುಂದುವರೆದಂತೆ ಮರಸರನ ಬದುಕಿನ ಕ್ರಮವನ್ನು ಲೋರಿ ಎಂಬ ಮತ್ತೊಬ್ಬ ಒಕ್ಕಲುತನದ ವ್ಯಕ್ತಿಯೂ ಪ್ರತಿಭಟಿಸಿ ಗೋಪಾಲಯ್ಯನ ಬಳಿ ತಾವಿಬ್ಬರು ಹೊರಹೋಗುವುದಾಗಿ ಹೇಳುತ್ತಾರೆ.

ಆರ್ಥಿಕವಾಗಿ ಹಿಂದುಳಿದ ಜನ ದುಡಿಮೆಗಾಗಿ ಯಜಮಾನಿಕೆಯ ವರ್ಗವನ್ನು ಆಶ್ರಯಿಸುತ್ತಾರೆ. ಅವರಿಗೆ ಕನಿಷ್ಟ ನ್ಯಾಯವನ್ನು ಯಜಮಾನನಿಂದ ನಿರೀಕ್ಷಿಸುತ್ತಾರೆ. ಒಂದು ವೇಳೆ ಅದು ದಕ್ಕಿದ್ದರೆ ಅವರ ಮತ್ತು ಅವರ ನಂತರದ ಜನಾಂಗ ಯಜಮಾನನ ಬಳಿಯೇ ಕೂಲಿಗೆ ನಿಲ್ಲುತ್ತಾರೆ. ಸ್ವಾಮಿ ನಿಷ್ಟೆ ತೋರಿಸುತ್ತಾರೆ. 'ಜೀತಪದ್ದತಿ' ಪ್ರತಿನಿಧಿಗಳಾಗಿ ಮುಂದುವರೆಯುತ್ತಾರೆ. ಇಲ್ಲಿ ಬಹುಪಾಲು ಸಂದರ್ಭದಲ್ಲಿ ಯಜಮಾನಿಕೆಯ ದರ್ಪ ಆ ಬಡ ಪ್ರತಿನಿಧಿಗಳ ಮೇಲೆ ನಡೆಯುತ್ತಿರುತ್ತದೆ. ಅವರ ಅಸಹಾಯಕತೆಯೇ ಯಜಮಾನಿಕೆಯ ಬಂಡವಾಳವಾಗುತ್ತದೆ. ಗೋಪಾಲಯ್ಯನು ಭೂಮಿಯ ಒಡೆಯ ನಾಗಿದ್ದರೂ ಕೂಡ ಅವನ ಭೂಮಿಯ ನಿಜವಾದ ದುಡಿಮೆಗಾರರು ಮರಸರ, ಕಾಂಪ್ರ, ಲೋರಿಯಂಥವರು. ಅವರ ಕುಟುಂಬಕ್ಕೆ ಒಂದಿಷ್ಟು ಕನಿಷ್ಠ ಪ್ರಮಾಣದ ಆರ್ಥಿಕ ಸವಲತ್ತುಗಳನ್ನು ನೀಡಿದರೆ ಅವರು ಅಲ್ಲಿಯೇ ನೆಲೆ ನಿಲ್ಲುತ್ತಾರೆ. ಮರಸರನು ಮಂಗನ ಸಾಯಿಸುವ ರೀತಿ ಮತ್ತು ಮಾಂಸವನ್ನು ತಿನ್ನುವ ರೀತಿಯಿಂದ ಕಾಂಪ್ರ  ಮತ್ತು

ಲೋರಿಗೆ ಸಹಜವಾಗಿ ಅಸಹ್ಯ ಹುಟ್ಟುತ್ತದೆ. ತಮ್ಮ ಕನಿಷ್ಠ ನೋವನ್ನು ಆಲಿಸದ ಗೋಪಾಲಯ್ಯನ ಬಳಿ ಇರುವುದಕ್ಕಿಂತ ತಾವು ಹೊರಹೋಗುವುದೇ ಲೇಸು ಎಂಬ ತೀರ್ಮಾನವೂ ಗೋಪಾಲಯ್ಯನಂಥವರಿಗೆ ಸಮಸ್ಯೆಯನ್ನು ಉಂಟುಮಾಡುತ್ತದೆ. ಲಾಭ-ನಷ್ಟಗಳ ಲೆಕ್ಕಾಚಾರದಲ್ಲಿ ಗೋಪಾಲಯ್ಯನಂಥ ವ್ಯಕ್ತಿಗಳು ಸ್ಪಂದಿಸುವುದು ಅನಿವಾರ್ಯ. ಅದು ಆಗದಿದ್ದರೆ ಭೂಮಿ ಪಾಳು ಬೀಳುತ್ತದೆಂಬ ಭಯ. ಇಂತಹ ಅನಿವಾರ್ಯತೆ ಮತ್ತು ನಷ್ಟದ ಊಹೆಯನ್ನು ಮಾಡಿ ಸಾಧ್ಯವಾದಷ್ಟು ಸಹಾಯ ಮಾಡುವ ಅನಿವಾರ್ಯತೆ ಯಜಮಾನಿಕೆಯವರಿಗೆ ಇರುತ್ತದೆ. ಇದು ಅನುಕಂಪದ ಸಹಾಯವಾಗದಿದ್ದರೂ ಅವಶ್ಯಕ ಕಾರಣದಿಂದ ಮಾತ್ರ ಸಾಧ್ಯವಾಗುತ್ತದೆ.

ತೇಜಸ್ವಿಯವರ ಕಥಾ ಸಂಕಲನಗಳ ಕಥೆಗಳನ್ನು ನೋಡಿದಾಗ ಒಂದೊಂದು ಕಥೆಗಳಲ್ಲೂ ಜಾತಿ ನಿರ್ಮಿತ ವರ್ಗ ಸಂಬಂಧಗಳ ನಡುವೆ ಜನರು ಜೀವನ ನಡೆಸುತ್ತಿರುತ್ತಾರೆ. ಮಹತ್ತರವಾದ ಸಂಘರ್ಷಕ್ಕಿಂತ ಹೆಚ್ಚಾಗಿ ಸಂಬಂಧಗಳೇ ಪ್ರಧಾನವಾಗಿ ಕಾಣುತ್ತವೆ. ಆ ಕಾರಣದಿಂದ 'ಅಬಚೂರಿನ ಪೋಸ್ಟಾಫೀಸು' ಕಥಾ ಸಂಕಲನವನ್ನು ಅಧ್ಯಯನಕ್ಕೆ ಒಳಪಡಿಸಿ ನೋಡಿದಾಗ 'ಅಬಚೂರಿನ ಪೋಸ್ಟಾಫೀಸು', 'ಕುಬಿ ಮತ್ತು ಇಯಾಲ', 'ತಬರನ ಕಥೆ' ಅತ್ಯಂತ ಮಹತ್ತರವಾದ ಅಂಶಗಳನ್ನು ವರ್ಗ ಸಂಬಂಧಗಳ ಅನಿವಾರ್ಯತೆಯ ಎಚ್ಚರವನ್ನು ಓದುಗನಿಗೆ ನೀಡುತ್ತವೆ.

ಆಧುನಿಕತೆ ಪಲ್ಲಟದ ನಡುವಿನ 'ಅಬಚೂರಿನ ಪೋಸ್ಟಾಫೀಸು' ಕಥೆಯಲ್ಲಿ ಬೋಬಣ್ಣನು ಅಲ್ಲೀಜಾನ್ ಸಾಬರ ತೋಟದಲ್ಲಿ ರೈಟರ್ ಕೆಲಸಕ್ಕೆ ಸೇರಿದ್ದರೂ ಕೂಡ ಮಾಲೀಕ ಮತ್ತು ಕಾರ್ಮಿಕನ ನಡುವೆ ಸಂಘರ್ಷಕ್ಕಿಂತ ಹೆಚ್ಚಾಗಿ ಸಂಬಂಧಗಳು ಕಂಡುಬರುತ್ತದೆ. ಎಲ್ಲಿಯೂ ಕೂಡ ಸಂಘರ್ಷ ಇಬ್ಬರ ನಡುವೆ ನಡೆಯುವುದಿಲ್ಲ. ಗ್ರಾಮೀಣ ಬದುಕಿನಲ್ಲಿ ಧರ್ಮಗಳ ನಡುವಿನ ಸಾಮರಸ್ಯಕ್ಕೆ ಇದೊಂದು ಉತ್ತಮ ಉದಾಹರಣೆಯಾದ ಕಥೆಯಾಗಿದೆ. ಆಧುನಿಕತೆ ಮತ್ತು ವ್ಯಕ್ತಿಗತ ಕೌಟುಂಬಿಕ ಸಮಸ್ಯೆಗಳ ನಡುವಿನ ತೊಯ್ದಾಟದಲ್ಲಿ ಬೋಬಣ್ಣನು 'ಪೋಸ್ಟ್ ಮಾಸ್ತರ' ಕೆಲಸವನ್ನು ಕಳೆದುಕೊಳ್ಳುತ್ತಾನೆಯೇ ಹೊರತು ಮಾಲೀಕನ ನಡುವಿನ ಸಂಘರ್ಷದಿಂದಲ್ಲ. ಬೋಬಣ್ಣನಿಗೆ ಹೆಚ್ಚುವರಿಯಾಗಿ ಪೋಸ್ಟ್ ಮಾಸ್ತರ ಕೆಲಸವನ್ನು ಕೊಡಿಸಿದ್ದು ಅಲ್ಲೀಜಾನ್ ಸಾಬರೇ ಆಗಿರುತ್ತಾರೆ. ಬೋಬಣ್ಣನ ವ್ಯಕ್ತಿಗತ ಸಂಘರ್ಷಗಳಿಂದ ರೈಟರ್ ಮತ್ತು ಪೋಸ್ಟ್ ಮಾಸ್ತರಿಕೆಯ ಹುದ್ದೆಗಳನ್ನು ಕಳೆದುಕೊಳ್ಳುತ್ತಾನೆ.

ತೇಜಸ್ವಿಯವರ 'ಕುಬಿ ಮತ್ತು ಇಯಾಲ' ಕಥೆಯಲ್ಲಿ ಮಾಲೀಕ-ಕಾರ್ಮಿಕ ನಡುವಿನ ಸಂಬಂಧವೇನು ಇಲ್ಲ. ಕಥೆಯಲ್ಲಿ ಕುಬೇಂದ್ರ ವೃತ್ತಿಯಲ್ಲಿ ಭೈರಾಪುರದಲ್ಲಿ ವೈದ್ಯನಾಗಿರುತ್ತಾನೆ. ಅವನ ಜೊತೆ ರಾಮರಾಯ ಕಾಂಪೌಂಡರ್ ಕೆಲಸವನ್ನು ಮಾಡುತ್ತಿರುತ್ತಾನೆ. ಕಥೆಯ ಆರಂಭದಲ್ಲಿ ರಾಮರಾಯನು ಕುಬೇಂದ್ರನ ವಿರುದ್ದವಾಗಿ

ನಡೆದುಕೊಂಡಂತೆ ಕಂಡರೂ ಕುಬೇಂದ್ರನು ಒಮ್ಮೆ ರಾಮರಾಯನು ಪ್ರಜ್ಞಾಹೀನನಾಗಿ ಬಿದ್ದಾಗ ಅವನನ್ನು ಕಾಪಾಡಿದ ಕಾರಣದಿಂದ ಪವಾಡ ಪುರುಷನಂತೆ ಕಾಣುತ್ತಾನೆ. ರಾಮರಾಯನ ಅಜ್ಞಾನ ಮತ್ತು ಅಮಾಯಕತೆ ಕುಬೇಂದ್ರನನ್ನು 'ಪವಾಡ ಪುರುಷ' ನಂತೆ ಸೃಷ್ಟಿಸುವ ಕೆಲಸಕ್ಕೆ ಕಾರಣವಾಗುತ್ತದೆ. ಯಾವುದನ್ನು ಕುಬೇಂದ್ರನು ನಿರೀಕ್ಷಿಸಿರುವುದಿಲ್ಲವೋ ಅಂತಹ ಕೆಲಸವನ್ನು ರಾಮರಾಯನು ಮಾಡುವ ವಿಚಿತ್ರ ಸನ್ನಿವೇಶ ಬರುತ್ತದೆ. ರಾಮರಾಯನು ವೃತ್ತಿಯಲ್ಲಿ ಕುಬೇಂದ್ರನಿಗಿಂತ ಕಡಿಮೆ ದರ್ಜೆಯವನಾಗಿದ್ದರೂ ಕೂಡ ಕುಬೇಂದ್ರನು ತನ್ನ ಅಧಿಕಾರದ ದರ್ಪವನ್ನು ರಾಮರಾಯನಿಗೆ ಎಲ್ಲಿಯೂ ತೋರುವುದಿಲ್ಲ. ಬಹುಶಃ ಉನ್ನತವಾಗಿ ಶಿಕ್ಷಣ ಪಡೆದು ವೃತ್ತಿಯ ಧರ್ಮವನ್ನು ಎತ್ತಿ ಹಿಡಿಯುವ ವ್ಯಕ್ತಿಗಳು ಸದಾ ತಮ್ಮ ಜೊತೆ ಕೆಲಸ ಮಾಡುವ ಇತರರನ್ನು ಗೌರವದಿಂದ ನಡೆಸಿಕೊಳ್ಳುವುದೇ ಶ್ರೇಷ್ಠವೆಂದು ಭಾವಿಸಿರುತ್ತಾರೆ ಎಂಬುದಕ್ಕೆ ಈ ಕಥೆಯು ಉತ್ತಮ ನಿದರ್ಶನವಾಗಿದೆ.

ಶೋಷಣೆ ಮಾಡುವಂತ ವರ್ತಮಾನದ ಸಮಾಜಕ್ಕಿಂತ, ವೃತ್ತಿ ಗೌರವಕ್ಕೆ ಪಾತ್ರವಾಗುವ ಭೂತ ಕಾಲದ ಸಮಾಜವೇ ಉತ್ತಮವಾಗಿರುತ್ತದೆ ಎಂಬುದಕ್ಕೆ 'ತಬರನ ಕಥೆ' ಸಾಕ್ಷಿಯಾಗುತ್ತದೆ. ಸ್ವಾತಂತ್ರ್ಯೋತ್ತರದ ದಿನಗಳು ಗಾಂಧಿಯ ಪರಿಕಲ್ಪನೆಯನ್ನೇ ನಾಶ ಪಡಿಸಿದವು. ಗುಲಾಮಗಿರಿಯ ಸಂಕೇತವಾಗಿದ್ದ ಬ್ರಿಟಿಷ್ ಆಡಳಿತದಿಂದ ಮುಕ್ತಿ ಹೊಂದುವ ಮೂಲಕ ಸ್ವತಂತ್ರ ಪ್ರಜಾತಂತ್ರ ನಿರ್ಮಾಣವಾಗಿರುತ್ತದೆ. ವ್ಯಕ್ತಿಯಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ ಉದಯಿಸಿ, ಸ್ವರಾಜ್ಯ ಕಲ್ಪನೆಯು ಸಾಕಾರಗೊಳ್ಳುತ್ತದೆ ಎಂದು ಬಯಸಿದ್ದ ಗಾಂಧಿಯ ಚಿಂತನೆಗಳು ಸ್ವಾತಂತ್ರ್ಯ ಬಂದ ನಂತರದ ದಿನಗಳಲ್ಲಿ ಬೂಟಾಟಿಕೆಯ ವಸ್ತುಗಳಾದವು. 'ತಬರನ ಕಥೆ'ಯ ತಬರಸೆಟ್ಟಿಯು ಬ್ರಿಟಿಷರ ಅಧೀನದಲ್ಲಿ ಸುಂಕ ವಸೂಲಿ ಮಾಡುವ ಸರಕಾರಿ ಕೆಲಸ ಮಾಡುವ ಸಂದರ್ಭದಲ್ಲಿ ಸಿಕ್ಕಷ್ಟೂ ಗೌರವ ಸ್ವಾತಂತ್ರ್ಯದ ನಂತರದ ದಿನಗಳಲ್ಲಿ ದೊರಕದಿದ್ದರಿಂದ ಹತಾಶೆಗೆ ಒಳಗಾಗುತ್ತಾನೆ. ಬ್ರಿಟಿಷ್ ಆಡಳಿತವನ್ನು ಕೊಂಡಾಡುತ್ತಾನೆ. " ಛೆ, ದೊರೆಗಳ ಕಾಲದಲ್ಲಿ ಎಷ್ಟೊಂದು ಚೆನ್ನಾಗಿತ್ತು. ನಿಂತ ನಿಲುವಿನಲ್ಲಿ ಜಮೀನು ಮಂಜೂರು ಮಾಡ್ತಿದ್ದರು. ಎಷ್ಟು ಸಲೀಸು ಜನ! –ಖುಷಿಯಾದರೆ ಇನಾಮು ಕೊಡುತ್ತಿದ್ದರು! ಎಂದು ..... ಅಂದಿನ ದಿನಗಳು ನಮ್ಮವರ ಆಡಳಿತಕ್ಕಿಂತ ನಿಜವಾಗಿಯೂ ಸ್ವಚ್ಛವಾಗಿದ್ದಂತೆ ಅನ್ನಿಸಿತು. 'ಕಂತ್ರಿ ಸೂಳೇಮಕ್ಕಳು, ರಾಜ್ಯ ಆಳ್ತಾರಂತೆ. ಕೊಡೋಕೂ ಗೊತ್ತಿಲ್ಲ, ತಗೂಳ್ಳೋಕ್ಕೂ ಗೊತ್ತಿಲ್ಲ. ರಿಕಾರ್ಡು ಬೇಕಂತೆ, ಸರ್ಟಿಟಿಕೇಟು ಬೇಕಂತೆ" ಎಂದು ಸ್ವದೇಶಿ ಆಡಳಿತವನ್ನು ಜರಿದ."[೬]

ತಬರನಂತ ವ್ಯಕ್ತಿಗಳನೇಕರು ಸ್ವಾತಂತ್ರ್ಯಾನಂತರದ ಆಳ್ವಿಕೆಯನ್ನು ಶಪಿಸುತ್ತಾರೆ. ಅಭಿವೃದ್ಧಿಗಿಂತ ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ಅರಾಜಕತೆಯ ಸೃಷ್ಟಿಸುವುದು ಸಹಜವಾಗಿ

ಎಂಬಂತೆ ನಡೆಯುತ್ತಿರುವಾಗ ಸಹಜವಾಗಿ ಹಿಂದಿನ ಆಳ್ವಿಕೆಯನ್ನು ನೆನಪಿಸಿಕೊಳ್ಳುತ್ತಾರೆ. ತಬರನಂತಹ ಅಮಾಯಕ ವ್ಯಕ್ತಿಗಳು ಕೂಡ ಸಂಕಟ ಪಡುತ್ತಾರೆ. ವರ್ಗ ಸಂಬಂಧಗಳಲ್ಲಿ ಅತಿಮುಖ್ಯವಾಗಿರುವ ಅಂಶವೆಂದರೆ ಗುಲಾಮಿತನವನ್ನು ಒಪ್ಪಿಕೊಳ್ಳುವುದು. ಅದು ಬದುಕಿನ ಅನಿವಾರ್ಯತೆಯನ್ನು ತೋರಿಸುವುದಾಗಿರುತ್ತದೆ. ಇಲ್ಲಿ ಗುಲಾಮಿತನವೆಂದರೆ ರಾಜಪ್ರಭುತ್ವವಲ್ಲ. ಆದರೆ ಮಾಲೀಕನ ಜೊತೆ ದುಡಿಯುವ ವ್ಯಕ್ತಿಗೆ ಬೇಕಾದ ಆಸರೆಯಾಗಿದೆ. ಇಲ್ಲಿ ಜಾತಿ ಪ್ರಧಾನವಾದ ಸಮಾಜದ ಬದಲಿಗೆ ದುಡಿಮೆಯ ವರ್ಗಾಧಾರಿತ ಸಮಾಜವಾಗಿದೆ.

ಗ್ರಾಮೀಣ ಬದುಕಿನಲ್ಲಿ ವರ್ಗ ಸಂಘರ್ಷಗಳಿಗಿಂತ, ಸಂಬಂಧಗಳಿಗೆ 'ಕಿರಗೂರಿನ ಗಯ್ಯಾಳಿಗಳು' ಕಥೆ ಪ್ರಾಮುಖ್ಯತೆಯನ್ನು ಪಡೆದಿದೆ. ಈ ಕಥೆಯಲ್ಲಿ ಸಂಘರ್ಷಕ್ಕಿಂತ ಹೆಚ್ಚಾಗಿ ಪ್ರತಿಷ್ಠೆಗಳು ಪ್ರಧಾನವಾಗಿ ಕಂಡುಬರುತ್ತವೆ. 'ಕಿರಗೂರಿನ ಗಯ್ಯಾಳಿಗಳು' ಕಥೆಯಲ್ಲಿ 'ಹೆಬ್ಬಲಸಿನ ಮರದ ಪ್ರಸಂಗ' ಕಥೆಯ ಬೆಳವಣಿಗೆಗೆ ಕಾರಣವಾಗುತ್ತದೆ.

'ಕಿರಗೂರಿನ ಗಯ್ಯಾಳಿಗಳು' ಕಥೆಯಲ್ಲಿ ಗೌಡ ಮತ್ತು ಹೊಲೆಯ ಜನಾಂಗದ ಗಂಡಸರ ಸ್ವಪ್ರತಿಷ್ಟೆಗಳು ತಿಕ್ಕಾಟಕ್ಕೆ ಕಾರಣವಾದರೆ, ಅದೇ ಜಾತಿಗಳ ಹೆಂಗಸರಲ್ಲಿ ಸಾಮರಸ್ಯ ಕಂಡುಬರುತ್ತದೆ. ವರ್ಗ ಸಮಾಜವನ್ನು ನೋಡುವಾಗ 'ಪುರುಷ ಸಮಾಜ'ಕ್ಕಿಂತ ಗಮನಿಸಿದರೆ 'ಸ್ತ್ರೀ ಸಮಾಜವನ್ನು' ಗಮನಿಸಿದಾಗ ಸಂಬಂಧಗಳ ಗಟ್ಟಿತನ ಕಾಣುತ್ತದೆ. ಕಿರುಗೂರಿನ ಗಂಡಸರಿಗಿಂತ ಹೆಂಗಸರೆ ಇಡೀ ಕಥೆಯ ಉದ್ದಕ್ಕೂ ಪ್ರಧಾನವಾಗಿ ಕಾಣುತ್ತಾರೆ. ಗೌಡರ ಹೆಂಗಸರು ಮತ್ತು ಹೊಲೆಯರ ಹೆಂಗಸರ ನಡುವಿನ ದುಡಿಮೆ ಮತ್ತು ಮಾನವೀಯ ಸಂಬಂಧಗಳು ಹೆಚ್ಚಿನ ಮಹತ್ವವನ್ನು ಪಡೆದುಕೊಳ್ಳುತ್ತವೆ. 'ಉಳುಕು' ತೆಗೆಯುವ ಪ್ರಸಂಗ ಬಂದಾಗ ಹರಿಜನರಲ್ಲೊಬ್ಬನಾದ ಕರಿಯನು ಒಕ್ಕಲಿಗರ ಕಾಳೇಗೌಡ ಮತ್ತು ಸುಬ್ಬೇಗೌಡನ ವಿಚಾರವಾಗಿ ಹಿಂದುಮುಂದು ನೋಡುತ್ತಾನೆ. ಆದರೆ ಕರಿಯನ ಹೆಂಡತಿ ಕಾಳಿಯು ಅವರಿಗೆ ಉಳುಕು ತೆಗೆಯಲೇ ಬೇಕು ಎಂದು ಮನುಷ್ಯ ಸಂಬಂಧಕ್ಕೆ ಹೆಚ್ಚಿನ ಬೆಲೆಯನ್ನು ನೀಡಬೇಕು ಎಂಬಂತೆ ಮಾತನಾಡುತ್ತಾಳೆ. ಆದರೆ ಕರಿಯನು "ಹಂಗಲ್ಲಾ ಮಾರಾಯ್ತಿ, ನಾನು ಕಾಲಾಗಿ ತುಳಿದು.....ಎಂದೇನನ್ನೋ ಹೇಳ ಹೊರಟಿದ್ದ. ಆದರೆ ಕಾಳಿಗೆ ಎಷ್ಟು ರೇಗಿತ್ತೆಂದರೆ ಕರಿಯನ ಮಾತು ಮುಂದುವರಿಯಲು ಬಿಡದೆ ' ಅವೆಲ್ಲಾ ಮಾತು ಬ್ಯಾಡ. ಅವತ್ತು ದಿಮ್ಮಿ ಉರುಳಿ ಬರ್ತ ತಾಲಿ ಆಣೆ ಹಾಕಿ ತಡದ್ಲು ದಾನಮ್ಮ. ಇಲ್ದಿದ್ರೆ ಇವತ್ತು ನಿಮ್ಮವ್ವಗೆ ಹಾಲುತುಪ್ಪ ಬಿಡಬೇಕಿತ್ತು.'"[೬] ಎನ್ನುತ್ತಾಳೆ. ಜಾತಿಯ ಕಲ್ಪನೆಯ 'ವರ್ಗ ಸಂಬಂಧ'ಗಳಲ್ಲಿ ಕೊಡುಕೊಳ್ಳುವಿಕೆಯ ಪ್ರಸಂಗಗಳು ಅತಿಮುಖ್ಯವಾಗುತ್ತವೆ. ಅವುಗಳು ಯಾವ ರೂಪದಲ್ಲಾದರೂ ಆಗಬಹುದು ಎಂಬುದಕ್ಕೆ 'ಕಿರಗೂರಿನ ಗಯ್ಯಾಳಿಗಳು' ಕಥೆಯಲ್ಲಿ ಜಾತಿ ಮನುಷ್ಯನ ಗುರುತಿಗಾಗಿಯೇ ಹೊರತು ಬದುಕಿಗಾಗಿ ಅಲ್ಲ ಎಂಬುದಾಗಿದೆ. ಕರಿಯನು ಜಾತಿ ಕಾರಣ ಮುಂದುಮಾಡಿ ತಾನು ಉಳುಕನ್ನು ತೆಗೆಯದೆ ಹೋದ

ಸಂದರ್ಭವನ್ನು ಹೇಳಲು ಹೊರಟಾಗ ಆತನ ಹೆಂಡತಿ ಕರಿಯನ ತಾಯಿಯ ಸಾವಿನ ಸಂದರ್ಭವನ್ನು ತಂದು ಬಾಯಿ ಮುಚ್ಚಿಸುತ್ತಾಳೆ. ಇಲ್ಲಿ ಹರಿಜನರು ಒಕ್ಕಲುತನದವರ ಬಳಿ ಕೆಲಸ ಮಾಡಲು ಹೋಗುವಾಗ ಅದು ಕೇವಲ ದುಡಿಮೆಗೆ ಮಾತ್ರ ಸೀಮಿತವಾಗಬೇಕೆ ಹೊರತು ವ್ಯಕ್ತಿಯ ಸಮಾಜವನ್ನು ಜರಿಯುವುದು ಅಥವಾ ಹೊಗಳುವ ಕಾರಣಕ್ಕಾಗಲ್ಲ ಎಂಬ ಸೂಕ್ಷ್ಮತೆಯನ್ನು ತೇಜಸ್ವಿಯವರು ಕಥೆಯಲ್ಲಿ ಪ್ರಧಾನವಾಗಿ ತರುತ್ತಾರೆ. ವರ್ಗ ಸಂಬಂಧಗಳ ಜೀವಂತಿಕೆಯನ್ನು ಗ್ರಾಮೀಣ ಭಾಗದ ಚೌಕಟ್ಟಿನಲ್ಲಿ ತರುವ ಮೂಲಕ ಜಾತಿಯು ಅವರ ಸಮಾಜದ ಕಾರಣಕ್ಕಾಗಿಯೇ ಹೊರತು ಇಡೀ ಸಮಾಜಕ್ಕೆ ಅದು ಪ್ರಧಾನವಾಗುವುದಿಲ್ಲ. ಜಾತಿಯಾಧಾರಿತ ಹಳ್ಳಿಗಳಲ್ಲಿ ತಮ್ಮದೇ ಆದ ಕಾಯಕಗಳನ್ನು ಮಾಡುತ್ತಿರುತ್ತಾರೆ. ಆದರೆ ಅವರ ಜಾತಿ ಮತ್ತು ಕಾಯಕಗಳನ್ನು ಇನ್ಯಾವುದೋ ಜಾತಿಯವರು ಹೀಯ್ಯಾಳಿಸುವುದು, ತಿರಸ್ಕರಿಸುವುದು ನಡೆದಾಗ ಸಮಸ್ಯೆಗಳು ತಲೆದೋರುತ್ತವೆ.

ನವ್ಯ ಸಾಹಿತ್ಯದ ರಚನೆಯ ಲಂಕೇಶರು 'ವರ್ಗಸಂಬಂಧ'ದ ಅನೇಕ ಕಥೆಗಳನ್ನು ರಚಿಸಿದ್ದಾರೆ. ಅವರ ಕಥೆಗಳಲ್ಲಿ ಒಡೆಯ ಮತ್ತು ಆಳುಗಳ ನಡುವಿನ ಸಂಬಂಧಗಳು ಭಾವನಾತ್ಮಕತೆಯಿಂದ ಕೂಡಿರುತ್ತವೆ. ಅದು ಆಳಿನ ಸ್ವಾಮಿ ನಿಷ್ಠೆಯೂ ಆಗಿರಬಹುದು ಅಥವಾ ತಾನು ನೆಲೆ ಕಂಡುಕೊಳ್ಳಲು, ಬದುಕಿನಲ್ಲಿ ನೆಲೆಯೂರಲೂ ಕಾರಣವಾಗಿಂ ಬಹುದು. ಒಟ್ಟಾರೆಯಾಗಿ ಆಳು ದುಡಿಮೆಯ ಅಥವಾ ಜಾತಿಯ ಹಿನ್ನೆಲೆಯಲ್ಲಿ ಮಾಲೀಕನ ಜೊತೆ ಉತ್ತಮ ಸಂಬಂಧವನ್ನು ಹೊಂದಲು ಬಯಸುತ್ತಾನೆ. ಕೆಲವೊಮ್ಮೆ ಲಿಂಗದ ಹಿನ್ನೆಲೆಯಲ್ಲಿ ನೋಡಿದಾಗ ಹೆಣ್ಣು ಸಹ ವಿವಿಧ ಆಸೆ ಆಕಾಂಕ್ಷೆಗಳಿಗೆ ಒಳಗಾಗಿ ದೈಹಿಕವಾಗಿಯೂ ಸಂಬಂಧವನ್ನು ಇಟ್ಟುಕೊಳ್ಳುವ ಸಂದರ್ಭಗಳು ಗ್ರಾಮೀಣ ನೆಲೆಯಲ್ಲಿ ಇವೆ. ಅದು 'ದೈಹಿಕ ಸಮರ್ಪಣೆ' ಎಂತಲೂ ಇದ್ದರೆ, ನಗರ ಪ್ರದೇಶಗಳಲ್ಲಿ ಮೇಲಿನ ಅಧಿಕಾರಿಗಳ ಜೊತೆ ನೌಕರ ಶಾಹಿ ವರ್ಗದ ಕೆಲವರು ಜೀವನದ ಅನಿವಾರ್ಯತೆಯಿಂದ 'ದೈಹಿಕ ಸಂಬಂಧ'ಕ್ಕೆ ಮುಂದಾಗುತ್ತಾರೆ. 'ವರ್ಗ ಸಂಬಂಧ'ದ ಹಿನ್ನೆಲೆಯಲ್ಲಿ ಗಮನಿಸಿದಾಗ ಸಹಜವಾಗಿ 'ಉಮಾಪತಿಯ ಸ್ಕಾಲರ್ ಶಿಪ್ ಯಾತ್ರೆ' ಕಥಾ ಸಂಕಲನದ 'ಜೊತೆಗಾರ' ಮತ್ತು 'ಮಾರಲಾಗದ ನೆಲ' ಕಥೆಯಲ್ಲಿನ ಘಟನೆಗಳು ಇಂತಹ ಹೇಳಿಕೆಗಳನ್ನು ಪುಷ್ಟೀಕರಿಸುತ್ತವೆ.

'ಜೊತೆಗಾರ' ಕಥೆಯಲ್ಲಿನ ಭಜ್ಯನು ರಂಗಪ್ಪನ ಬಳಿ ಆಳಾಗಿ ದುಡಿಯುತ್ತಿರುತ್ತಾನೆ. "ಹಕ್ಕೆಯಲ್ಲಿ ಭಜ್ಯ ತನ್ನ ಸಹಾಯಕರೊಡನೆ ದನಕರುಗಳಿಗೆ ಹುಲ್ಲು ಹಾಕುತ್ತ, ಹಿಂಡಿ ಒದಗಿಸುತ್ತ, ಸಗಣಿ ಎತ್ತುತ್ತ ಸುಖವಾಗಿದ್ದಾನೆ."[೮] ಎಂಬ ಮಾತುಗಳು ಕಥೆಯಲ್ಲಿ ಬರುತ್ತದೆ. ಆಳು ದುಡಿಯುವಾಗ ತನ್ನ ಇತಿ-ಮಿತಿಯನ್ನು ಅರಿತು ನಡೆಸುವ ಬದುಕು ಅರ್ಥಪೂರ್ಣವೋ, ಅರ್ಥರಹಿತವೋ ಆ ವ್ಯಕ್ತಿಗಳಿಗೆ ತಿಳಿಯದು. ಆದರೆ ಇರುವುದರಲ್ಲಿಯೇ

ಸುಖ ಎಂಬ ಪರಿಕಲ್ಪನೆಯ ಬದುಕು ಅವರ ಜೀವನದ ಜೀವಂತಿಕೆಗೆ ಸಾಕ್ಷಿಯಾಗುತ್ತದೆ. ಇಂತಹ ಬದುಕನ್ನು ಸಾಗಿಸುವ ಭಜ್ಯನು ಧಣಿಗಳ ಜೀವನದಲ್ಲಿ ಆಗುತ್ತಿರುವ ಬದಲಾವಣೆಗಳ ಬಗ್ಗೆ ಆತಂಕಗೊಳ್ಳುತ್ತಾನೆ. ಅವರ ಸಮಸ್ಯೆಗಳು ತನ್ನದೇ ಆದ ಸಮಸ್ಯೆಗಳೆಂದು ಯೋಚಿಸುತ್ತಾನೆ. ಆ ರೀತಿಯಲ್ಲಿ ರಂಗಪ್ಪನ ಸ್ನೇಹಿತನಾದ ಸೀತರಾಮುವಿನ ಬಳಿ, ತನ್ನ ಧಣಿಗಳ ಅಧೋಗತಿಯ ಬದುಕಿಗೆ ಕಾರಣ "ಆ ಹಾದರಗಿತ್ತಿ ಸಾವಾಸಕ್ಕೆ ಬಿದ್ದು, ಮನೆ ಹಾಳಾತು ನನ್ನೊಡೆಯಾ,"[೯] ಎಂದು ಹೇಳುತ್ತಾನೆ. ತನಗೆ ಅನ್ನ ನೀಡುವ ಕುಟುಂಬ ಯಾವಾಗಲೂ ಚೆನ್ನಾಗಿರಬೇಕೆಂದು ಬಯಸುವ ಸಾಲಿನಲ್ಲಿ ಭಜ್ಯನಂತಹ ವ್ಯಕ್ತಿಗಳು ಸಾಕಷ್ಟು ಜನ ಇದ್ದಾರೆ. ಅದಕ್ಕಾಗಿ ಎಂತಹ ಸನ್ನಿವೇಶವನ್ನು ಎದುರಿಸುವ ಧೈರ್ಯ ಅವರದ್ದಾಗಿರುತ್ತದೆ. ಆ ಕಾರಣದಿಂದಲೇ ಸಂಬಂಧಗಳು ಗಟ್ಟಿಗೊಳ್ಳುತ್ತವೆ ಎಂಬ ಸತ್ಯ ಈ ಕಥೆಯಲ್ಲಿ ಅನಾವರಣಗೊಂಡಿದೆ.

ಗ್ರಾಮೀಣರಲ್ಲಿ ಸ್ಥಳೀಯ ರಾಜಕೀಯಗಳು ಪ್ರಬಲವಾಗಿರುತ್ತವೆ. ಸದಾ ತಂತ್ರ ಕುತಂತ್ರಗಳಿಂದ ಕೂಡಿರುತ್ತವೆ. ಅವುಗಳಲ್ಲಿ ಜಾತಿಯಾಧಾರಿತ ವರ್ಗ ರಾಜಕೀಯಗಳಂತೂ ಇನ್ನೂ ಜೀವಂತವಾಗಿರುತ್ತವೆ. ಈ 'ವರ್ಗ ಸಂಬಂಧ'ಗಳ ಅಡಿಯಲ್ಲಿ ಸಹಜವಾಗಿ ಜೀತ ಪದ್ಧತಿ ಅಥವಾ ಗೇಣಿ ಪದ್ಧತಿ ಪ್ರಚಲಿತದಲ್ಲಿ ಇರುತ್ತದೆ. ಜೀತ ಪದ್ಧತಿಯು ಸಹಜವಾಗಿ ಮುಂದಿನ ತಲೆಮಾರಿಗೂ ಅದು ಮುಂದುವರೆಯುತ್ತದೆ. ಇಲ್ಲಿ ಗಂಡು-ಹೆಣ್ಣುಗಳು ಸಾಮಾನ್ಯವಾಗಿ ಗೌಡನ ಮನೆಯಲ್ಲಿ ಕೆಲಸ ಮಾಡುವುದು ಇರುತ್ತದೆ. ಯಜಮಾನಿಕೆಯ ಗಂಡಸರ ದೈಹಿಕ ತೃಷೆಗೆ ಕೆಲಸದ ಹೆಣ್ಣುಗಳು ಬಲಿಯಾಗುತ್ತಾರೆ. ಕೆಲವೊಮ್ಮೆ ಅವರ ಮಕ್ಕಳು ಯಜಮಾನಿಕೆಯ ಗೌಡನಿಂದ ಹುಟ್ಟಿದ್ದರೂ ಅದೇ ಮನೆಯಲ್ಲಿ ಕೆಲಸ ನಿರ್ವಹಿಸುವ ಪರಿಸ್ಥಿತಿಗಳು ಇವೆ. 'ಮಾರಲಾಗದ ನೆಲ' ಕಥೆಯಲ್ಲಿನ ಭರಮಪ್ಪನ ಮಗ ವಿಶ್ವನಾಥನು ಗದ್ದೆಯನ್ನು ದುರುಗನಿಗೆ ನೀಡಿ, ನಗರದಲ್ಲಿ ವಾಸಿಸುತ್ತಿರುತ್ತಾನೆ. ಆ ದುರುಗನು ವರ್ಷ ವರ್ಷವು ಅಕ್ಕಿಯನ್ನು ಕಳುಹಿಸುತ್ತಿರುತ್ತಾನೆ. ಅವನ ಬಗ್ಗೆ ವಿಶ್ವನಾಥನಿಗೆ "ದುರುಗನು ತನ್ನ ತಂದೆಯ ಮೊದಲ ಮಗನೆಂಬ ಅನುಮಾನ ಇರುತ್ತದೆ. ಕಣ್ಣು ಮೂಗು" ಎಲ್ಲವೂ ಆತನ ತಂದೆಯ ರೂಪವನ್ನೇ ಹೋಲುತ್ತಿರುತ್ತದೆ. ದುರುಗನು ಬೇಡ ಜನಾಂಗದವನಾಗಿದ್ದರೂ ಗದ್ದೆಯ ಕೆಲಸದಲ್ಲಿ ನಿರತನಾಗಿರುತ್ತಾನೆ. ಒಂದು ದಿನ ದುರಗನು ಸತ್ತಾಗ ವಿಶ್ವನಾಥನು ದುರುಗನ ಕುಟುಂಬಕ್ಕೆ ಪ್ರತಿ ತಿಂಗಳು ಮೂವತ್ತು ರೂಪಾಯಿ ನೀಡುತ್ತೇನೆಂದು ಹೇಳುತ್ತಾನೆ. "ದುರುಗನ ಅಪ್ಪ, ಅಮ್ಮ ನಮ್ಮ ಮನೆಗಾಗಿ ಜೀವ ತೇದ ಜನ."[೧೦] ಎಂಬ ಕಾರಣವನ್ನು ಕೊಡುತ್ತಾನೆ. ವಿಶ್ವನಾಥನು ಹೇಳುವ ಆ ಮಾತುಗಳು ಅವನ ಮನಸ್ಸಿನಲ್ಲಿರುವ ಮಾನವೀಯ ಮೌಲ್ಯಕ್ಕೆ ಸಾಕ್ಷಿಯಾಗಿದೆ. ದುಡಿಯುವ ವರ್ಗ ಯಾವಾಗಲೂ ತಮ್ಮ ಒಡೆಯನ ಆಸರೆಯನ್ನು ಬಯಸುತ್ತದೆ. ಇಲ್ಲಿ ವಿಶ್ವನಾಥನು

ಆ ಕೆಲಸವನ್ನು ಮಾಡುತ್ತಾನೆ. ಲಂಕೇಶರ ಸಮಾಜದ ತಿರಸ್ಕೃತ ಪ್ರಧಾನವಾದ ಪಾತ್ರಗಳು ಇರುವ ಕಥೆಗಳಲ್ಲೂ ಕೂಡ ಮಾನವೀಯ ತುಡಿತ ಇರುತ್ತದೆ.

ಸಾಮಾನ್ಯವಾಗಿ ದುಡಿಮೆಯ ವರ್ಗ ಮಾಲೀಕನ ಮೇಲೆ ಅಸಮಾಧಾನ ಹೊಂದಿರುತ್ತದೆ. ಕೆಲವೊಮ್ಮೆ ದುಡಿಯುವ ವರ್ಗವು ಪರಸ್ಪರ ತಮ್ಮಲ್ಲಿಯೇ ದ್ವೇಷ, ಅಸೂಯೆ, ಅಸಹನೆ ವ್ಯಕ್ತಪಡಿಸುತ್ತಾರೆ. ಮಾಲೀಕನ ಜೊತೆ ವಿಧೇಯವಾಗಿ ನಡೆದುಕೊಂಡರೂ ದುಡಿಯುವ ವರ್ಗದಲ್ಲಿ ಮನಸ್ತಾಪಗಳು ಇರುವುದು ವಿಚಿತ್ರ ಆದರೂ ಸತ್ಯವಾದ ವಿಚಾರ. ಲಂಕೇಶರ 'ಒಂದು ಬಾಗಿಲು' ಕಥೆ ಈ ನಿಟ್ಟಿನಲ್ಲಿ ಗಮನಿಸಬಹುದು. ಚಿನ್ನಮ್ಮ ವಯಸ್ಸಾದ ಹೆಂಗಸು. ಮೇಸ್ತ್ರಿ ದಾಸನ ಬಳಿ ಕೆಲಸ ಮಾಡುತ್ತಿರುತ್ತಾಳೆ. ಮೇಸ್ತ್ರಿಯು ಲಂಕೇಶರ ತೋಟದ ಮನೆಯನ್ನು ನಿರ್ಮಿಸಲು ಆಳುಗಳನ್ನು ಕರೆದುಕೊಂಡು ಬಂದಿರುತ್ತಾನೆ. ಲಂಕೇಶರು ಇಲ್ಲಿ ಮಾಲೀಕರಾಗಿಯೇ ಕಥೆಯನ್ನು ನೈಜ ಚೌಕಟ್ಟಿನಲ್ಲಿ ಮುಂದುವರಿಸುತ್ತಾರೆ. ಚಿನ್ನಮ್ಮಳ ಆಸೆ ತನ್ನ ಮನೆಗೆ ಒಂದು ಬಾಗಿಲು ಬೇಕು ಎಂಬುದಾಗಿರುತ್ತದೆ. ಅದನ್ನು ಲಂಕೇಶರ ಬಳಿ ತನ್ನದೇ ಆದ ಭಾಷೆಯಲ್ಲಿ ನಿವೇದಿಸಿಕೊಳ್ಳುತ್ತಾಳೆ. ಅದಕ್ಕೆ ಒಪ್ಪಿದ ಲಂಕೇಶ್ ತನ್ನ ಮನೆಗೆ ನಿರ್ಮಿಸುತ್ತಿದ್ದ ವಾಸ್ಕಲ್ ಮತ್ತು ಬಾಗಿಲನ್ನು ಕೊಡುವಂತೆ ದಾಸ್‌ಗೆ ಹೇಳುತ್ತಾನೆ. ಸ್ವತಃ ದಾಸ್‌ಗೆ ಇಷ್ಟವಿಲ್ಲದಿದ್ದರೂ ಒಪ್ಪಿಕೊಳ್ಳುತ್ತಾನೆ.

ಚಿನ್ನಮ್ಮಳ ಜೊತೆ ಕೆಲಸ ಮಾಡುವವರು ಲೇಖಕರಿಗೆ ಗೊತ್ತಾಗದಂತೆ "ತೆಲುಗು, ತಮಿಳಿನಲ್ಲಿ ಏನೇನೋ ಮಾತಾಡಿಕೊಳ್ಳುತ್ತ, ಚಿನ್ನಮ್ಮನಿಗೆ ಕೇಳಿಸುವುದೆಂಬ ನೆದರೂ ಇಲ್ಲದೆ ಕೆಲಸ ಮಾಡುತ್ತಿದ್ದರು. ನನಗೆ ನನ್ನ ಹುಚ್ಚಿನ ಬಗ್ಗೆಯೇ ದಿಗ್ಭ್ರಮೆಯಾಗತೊಡಗಿತು. ಮುನಿರಾಜನನ್ನು ಪಕ್ಕಕ್ಕೆ ಕರೆದು ವಿಷಯ ಏನೆಂದು ವಿವರಿಸಲು ಹೇಳಿದೆ, ಆತ ಹಿಂಜರಿದ. ಒತ್ತಾಯ ಮಾಡಿದ ಮೇಲೆ, ಚಿನ್ನಮ್ಮ ಅಷ್ಟು ಒಳ್ಳೆಯ ಹೆಂಗಸಲ್ಲವೆಂದೂ ಆಕೆ ನೆಟ್ಟಗಿದ್ದರೆ ಅವಳಿಗೆ ಈ ಗತಿ ಯಾಕೆ ಬರುತ್ತಿತ್ತೆಂದೂ ಅವರೆಲ್ಲ ಮಾತಾಡಿಕೊಳ್ಳುತ್ತಿದ್ದಾರೆಂದು ಹೇಳಿದ. ನಾನು ನಕ್ಕೆ. ನೂರಾರು ಘಟ್ಟಗಳಲ್ಲಿ ಅಪರಾಧಿಗಳೂ ನೀಚರೂ ಆದ ಈ ದೇಶದ ಜನರಲ್ಲಿ ಚಿನ್ನಮ್ಮನದೂ ಒಂದು ಘಟ್ಟವಲ್ಲವೇ ಎಂದು ಕೇಳಿಕೊಳ್ಳುವಾಗ ಸಹ ಆಕೆಯ ಕುಳ್ಳ ದೇಹ, ಬದುಕುವ ಆಸೆಯಿಂದ ಎಲ್ಲರಿಗಿಂತ ಹೆಚ್ಚು ಚುರುಕಾಗಿ ಕೆಲಸ ಮಾಡುವ ಅನಿವಾರ್ಯತೆ –ಮನಸ್ಸು ತುಂಬಿತು."[೧೧]

ಚಿನ್ನಮ್ಮ ಕಥೆಯ ಒಂದು ಭಾಗ. ಆದರೆ ಭಾರತದಂತಹ ದೇಶದಲ್ಲಿ ಕುಟುಂಬ ಜವಾಬ್ದಾರಿಯನ್ನು ಮರೆತ ಗಂಡಸರ ನೆರಳಿನಿಂದ ಹೊರ ಬರುವ ಹೆಂಗಸರು ಬದುಕಿಗಾಗಿ ಅದೆಷ್ಟು ಘಟನೆಗಳನ್ನು ಎದುರಿಸುತ್ತಾರೆ, ಬದುಕಿಗಾಗಿ ಹೋರಾಡುತ್ತಾರೆ, ತಮ್ಮ ಛಲಗಳಿಂದ ಕೆಲವೊಮ್ಮೆ ಗೆಲ್ಲುತ್ತಾರೆ. ಬಹುಪಾಲು ಸಂದರ್ಭದಲ್ಲಿ ಸೋಲುತ್ತಾರೆ. ಆದರೂ ಎದೆಗುಂದುವುದಿಲ್ಲ. ಅಂತಹ ಸಾಲಿನಲ್ಲಿ ಚಿನ್ನಮ್ಮ ನಿಲ್ಲುತ್ತಾಳೆ. ಆಕೆಯ ಗಂಡ ಬಿಟ್ಟರೂ

ತಾನೂ ದುಡಿದು ಬದುಕ ಬೇಕೆಂಬ ಛಲ. ವಯಸ್ಸಾದರೂ ದುಡಿಮೆಯ ಕಸುವು. ಅದಕ್ಕಾಗಿ ವಯಸ್ಸಾಗಿದ್ದರೂ, ಕುಳ್ಳಾಗಿದ್ದರೂ, ಒಂದು ಕಣ್ಣಿನಲ್ಲಿ ಹೂವಿದ್ದರೂ, ಚುರುಕಾಗಿ ಕೆಲಸ ಮಾಡುತ್ತಿರುತ್ತಾಳೆ. ಮುದುಕಿಯೆಂದು ನಾಳೆ ಕೆಲಸಕ್ಕೆ ಕರೆಯದಿದ್ದರೆ ಬದುಕಿನ ಚಕ್ರ ತಿರುಗುವುದಿಲ್ಲ. ಕೆಲಸದಲ್ಲಿ ಆತ್ಮಾಭಿಮಾನವಿರುವ ಹೆಂಗಸು. ಅಂಥ ಹೆಂಗಸಿನ ಜೊತೆಗಾರರಾಗಿ ಕೆಲಸ ಮಾಡುತ್ತಿದ್ದರೂ ಅವಳ ದುಡಿಮೆಯ ರೀತಿ, ಅವಳ ಬಾಗಿಲಿನ ಆಸೆಯನ್ನು ವ್ಯಂಗ್ಯಮಾಡುವುದು ಮಾತ್ರ ವಿಪರ್ಯಾಸ ವಿಚಾರವಾಗಿದೆ. ಭಾರತದಂತಹ ದೇಶದಲ್ಲಿ ನೀಚರು, ಭ್ರಷ್ಟರು ಇದ್ದರೂ ಅಂಥವರ ನಡುವೆ ಚಿನ್ನಮ್ಮಳ ತಪ್ಪು ಯಾವುದೂ ದೊಡ್ಡದಲ್ಲ. ತನ್ನದೊಂದು ಮನೆಯಿರಲಿ, ಅದಕ್ಕೊಂದು ಬಾಗಿಲು ಇರಲಿ ಎಂಬ ಸಣ್ಣ ಆಸೆ ಚಿನ್ನಮ್ಮಳದು. ಅಂಥ ಆಸೆಯನ್ನು ಅಪಹಾಸ್ಯ ಮಾಡುವ ಕುಯುಕ್ತಿ ಸಮಾಜ ಕಾಣುತ್ತದೆ. ಮಾಲೀಕನ ಅನುಕಂಪವು ಸಹಾಯ ಹಸ್ತವನ್ನು ಕೆಲಸಗಾರರ ಮೇಲೆ ಬೀರಿದಾಗ ಅದನ್ನು ಸ್ವೀಕರಿಸುವ ದೊಡ್ಡ ಗುಣ ಸಹ ಜೊತೆಗಾರರಿಗೆ ಇರುವುದಿಲ್ಲ. ಇದು ಮಾಲೀಕ ಮತ್ತು ಕಾರ್ಮಿಕನ ನಡುವಿನ ಸಂಬಂಧವನ್ನು ಒಪ್ಪದ ವ್ಯಕ್ತಿಗಳ ದುಷ್ಟ ಮನಸ್ಸಿಗೆ ಉದಾಹರಣೆಯಾಗಿದೆ.

ಮಾಲೀಕನ ಸ್ವತ್ತಾಗಿ ಜೀತ ಪದ್ಧತಿಯ ಅಡಿಯಲ್ಲಿ ಅಥವಾ ಜಮೀನಿನಲ್ಲಿ ದುಡಿಯುವ ಹೆಣ್ಣು–ಗಂಡು ಮನೆಯ ಯಜಮಾನನ ನೆರಳಲ್ಲಿಯೇ ತಮ್ಮ ಸರ್ವಸ್ವವನ್ನು ಕಳೆದುಕೊಳ್ಳುತ್ತಾ ಬದುಕುತ್ತಾರೆ. ಜಾತಿ ಅಥವಾ ಆಳು ಪರಿಕಲ್ಪನೆಗಳು ಮನೆಯ ಒಡೆಯನಿಗೆ ಅಥವಾ ಒಡತಿಗೆ ಇರುವುದಿಲ್ಲ. ಯಜಮಾನಿಕೆಯಲ್ಲಿ ಮಾಲೀಕನು ತನ್ನ ಹೆಂಡತಿಯ ದೈಹಿಕ ದುರ್ಬಲತೆಗೆ, ಆತನ ವೈಯಕ್ತಿಕ ದುರ್ಬಲತೆಗೆ ಅಥವಾ ಆತನ ಅಹಂ ಪ್ರದರ್ಶನಕ್ಕೆ ಕೂಲಿಗಾರರ ಹೆಂಡತಿ ಅಥವಾ ಅವರ ಹೆಣ್ಣು ಮಕ್ಕಳ ಮೇಲೆ ದೈಹಿಕ ದರ್ಪ ತೋರಿಸುತ್ತಾನೆ. ಅದು ಅವರಿಗೆ ಅನಿವಾರ್ಯವೋ ಅಥವಾ ಆಕರ್ಷಣೆಯ ಕಾರಣಕ್ಕಾಗೋ ದೈಹಿಕವಾಗಿ ಸಂಬಂಧವನ್ನು ಹೊಂದುತ್ತಾರೆ. ಅದೇ ರೀತಿಯಲ್ಲಿ ಮನೆಯ ಯಜಮಾನಿಯೂ ಕೂಡ ಕೂಲಿಕಾರನಾಗಿ ಕೆಲಸ ಮಾಡುವ ಗಂಡಿನ ಜೊತೆ ದೈಹಿಕವಾಗಿ ಸಂಬಂಧವನ್ನು ಹೊಂದುತ್ತಾಳೆ. ಗಂಡನ ದೌರ್ಬಲ್ಯದ ಕಾರಣಕ್ಕಾಗಿ ಇಲ್ಲವೇ ಮನೆ ಕೆಲಸ ಸುಸೂತ್ರವಾಗಿ ನಡೆಯಲು ಅಥವಾ ತನ್ನ ದೇಹದ ಹಸಿವನ್ನು ಈಡೇರಿಸಿಕೊಳ್ಳುವ ಕೆಲಸಕ್ಕೆ ಮುಂದಾಗುತ್ತಾಳೆ. ಇಲ್ಲಿ ಜಾತಿ ಅಥವಾ ಆಳು ಪ್ರಧಾನವಾಗಿ ಕಾಣದಿದ್ದರೂ ದೈಹಿಕ ಸಂಬಂಧಕ್ಕೆ ಹೆಚ್ಚಿನ ಗಮನವಿರುತ್ತದೆ. ಲಂಕೇಶರ 'ಚಂದ್ರೇಗೌಡರಿಗೆ ಬಿದ್ದ ಕನಸು' ಕಥೆಯು ಇಂತಹ ವಿಚಾರಗಳ ಸುತ್ತಾ ಕೇಂದ್ರಿಕೃತವಾಗಿದೆ.

ಚಂದ್ರೇಗೌಡನು ತೋಟದ ಕೆಲಸಗಾರನಾದ ನಿಂಗನಿಗೆ ಮಂಜಿಯ ಜೊತೆ ಮದುವೆ ಮಾಡಿಸಿರುತ್ತಾನೆ. ಮಂಜಿಯು ನಿಂಗನ ಜೊತೆ ಮನಸ್ತಾಪವಾದಾಗಲೆಲ್ಲಾ ಬಂದು

ಚಂದ್ರೇಗೌಡನ ಬಳಿ ದೂರನ್ನು ಹೇಳುತ್ತಿರುತ್ತಾಳೆ. ಆರಂಭದಲ್ಲಿ ಚಂದ್ರೇಗೌಡನಿಗೆ ಮಂಜಿಯ ಮಾತು ವಿಚಿತ್ರವೆನಿಸುತ್ತಿರುತ್ತದೆ. ಆ ಮಂಜಿಯು "ನಿಂಗನ ಕುಡಿತದ ಬಗ್ಗೆ, ಅತಿಕಾಮುಕತೆಯ ಬಗ್ಗೆ ದೂರು ಹೇಳುವವಳು. ಬೆಳ್ಳನೆಯ ಮುಖದ, ಕೆಂಪು ಬಣ್ಣದ, ಎರಡು ಮೂಗುಬೊಟ್ಟು ಇಟ್ಟುಕೊಂಡ ಪುಟ್ಟ ಸುಂದರಿ; ಚಂದ್ರಪ್ಪನ ಎಳೇ ಮಗುವಿನ ತರಹ ಕಂಬದ ಮರೆಯಲ್ಲಿ ನಿಂತು 'ಅವನಿಗೆ ಹೇಳ್ರಿ ಅಪ್ಪ, ಮೈತೊಳಕೊಳ್ಳಾಕಿಲ್ಲ. ವಾಸನೆ ಹೋಡೀತಾನೆ' ಅನ್ನುವಳು. ಅವಳು ಆಗ ನಗುತ್ತಿದ್ದಳೋ ಅಳುತ್ತಿದ್ದಳೋ? ನಿಂಗನಿಗೆ ಮೈತೊಳೆದುಕೊಳ್ಳಲು ಹೇಳುವುದು ಹೇಗೆ? ಆತ ಏನೆಂದುಕೊಳ್ಳುತ್ತಾನೆ?"[೨] ಎಂಬ ಸಂಶಯ ಚಂದ್ರೇಗೌಡನಿಗೆ ಕಾಡುತ್ತಿರುತ್ತದೆ. ಹೀಗಿರುವಾಗ ಕಾಲಕ್ರಮೇಣ ಹೆಂಡತಿಯಾದ ರತ್ನಮ್ಮಳ ವರ್ತನೆಯಿಂದ ಚಂದ್ರೇಗೌಡನು ಬೇಸತ್ತಿರುತ್ತಾನೆ. ಅದು ವಿಕೋಪಕ್ಕೆ ಹೋಗಿ, ಚಂದ್ರೇಗೌಡನು ವಿವೇಕವನ್ನು ಕಳೆದುಕೊಳ್ಳುತ್ತಾನೆ. ಕುಡಿದು ವಿಚಿತ್ರವಾಗಿ ನಡೆದುಕೊಳ್ಳುತ್ತಿದ್ದ ಆತನಿಗೆ ಮಂಜಿಯು ಶಾಲನ್ನು ಹೊದಿಸುತ್ತಾಳೆ. 'ಅಪ್ಪಾ?' ಎಂದು ಹೇಳುತ್ತಾ ಅವನನ್ನು ಸಂತೈಸಲು ಹತ್ತಿರ ಬರುತ್ತಾಳೆ "ಅವಳ ಮುಖ ಹಿಡಿದು, ಸೊಂಟ ಬಳಸಿ ಮೊಂಬತ್ತಿ ಊದಿದರು. ಹೊರಗೆ. ಒಳಗೆ ಕತ್ತಲು. ಕೊರೆಯುವ ಚಳಿ. ನೆಲಕ್ಕೆ ಬಿದ್ದು ಬೆತ್ತಲೆ ಮಗುವಿಗೆ ಬಟ್ಟೆ ಉಗುಚುವಂತೆ, ಬಟ್ಟೆ ಕಳಚಿದರು. ಬೆಚ್ಚಗಿದೆ, ಎಲ್ಲ ಬೆಚ್ಚಗಿದೆ, ನಚ್ಚಗಿದೆ, ಖುಷಿಯಾಗಿದೆ, ಆತ್ಮಕ್ಕೆ ಕೂಡ ಹಿತವಾಗಿದೆ, ವಿವೇಕ ಕೂಡ ರೋಮಾಂಚಿತವಾಗುತ್ತಿದೆ, ಎಂದರು. ಮಂಜಿ ಏನನ್ನೂ ತಿಳಿಯದವಳಂತೆ, ಆಲಿಂಗನದಲ್ಲಿ ಪುಲಕಿತವಾಗುವ ನಾಯಿ ಜೋಸಿಯಂತೆ ಆನಂದಿಸತೊಡಗಿದಳು.

'ಮಂಜೀ' ಎಂದರು ನಡುಗುತ್ತಾ ಅವಳ ಕಾಲುಗಳ ನಡುವೆ ಕ್ರಿಯಶೀಲರಾಗಿ,

'ಏನಪ್ಪ?'

'ಅಪ್ಪ ಅನ್ನಬೇಡ'

'ನೋವು, ಇಲ್ಲ, ಇಲ್ಲ, ನೋವು.'

'ನೋವಾ ಮಂಜೀ?'

'ಇಲ್ಲ.'

ಭ್ರಷ್ಟನೊಬ್ಬ ಅಪ್ಪಿಕೊಂಡಾಗ ಬೆಂಕಿಯಲ್ಲಿ ಬಿದ್ದಂತೆ ಆಡುತ್ತಿದ್ದ ಚಂದ್ರಪ್ಪ ಕತ್ತಲೆಯಲ್ಲಿ, ಚಳಿಯ ಬಂಧನದಲ್ಲಿ ..........ಮಂಜಿಗೆ ಕತೆ ಹೇಳಬೇಕೆನ್ನಿಸಿತು. ಕನಸಿನ ಕತೆ ಹೇಳಬೇಕೆನ್ನಿಸಿತು. ಇಲ್ಲ, ಆಕೆ ಆಗಲೇ ಎದ್ದು ನಗುತ್ತಿದ್ದಳು. ಕೊರಳನ್ನಪ್ಪಿ ಪ್ರೀತಿಸುತ್ತಿದ್ದಳು."[೩]

ಮಂಜಿಯ ವರ್ತನೆ, ಚಂದ್ರಪ್ಪನ ಮಾತುಗಳು ವರ್ಗ ಸಂಬಂಧಗಳು ದೈಹಿಕ ಸಂಬಂಧಗಳಾಗಿ ಮಾರ್ಪಡುವ ರೀತಿಯನ್ನು ತೋರಿಸುತ್ತವೆ. ಚಂದ್ರಪ್ಪನಿಗೆ ಸೇಡು ಇದ್ದದ್ದು ಆತನ ಹೆಂಡತಿಯ ಮತ್ತು ರಾಜಕಾರಣಿಯ ಸಂಬಂಧದ ನಡುವೆ. ಆದರೆ

ಅದನ್ನು ದೈಹಿಕವಾಗಿ ತೀರಿಸಿಕೊಂಡಿದ್ದು ನಿಂಗನ ಹೆಂಡತಿ ಮಂಜಿಯ ಜೊತೆ. 'ಅಪ್ಪ' ಎನ್ನುವ ಮಾತು ತಂದೆ–ಮಗಳ ಸಂಬಂಧವನ್ನು ಹೇಳಿದರೂ ದುಡಿಯುವ ವರ್ಗ ಮಾಲೀಕನನ್ನು ಸಂಬೋಧಿಸುವ ಪದವಾಗಿದೆ. ಮಂಜಿಯೂ ಚಂದ್ರಪ್ಪಗೌಡನನ್ನು 'ಅಪ್ಪ' ಎಂದು ಸಂಬೋಧಿಸುವಾಗ ಅದರ ಅರ್ಥದ ಬಗ್ಗೆ ಚಂದ್ರಪ್ಪಗೌಡನಿಗೆ ಗೊತ್ತಿದ್ದು ಅದನ್ನು ಪುನರುಚ್ಚಿಸಬಾರದೆಂದು ಹೇಳುತ್ತಾನೆ. ಮಾಲೀಕನ ಜೊತೆ ಅನಿವಾರ್ಯತೆಗಿಂತ ಅವನ ಮೇಲಿನ ಪ್ರೀತಿಯಿಂದ ಮಂಜಿ ದೈಹಿಕವಾಗಿ ಜೊತೆಯಾಗುತ್ತಾಳೆ. ನಾಯಿಯಂತೆ ಆನಂದವನ್ನು ಅನುಭವಿಸುತ್ತಾಳೆ. ಅದು ತನ್ನ ಕರ್ತವ್ಯದ ಭಾಗವೆಂದೇ ತಿಳಿಯುತ್ತಾಳೆ. ಆ ಸಂದರ್ಭದಲ್ಲಿ ನಿಂಗನು ಅವಳ ಮನಸ್ಸಿನಲ್ಲಿ ಮೂಡುವುದಿಲ್ಲ. ಚಂದ್ರಪ್ಪಗೌಡನೇ ಆ ಕ್ಷಣದ ಜಗತ್ತು ಎಂದು ಭಾವಿಸುವ ಪಾತ್ರವಾಗಿ ಮಂಜಿ ಕಾಣುತ್ತಾಳೆ. ಈ ಸಂದರ್ಭದಲ್ಲಿ ಚಂದ್ರಪ್ಪಗೌಡ ಮತ್ತು ಮಂಜಿಯ ನಡುವಿನ ಸಂಬಂಧದಲ್ಲಿ ನೈತಿಕತೆ ಅನೈತಿಕತೆಯ ಪ್ರಶ್ನೆಗೆ ಅವಕಾಶವಿಲ್ಲ. ಸಹಜವಾದ ಒಪ್ಪಿತ ಲೈಂಗಿಕ ಕ್ರಿಯೆಯಾಗಿದೆ.

ವರ್ಗ ಸಂಬಂಧಗಳು ಹದಗೆಡುವಲ್ಲಿ ಮಾಲೀಕರ ಮತ್ತು ಕಾರ್ಮಿಕರ ನಡವಳಿಕೆಗಳು ಅತಿ ಮುಖ್ಯವಾಗಿರುತ್ತವೆ. ಅದರಲ್ಲೂ ಗಂಡು–ಹೆಣ್ಣು ದುಡಿಯುವ ವಾತಾವರಣವಂತೂ ಸೂಕ್ಷ್ಮದಿಂದ ಕೂಡಿರುತ್ತದೆ. ಅವರುಗಳ ನಡುವಿನ ಸಂಬಂಧ ಅರೋಗ್ಯಕರವಾಗಿದ್ದರೆ ಯಾವುದೇ ಅನಾಹುತಗಳು ಜರುಗಲಾರವು. ಅವು ಕೆಲವೊಮ್ಮೆ ದುಡಿಮೆಯ ಸಂಬಂಧ ತಪ್ಪಿದ್ದರೆ ವ್ಯಕ್ತಿಯ ವ್ಯಕ್ತಿತ್ವದ ಮೇಲೆ ಬರೆ ಎಳೆದಂತಾಗುತ್ತದೆ. ಅದು ಮಾಲೀಕನಿಗೆ ಆಗಬಹುದು ಅಥವಾ ಕಾರ್ಮಿಕನಿಗೆ ಆಗಬಹುದು ಸಮಸ್ಯೆಗಳಂತೂ ತಲೆದೋರುತ್ತವೆ. ಈ ನಿಟ್ಟಿನಲ್ಲಿ ಲಂಕೇಶರ 'ವಾಸ್ತವ' ಕಥೆಯು ಅತಿ ಪ್ರಮುಖವೆನಿಸುತ್ತದೆ.

'ವಾಸ್ತವ' ಕಥೆಯಲ್ಲಿನ ವನಜಾಳ ವಿಚಾರಗಳಲ್ಲಿ ಅತಿಶಯೋಕ್ತಿ, ರಂಜನೀಯ ವರ್ಣನೆಗಳು ಹೆಚ್ಚಾಗಿ ಕಂಡುಬರುತ್ತವೆ. ವಾಣಿಜ್ಯ ತೆರಿಗೆಯಲ್ಲಿ ಕೆಲಸ ಮಾಡುವ ಆಕೆ ಮೇಲಾಧಿಕಾರಿಗಳ ವಾಂಛಲ್ಯಗಳ ಬಗ್ಗೆ ಹೇಳುತ್ತಾಳೆ. ಪ್ರಸಾದ್ ಎಂಬ ಡೆಪ್ಯೂಟಿ ಕಮಿಷನರ್ ಮಾತ್ರ ಸುಸಂಸ್ಕೃತ ಮನುಷ್ಯ. ಗಟ್ಟಿಯಾಗಿ ಮಾತನಾಡದ ದಕ್ಷ, ಪ್ರಾಮಾಣಿಕ ಅಧಿಕಾರಿ ಎಂದು ಹೇಳುತ್ತಾಳೆ. ಮುಂದುವರೆದಂತೆ ಆತನು "ನನ್ನನಾಗಲಿ, ಇತರೆ ಹೆಂಗಸರನ್ನಾಗಲಿ ಕಣ್ಣೆತ್ತಿ ನೋಡಿದವರಲ್ಲ. ನಮ್ಮ ಆಫೀಸು ಯಾವ ತರಹದ್ದು ಗೊತ್ತಲ್ಲ. ಚಿಕ್ಕಪೇಟೆಯ ಶೆಟ್ಟರನ್ನು ಒಂದ್ಸಲ ಗದರಿಸಿದರೆ ಲಕ್ಷಾಂತರ ತೆರಿಗೆ ಆಫೀಸಿಗೆ, ಜೇಬುಗಳಿಗೆ ಸುರಿದುಬಿಡುತ್ತೆ. ನಮ್ಮ ಬಾಸ್ ಪ್ರಸಾದ್ ಒಮ್ಮೆಯೂ ಜೋರು ಮಾಡಿದವರಲ್ಲ; ಲಂಚಕ್ಕೆ ಕೈವೊಡ್ಡಿದವರಲ್ಲ. ನಮ್ಮನ್ನೆಲ್ಲ ಒಡಹುಟ್ಟಿದವರಂತೆ ನೋಡಿಕೊಳ್ಳುತ್ತಿದ್ದರು;"[೧೪] ಎನ್ನುತ್ತಾಳೆ. ಒಮ್ಮೆ ಪ್ರಸಾದ್ ಬಾಸ್ ಆಕೆಯನ್ನು ಮನೆಯಲ್ಲಿ ಕಾರ್ಯವಿದೆಯೆಂದು ಆಹ್ವಾನಿಸುತ್ತಾನೆ. ಆನಂತರದಲ್ಲಿ ಪ್ರಸಾದ್‌ನ ಹೆಂಡತಿ ಅವಳಿಗೆ ಸತ್ಕಾರವನ್ನು ಮಾಡುತ್ತಾಳೆ. ಅಂತಿಮವಾಗಿ

"ಹಾಸಿಗೆ ಸಿದ್ದವಾಗಿದೆ" ಎಂದು ಪ್ರಸಾದ್ ಹೇಳಿದರೋ ಅವರ ಹೆಂಡತಿ ಹೇಳಿದರೋ ಗೊತ್ತಿಲ್ಲ"[೧೫] ಎಂದು ಪ್ರಸಾದ್ ವ್ಯಕ್ತಿತ್ವ, ಆಡಳಿತದ ವೈಖರಿ, ಆನಂತರದಲ್ಲಿ ವನಜಾಳನ್ನು ಹಾಸಿಗೆಗೆ ಆಹ್ವಾನಿಸುವುದನ್ನು ಹೇಳಿ, ಆಕೆ ಒಪ್ಪದಿದ್ದಾಗ ಅವಳನ್ನು ಡಿಸ್‌ಮಿಸ್ ಮಾಡಲು ಯೋಚಿಸಿದ ರೀತಿಯನ್ನು ಹೇಳುತ್ತಾಳೆ. ವನಜಾಳ ಎಲ್ಲಾ ಮಾತುಗಳು ಮತ್ತು ನಡವಳಿಕೆಗಳು ಅವಳ ಬಗ್ಗೆಯೇ ಸಂಶಯ ಬರುವಂತೆ ಆಗುತ್ತವೆ. ಆಕೆಯು ಮೇಲಾಧಿಕಾರಿಯ ಮೇಲೆ ಸಲ್ಲದ ಆರೋಪವನ್ನು ಹೊರಿಸುತ್ತಾಳೆ. ಆಕೆಯೇ ಹೇಳುವಂತೆ " ಒಂದು ಸಾರಿಯೂ ಹೆಣ್ಣನ್ನು ಕಣ್ಣೆತ್ತಿ ನೋಡದವನು, ಎಲ್ಲರನ್ನು ಒಡಹುಟ್ಟಿದ್ದವರಂತೆ ನೋಡಿಕೊಳ್ಳುತ್ತಿದ್ದ" ಸಂದರ್ಭಗಳೆಲ್ಲವೂ ಮೇಲಾಧಿಕಾರಿಯ ಉನ್ನತ ಸ್ಥಾನಮಾನಗಳನ್ನು ತೋರಿಸುವ ಸಂದರ್ಭದಲ್ಲಿ ಆಕೆಯನ್ನು 'ಹಾಸಿಗೆಗೆ ಕರೆದನು' ಎಂಬ ಮಾತು ಮತ್ತು ಒಪ್ಪದಿದ್ದಾಗ ಆಕೆಯನ್ನು 'ಡಿಸ್‌ಮಿಸ್ ಮಾಡಲು ಫೈಲ್' ಸಿದ್ಧಪಡಿಸಿದ ಎನ್ನುವ ವಿಚಾರವನ್ನು ಗಮನಿಸಿದಾಗ ಎರಡನೆಯ ಆಕೆಯ ಮಾತು ನಿಜವಾಗುತ್ತದೆ. ಡಿಸ್‌ಮಿಸ್ ಆಗುತ್ತದೆ. ಆದರೆ ಆಕೆಯು ಕೆಲಸದಿಂದ ಡಿಸ್‌ಮಿಸ್ ಆಗಲು ಪ್ರಸಾದ್ ಅಧಿಕಾರಿಯು ಕಾರಣವಲ್ಲ. ಅವಳ ಕೆಲಸದ ವೈಖರಿಯಿಂದ ಡಿಸ್‌ಮಿಸ್ ಆಗಲು ಕಾರಣವಾಗುತ್ತದೆ. ವೃಥಾ ಅರೋಪ ಮಾತ್ರ ಆ ಅಧಿಕಾರಿಯ ಮೇಲೆ ಬರುವಂತೆ ಮಾಡುತ್ತಾಳೆ. ಆಧುನಿಕ ನಗರ ಮತ್ತು ಗ್ರಾಮೀಣ ಭಾಗದಲ್ಲಿ ಕೆಲಸ ನಿರ್ವಹಿಸುವ ಉನ್ನತವರ್ಗದವರ ಮೇಲೆ ಆರೋಪಗಳು ವ್ಯಕ್ತಿತ್ವ ಮತ್ತು ವೃತ್ತಿಯ ಮೇಲೆ ಸಹಿಸಲು ಅಸಾಧ್ಯವಾದ ಧಕ್ಕೆಯನ್ನು ತರುತ್ತವೆ. ದುಡಿಯುವ ವರ್ಗದ ಪರಿಸರದಲ್ಲಿ ಹೆಣ್ಣು-ಗಂಡುಗಳ ನಡುವಿನ ಸಂಬಂಧಗಳು ಹೆಚ್ಚಿನ ಮಹತ್ವವನ್ನು ಪಡೆದುಕೊಳ್ಳುತ್ತವೆ. 'ವರ್ಗ ಸಂಬಂಧ'ಗಳು ಬಲವಂತವಾಗಿ ಮುಂದುವರೆದರೆ ಕಳಂಕಗಳು ಸಾಮಾನ್ಯವಾಗುತ್ತವೆ. ಎಂಬುದಕ್ಕೆ 'ವಾಸ್ತವ' ಕಥೆ ನಿದರ್ಶನವಾಗಿದೆ. ಕೆಲವು ವಿಲಕ್ಷಣ ಮನಸ್ಸಿನ ಸ್ತ್ರೀ-ಪುರುಷರ ಕಾರಣಕ್ಕಾಗಿ ಬಹುಪಾಲು ಉನ್ನತ ಉದ್ಯೋಗದಲ್ಲಿನ ವ್ಯಕ್ತಿಗಳು ತಮ್ಮದಲ್ಲದ ತಪ್ಪಿಗೆ ಶಿಕ್ಷೆಯನ್ನು ಅನುಭವಿಸುತ್ತಾರೆ. ಗ್ರಾಮೀಣ ಭಾಗಕ್ಕಿಂತ ಹೆಚ್ಚಾಗಿ ನಗರದ ಪ್ರದೇಶದಲ್ಲಿನ ದುಡಿಯುವ ವರ್ಗಕ್ಕೆ ಇದರ ಪರಿಣಾಮ ಹೆಚ್ಚಾಗಿರುತ್ತದೆ.

ಗ್ರಾಮೀಣ ಭಾಗದಲ್ಲಿ ವರ್ಗ ಸಂಬಂಧಗಳು ಒಪ್ಪಿತ ಸಂಬಂಧಗಳಾಗಿ ಇರುತ್ತವೆ. ಇನ್ನು ಕೆಲವು ಸನ್ನಿವೇಶಗಳಲ್ಲಿ ಇಂತಹ ಸಂದರ್ಭಗಳು ಅಷ್ಟೇನೂ ಮಹತ್ವವನ್ನು ಪಡೆಯುವುದಿಲ್ಲ. ಜೊತೆಗೆ ಅರೋಗ್ಯಕರವಾದ ಸಂಬಂಧಗಳು ವರ್ಗ ಸಮಾಜದಲ್ಲಿ ಇರುತ್ತದೆ. ಇದಕ್ಕೆ ಉತ್ತಮ ನಿರ್ದಶನವೆಂದರೆ "ಉಲ್ಲಂಘನೆ " ಕಥೆ.

ಕೃಷ್ಣಸ್ವಾಮಿ ಮೇಲ್ವರ್ಗದ ಜಮೀನುದಾರ. ಭರಮನು ಕೃಷ್ಣಸ್ವಾಮಿಯ ಬಳಿ ಕೆಲಸ ಮಾಡುವ ಕೂಲಿಕಾರ. ಭರಮನ ಹೆಂಡತಿ ಕೃಷ್ಣಸ್ವಾಮಿಯ ಮನೆಯಲ್ಲಿ ಕೆಲಸ ಮಾಡುವ

ಆಳು. ದುಡಿಯುವ ವರ್ಗದ ಸ್ವಾಮಿ ನಿಷ್ಠೆ ಹಿಂದಿನಿಂದಲೂ ಇದೆ. ಇಂದು, ಮುಂದೆಯೂ ಇರುತ್ತದೆ. ಪಾತ್ರಗಳು, ಕೆಲಸದ ರೀತಿ, ಸ್ಥಳಗಳು ಬದಲಾವಣೆಯನ್ನು ಪಡೆಯಬಹುದು. ಆದರೆ ಸಂಬಂಧಗಳು ಹೊಸ ರೂಪವನ್ನು ಪಡೆದು ಮುಂದುವರೆಯುತ್ತಿರುತ್ತವೆ. ಅದು ಗ್ರಾಮೀಣ ಭಾಗದಲ್ಲಿ ಇರಬಹುದು, ನಗರ ಪ್ರದೇಶದಲ್ಲಿ ಇರಬಹುದು, ಒಟ್ಟಾರೆಯಾಗಿ 'ಕಾರ್ಮಿಕನ ನಿಯತ್ತು; ದುಡಿಮೆ ಮಾಲೀಕನ ಸಂಪತ್ತು' ಎಂಬ ಘೋಷ ವಾಕ್ಯದಂತೆ ಇರುತ್ತದೆ. ಕೃಷ್ಣಸ್ವಾಮಿಯ ತೋಟದಲ್ಲಿ ಆಗುತ್ತಿದ್ದ ಕಳ್ಳತನವನ್ನು ತಪ್ಪಿಸಿದವನು ಭರಮ. ಆ ಕಾರಣದಿಂದ ಕೃಷ್ಣಸ್ವಾಮಿಯ ನಿಷ್ಠಾವಂತ ಕೆಲಸಗಾರನಾಗುತ್ತಾನೆ. ಕೃಷ್ಣಸ್ವಾಮಿಯು ಕೂಡ ಭರಮನ ಬಗ್ಗೆ ಅಭಿಮಾನ. ಆದ್ದರಿಂದಲೇ ಕೃಷ್ಣಸ್ವಾಮಿಯವರು ಪ್ರೀತಿಯಿಂದ 'ದೊಡ್ಡ' ನೆಂದು ಕರೆಯುತ್ತಿರುತ್ತಾರೆ. ನಾಗರಾಜನು ಭರಮ ಮತ್ತು ಹನುಮಕ್ಕಳ ಮಗ. ಕೃಷ್ಣಸ್ವಾಮಿಗೂ ನಾಗರಾಜನನ್ನು ಕಂಡರೆ ಅಕ್ಕರೆ. ಅವನನ್ನು 'ರಾಜ'ನೆಂದೇ ಸಂಬೋಧಿಸುತ್ತಿರುತ್ತಾರೆ. ಕಥೆ ' ನಿರೂಪಕ ನಾಗರಾಜನ ರೂಪದಲ್ಲಿಯೇ ಮುಂದುವರೆಯುತ್ತದೆ. ಇಡೀ ಕಥೆಯು ಕೃಷ್ಣಸ್ವಾಮಿಯ ಜೀವನದ ಸುತ್ತ ಕೇಂದ್ರಿಕೃತವಾಗಿರುತ್ತದೆ.

ನಾಗರಾಜನ ಶಿಕ್ಷಣದ ಬಗ್ಗೆ ತಂದೆ-ತಾಯಿಗಳ ಕಾಳಜಿಯ ಜೊತೆಗೆ ಕೃಷ್ಣಸ್ವಾಮಿಯ ಕಾಳಜಿಯು ಅತಿಮುಖ್ಯವೆನಿಸುತ್ತದೆ. ಯಜಮಾನಿಕೆಯ ವರ್ಗ ದುಡಿಯುವ ವರ್ಗದ ಮೇಲೆ ಇಡುವ ಪ್ರೀತಿ-ವಿಶ್ವಾಸಗಳು ಎರಡು ವರ್ಗಗಳ ಸಂಬಂಧಗಳನ್ನು ಗಟ್ಟಿಗೊಳಿಸುತ್ತವೆ. ಕೃಷ್ಣಸ್ವಾಮಿಯು ಆನಂದಪುರದ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿರುವ ನಾಗರಾಜನ ಬಗ್ಗೆ, ಅವನ ಶಿಕ್ಷಣದ ಬೆಳವಣಿಗೆಯ ಬಗ್ಗೆ ಕಾಳಜಿಯನ್ನು ತೋರಿಸುತ್ತಾನೆ. ಚೆನ್ನಾಗಿ ಓದಿ ಮುಂದೆ ಬರಬೇಕೆಂದು ಆಶಿಸುತ್ತಾನೆ. ಅನುಕಂಪಕ್ಕಿಂತ ಕಾಳಜಿ ಪ್ರಧಾನವಾಗುತ್ತದೆ. ಕಥೆಯ ಮುಂದುವರೆದ ಭಾಗದಲ್ಲಿ ಎರಡು ಅತಿ ಮುಖ್ಯ ಘಟನೆಗಳು ಜರುಗುತ್ತವೆ. ಭೂ ಸುಧಾರಣೆಯ ಹೆಸರಿನಲ್ಲಿ ವರ್ಗ ಸಂಘರ್ಷವನ್ನು ಹುಟ್ಟು ಹಾಕಲು ಹೋಗಿ ಕೆಂಚನು ವಿಫಲನಾಗುತ್ತಾನೆ. ಕೃಷ್ಣಸ್ವಾಮಿಯು ಸಾಗುವಳಿ ಮಾಡುವ ವ್ಯಕ್ತಿಗಳಿಗೆ ಭೂಮಿಯನ್ನು ಹಿಂತಿರುಗಿಸುತ್ತಾನೆ. ಭೂ ಸುಧಾರಣೆಯ ಹೆಸರಿನಲ್ಲಿ ಗಲಾಟೆ ಮಾಡಲು ಬಂದಂತಹ ಕೆಂಚನಿಗೆ ಮುಖಭಂಗವಾಗುತ್ತದೆ. ಹಾಗೆಯೇ ಅಸ್ಪೃಶ್ಯತೆಯ ವಿರುದ್ಧ ಚಳುವಳಿ ಆರಂಭಿಸಿದ್ದ ರಾಜಣ್ಣನು, ಬ್ರಾಹ್ಮಣನಾದ ಕೃಷ್ಣಸ್ವಾಮಿಯ ಪೂಜೆ ಪುನಸ್ಕಾರಗಳನ್ನು ತನ್ನ ಸಂಗಡಿಗರ ಜೊತೆ ಸೇರಿ ಅವಹೇಳನ ಮಾಡುತ್ತಾನೆ. ಈ ರೀತಿಯಲ್ಲಿಯೇ ಕೆಲವು ಆಂದೋಲನಗಳು ಸೈದ್ಧಾಂತಿಕ ಅಡಿಯಲ್ಲಿ ಹೋರಾಟ ಮಾಡದೆ ಇನ್ನೊಂದು ವರ್ಗ ಅಥವಾ ಅವರ ರೀತಿನೀತಿಗಳ ಮೇಲೆ ಅಪಹಾಸ್ಯದಿಂದ ಕೂಡಿದ ಸೇಡನ್ನು ತೀರಿಸಿಕೊಳ್ಳಲು ಹೊರಟರೆ ಅವುಗಳ ನಿಜವಾದ ತಾತ್ವಿಕ ಚಿಂತನೆಗಳು ಹಳ್ಳ ಹಿಡಿಯುತ್ತವೆ.

ಭಾರತದಂತಹ ದೇಶದಲ್ಲಿ ಅಸ್ಪೃಶ್ಯತೆಯ ಆಂದೋಲನಗಳು ಮೇಲ್ವರ್ಗದ ನಡುವೆ ಘರ್ಷಣೆಯುಂಟು ಮಾಡುತ್ತಾ, ತಮ್ಮ ನಿಜವಾದ ಹೋರಾಟಗಳು ದಿಕ್ಕು ತಪ್ಪುವಂತೆ

ಮಾಡುವಲ್ಲಿ ರಾಜಣ್ಣನ ಮನಸ್ಸಿನವರು ಹೆಚ್ಚಾಗಿರುತ್ತಾರೆ. ಮೇಲ್ವರ್ಗ ಮತ್ತು ಕೆಳವರ್ಗ ಜಾತಿಯ ಚೌಕಟ್ಟನ್ನು ಮೀರಿ ದುಡಿಯುವ ವರ್ಗಕ್ಕೂ ಸಮಸ್ಯೆಯನ್ನು ಉಂಟುಮಾಡುತ್ತದೆ ಎಂಬುದನ್ನು ಈ ಕಥೆ ತೋರಿಸುತ್ತದೆ.

ನಾಗರಿಕ ಸಮಾಜದಲ್ಲಿ ಆಗುವ ಅವಾಂತರಗಳು ಸಾಕಷ್ಟು ಇರುತ್ತವೆ. ನಗರೀಕರಣದ ದುಡಿಮೆಯ ಜಗತ್ತಿನಲ್ಲಿ 'ನೈತಿಕ' ಮತ್ತು 'ಅನೈತಿಕ' ಪದಗಳಿಗೆ ಅರ್ಥವೂ ಇಲ್ಲ. ಅದರ ಅವಶ್ಯಕತೆಯೂ ಇಲ್ಲ. ಸಮಾಜದಲ್ಲಿನ ಒಬ್ಬರ ದೃಷ್ಟಿಕೋನದ 'ನೈತಿಕತೆ' ಎಂಬ ಸಂದರ್ಭಗಳು ಮತ್ತೊಬ್ಬರ ದೃಷ್ಟಿಕೋನದಲ್ಲಿ 'ಅನೈತಿಕತೆ'ಯನ್ನು, ಹಾಗೆಯೇ ಮತ್ತೊಬ್ಬರ 'ಅನೈತಿಕತೆ' ವಿಚಾರಗಳು ಮಗದೊಬ್ಬರ ದೃಷ್ಟಿಕೋನದಲ್ಲಿ 'ನೈತಿಕತೆ' ಎಂಬ ವಿಚಾರಗಳನ್ನು ಕೊಡುತ್ತವೆ. ಈ ಅಂಶಗಳು ವರ್ಗಾಧಾರಿತ ಸಮಾಜದಲ್ಲಿನ ಸಂಬಂಧಗಳಿಗೆ ತಮ್ಮದೇ ಆದ ವ್ಯಾಖ್ಯಾನ ನೀಡುತ್ತವೆ. ಈ ದೃಷ್ಟಿಕೋನದಲ್ಲಿ 'ಮಂಜುಕವಿದ ಸಂಜೆ' ಕಥೆಯನ್ನು ಅಧ್ಯಯನ ಮಾಡಿದಾಗ ಕೆಲವೊಂದು ಅಂಶಗಳನ್ನು ಗುರುತಿಸಬಹುದು. ಹಳ್ಳಿಯಲ್ಲಿನ 'ಹಾದರತನ' ಪದ ನಗರ ಪ್ರದೇಶದಲ್ಲಿ 'ಲಿವಿಂಗ್ ರಿಲೇಶನ್ ಶಿಫ್' ಎಂಬ ಅರ್ಥವನ್ನು ತಂದು ಕೊಡುತ್ತದೆ. ಗ್ರಾಮೀಣ ಬದುಕಿನಲ್ಲೂ ತಮ್ಮ ಅಸ್ತಿತ್ವಕ್ಕಾಗಿ ದುಡಿಯುವ ವರ್ಗ ಯಜಮಾನಿಕೆ ವರ್ಗದವರ ಜೊತೆ ದೈಹಿಕ ಸಂಬಂಧವನ್ನು ಇಟ್ಟುಕೊಂಡಿದ್ದರೆ ಅದು ಸಾಮಾನ್ಯವಾಗಿ ಗ್ರಾಮೀಣ ಭಾಗದಲ್ಲಿ ರಾದ್ಧಾಂತವನ್ನೆ ತರುತ್ತಿದ್ದವು. ನಗರ ಪ್ರದೇಶಗಳಲ್ಲೂ ಇಂತಹ ಸನ್ನಿವೇಶಗಳು ಸಹಜವಾಗಿ ಬಂಡವಾಳ ಶಾಹಿ ಮತ್ತು ಸರ್ಕಾರದ ಇಲಾಖೆಗಳಲ್ಲಿ ಕಂಡುಬರುತ್ತವೆ. ಅದನ್ನು 'ವಿವಾಹೇತರ ಸಂಬಂಧ'ವೆಂತಲೂ, 'ಅನಿವಾರ್ಯತೆಯ ಸಂಬಂಧ'ವೆಂತಲೂ ಕರೆಯಲಾಗುತ್ತದೆ. ಇಂತಹ ಸಂಬಂಧಗಳು ಬಂಡವಾಳ ಶಾಹಿ ಜಗತ್ತಿನ ಬೆಳವಣಿಗೆ ಮತ್ತು ವಿನಾಶಕ್ಕೂ ಕಾರಣವಾಗುತ್ತವೆ ಎಂಬುದನ್ನು ಕಥೆಯ 'ಪ್ರಭುದೇವ ಕಂಪನಿಯ ಮಾಲೀಕನ' ಸುತ್ತಾ ಹೆಣೆದಿರುವ ಆ ಕಥೆಯಲ್ಲಿ ಅರವತ್ತರ ವಯಸ್ಸಿನ ವ್ಯಕ್ತಿಯೂ ಕಾಮ ಜಗತ್ತಿನ ಚಪಲದಿಂದ ಹೊರಬರಲಾರದೆ ನರಳುತ್ತಾನೆ. ಕಂಪನಿಯ ಯಜಮಾನನಿಗೆ 'ಕಚ್ಚೆ, ಇಚ್ಚೆಗಳು' ಮಿತಿಯಲ್ಲಿ ಇದ್ದಾಗ ಮಾತ್ರ ಕಂಪನಿಗಳ ಬೆಳವಣಿಗೆಯ ಕಡೆ ಗಮನ ಹರಿಸಲು ಸಾಧ್ಯವಾಗುತ್ತದೆ. ತಮ್ಮ ಒಡನಾಡಿ ದುಡಿಯುವ ವರ್ಗದಲ್ಲಿ ದೇಹ ಸಂಬಂಧಗಳನ್ನು ಬೆಳೆಸಿದರೆ ಅದು ಕಂಪನಿಯ ಬೆಳವಣಿಗೆಗೆ ಕಂಟಕವಾಗಬಹುದು ಎಂಬುದಕ್ಕೆ ಪ್ರಭುದೇವನ ನಡವಳಿಕೆಗಳು ಕಾರಣವಾಗುತ್ತವೆ. ಆತನ ಹೆಣ್ಣಿನ ಮೇಲಿನ ವ್ಯಾಮೋಹ ಮತ್ತು ಸಂಬಂಧಗಳು ಕಂಪನಿಗೆ ಅಪಾಯವನ್ನು ತಂದೊಡ್ಡುತ್ತದೆ. ಪ್ರಭುದೇವನ ಅರವತ್ತನೇ ವಯಸ್ಸಿನ ಹುಟ್ಟುಹಬ್ಬವು ಆತನ 'ಲೈಂಗಿಕ ಹಗರಣ'ಕ್ಕೆ ದಾರಿ ಮಾಡಿಕೊಡುತ್ತದೆ. ಅವನ ಕಂಪನಿಯಲ್ಲಿ ಇದ್ದ 'ಹಣಕಾಸು' ಖಾಲಿಯಾಗುತ್ತದೆ. ಇದುವೇ ಒಬ್ಬ ಬಂಡವಾಳ ಶಾಹಿ ವ್ಯಕ್ತಿಗೆ ತನ್ನದೆ ಆದ ಜವಾಬ್ದಾರಿ

ತಪ್ಪಿದಾಗ ಆಗುವ ಅನಾಹುತ. ಇದು ಸಮಾಜಕ್ಕೆ ಎಚ್ಚರಿಕೆಯ ಸಂದೇಶವೂ ಕೂಡ ಆಗಿದೆ.

ಲಂಕೇಶರ ಕಲ್ಪನೆಯಲ್ಲಿ ಗ್ರಾಮೀಣ ಮತ್ತು ನಗರದ ವರ್ಗಾಧಾರಿತ ಸಮಾಜದ ಆರೋಗ್ಯಕರ ಮತ್ತು ಅನಾರೋಗ್ಯಕರ ವಿಚಾರಗಳು ಅವರ ಕಥೆಗಳಲ್ಲಿ ಮೂಡಿಬಂದಿವೆ. ಇಂತಹ ವಿಚಾರಗಳು ಅನಂತಮೂರ್ತಿಯವರ ಕಥೆಗಳಲ್ಲೂ ಕಂಡು ಬರುತ್ತವೆ.

ಜಮ್ದಿಂದಾರಿ ಪ್ರಧಾನವಾದ ಗ್ರಾಮೀಣ ಭಾಗದಲ್ಲಿನ ಗೇಣಿ ಭೂಮಿಗಾಗಿ ತಮ್ಮನ್ನೇ ಅರ್ಪಿಸಿಕೊಳ್ಳುವ ಕೆಳವರ್ಗದ ಮನಸ್ಥಿತಿಯ ಅನಾವರಣವೂ 'ಪ್ರಶ್ನೆ' ಕಥೆಯಲ್ಲೂ, ಗೇಣಿ ಪದ್ಧತಿಯ ಯಜಮಾನಿಕೆಯನ್ನು ಪರೋಕ್ಷವಾಗಿ ವಹಿಸಿಕೊಂಡು ಮುನ್ನಡೆಯುವ 'ಮೌನಿ', 'ವರ್ಗ ಸಂಬಂಧಿತ' ಅಂಶಗಳನ್ನು ಒಳಗೊಂಡ ಕಥೆಗಳಾಗಿವೆ.

ವರ್ಗ ಸಂಬಂಧಗಳಲ್ಲಿ ಆರ್ಥಿಕತೆ ಅತಿ ಮುಖ್ಯ. ಉಳಿದುದೆಲ್ಲಾ ಗೌಣ. ಅಲ್ಲಿ ಮಾನವೀಯತೆಗಿಂತ ಲಾಭ ಪ್ರಧಾನವಾಗಿ ಕಾಣುತ್ತದೆ. ಕಾಮವೂ ಕೂಡ ಒಂದು ವಿಚಾರವಾಗಿ ಆರ್ಥಿಕ ಹಿನ್ನೆಲೆಯಲ್ಲಿ ಯೋಚಿಸುವ ಯಜಮಾನಿಕೆಯಲ್ಲಿ ಕಂಡುಬರುತ್ತದೆ. ಆ ಹಿನ್ನೆಲೆಯಲ್ಲಿ ಲಚ್ಚಿ ಮತ್ತು ರಂಗನ ವಿಚಾರಗಳನ್ನು ಪ್ರಧಾನವಾಗಿಟ್ಟು ಕೊಂಡು 'ಪ್ರಶ್ನೆ' ಕಥೆ ರೂಪುಗೊಂಡಿದೆ. ಕಥೆಯು ಕೊಪ್ಪ ಎಂಬ ಚಿಕ್ಕ ಹಳ್ಳಿಯಲ್ಲಿ ನಡೆಯುತ್ತದೆ. ಲಚ್ಚಿಗೆ ವಿವಾಹವಾಗಿರುತ್ತದೆ. ಆರ್ಥಿಕವಾಗಿ ನೆಲೆನಿಲ್ಲುವ ಬಯಕೆ ಲಚ್ಚಿಯದ್ದಾಗಿರುತ್ತದೆ. ಆ ಕಾರಣದಿಂದ ಧಣಿಯ ಸ್ಥಾನದಲ್ಲಿರುವ ರಂಗನಿಗೆ ತನ್ನ ದೇಹದ ಸುಖ ನೀಡಲು ಆಹ್ವಾನಿಸುತ್ತಾಳೆ. ರಂಗನನ್ನು ಆಕೆಯು ಕತ್ತು ಓರೆಮಾಡಿ ತನ್ನ ಮಾಟವಾದ ಬಾಯಿಯಿಂದ ಗುಡಿಸಲಿಗೆ ಆಹ್ವಾನಿಸುತ್ತಾಳೆ. ಮುಂದುವರೆದು ಆಕೆಯ ಗಂಡ 'ಬೆಳಿಗ್ಗೆ ಕೆಲಸಕ್ಕೆ ಹೋಗಿರುತ್ತಾನೆ' ಎಂದೂ ಹೇಳುತ್ತಾಳೆ. ಧಣಿಗೆ ದೇಹವನ್ನು ಅರ್ಪಿಸುವುದು ಸಾಮಾನ್ಯವೆಂಬ ಮನಸ್ಸನ್ನು ಲಚ್ಚಿ ಹೊಂದಿರುತ್ತಾಳೆ. ಅಸಹಾಯಕತೆ, ಆಕರ್ಷಣೆಯ ಕಾರಣಕ್ಕೆ, ರಂಗನನ್ನು ತನ್ನ ಗುಡಿಸಲಿಗೆ ಆಹ್ವಾನಿಸುತ್ತಾಳೆ. ರಂಗನಿಗೆ ಎಣ್ಣೆ ಸ್ನಾನ ಮಾಡಿಸಲು ಮುಂದಾಗುತ್ತಾಳೆ. ಕಾಲನ್ನು ಒತ್ತುತ್ತಾಳೆ. ಮುಂದುವರೆದು " ನೀವು ಜಗಿದ ತಾಂಬೂಲ ಬಾಯಿಯಲ್ಲಿಡಿ ಎಂದಳು. ಬಾಯಿಯನ್ನು ಸ್ವಲ್ಪ ತೆರೆದು ಕೇಳಿದಳು. ನನ್ನನ್ನ ಪೂರ್ತ ಎಂಜಲು ಮಾಡಿ ಎಂದಳು. ನಿಮ್ಮ ಎಂಜಲು ನಾನು ಎಂದಳು."[೧೬] ವರ್ಗ ಸಂಬಂಧದ ಅತಿರೇಕವು ಲಚ್ಚಿ ಮತ್ತು ರಂಗನ ವಿಚಾರದಲ್ಲಿ ಆಗುತ್ತದೆ.

ಆಧುನಿಕ ಜಗತ್ತಿನ ಲೈಂಗಿಕ ಮುಕ್ತತೆಯ ಸಮಾಜದಲ್ಲಿ ಲಚ್ಚಿಯಂಥ ಮನಸ್ಸುಗಳು ಇವೆ. ರಂಗನ ವಿಚಾರದಲ್ಲಿ ದೇಹವನ್ನು ಅರ್ಪಿಸುಕೊಳ್ಳುವುದರಲ್ಲಿ ವಿಶೇಷತೆಯೇನು ಲಚ್ಚಿಗೆ ಕಾಣುವುದಿಲ್ಲ. ದೇಹವನ್ನು ನೀಡುವುದು ಸಹಜ ಪ್ರಕ್ರಿಯೆವೆನ್ನುವ ಮನಸ್ಸು ಆಕೆಯದು. ಅದಕ್ಕೆ ಅವಳ ಅಜ್ಞಾನವು ಕೂಡ ಪ್ರಮುಖ ಕಾರಣವಾಗುತ್ತದೆ. ಉಳ್ಳವರ

ಶೋಷಣೆಯ ವಿಧಗಳಲ್ಲಿ ಲೈಂಗಿಕತೆಯೂ ಒಂದು. ಲಚ್ಚಿಗೆ ಅದರಲ್ಲಿ ವಿಶೇಷತೆ ಏನೂ ಇಲ್ಲ. ಊಳಿಗಮಾನ್ಯ ಪದ್ಧತಿಯ ಕರಾಳ ಮುಖಕ್ಕೆ ದುಡಿಯುವ ವರ್ಗ ಬಲಿಯಾಗುತ್ತಲೇ ಇರುತ್ತದೆ. ಅವರಲ್ಲಿ ಇಂತಹ ಕಷ್ಟಗಳು ಸರ್ವೇಸಾಮಾನ್ಯವಾಗಿ ಕಂಡು ಬರುತ್ತವೆ. ಲಚ್ಚಿಯೂ ಕೂಡ ಅಂತಹ ಕಷ್ಟಗಳಿಂದ ಹೊರತಾಗಿಲ್ಲ. ಅವಳು " ಈ ತೋಟವೊಂದನ್ನ ನನ್ನ ಅಮ್ಮನ ನೆನಪಿಗಾದರೂ ದೊಡ್ಡಯ್ಯ ನಮ್ಮ ಹೆಸರಿಗೆ ಮಾಡಿಸಿಕೊಡಲು ಹೇಳಿ. ನಿಮ್ಮ ಹೊಟ್ಟೆ ತಣ್ಣಗಿರಲಿ."[೧೭] ಎಂದು ಅಸಹಾಯಕತೆಯಿಂದ ಕೇಳಿಕೊಳ್ಳುತ್ತಾಳೆ. ಗೇಣಿ ಪದ್ದತಿಯಲ್ಲಿ ಇದೊಂದು ದೊಡ್ಡ ಸಂಗತಿಯಾಗಿತ್ತು. ಶತಮಾನಗಳಿಂದ ವಂಶಪಾರಂಪರ್ಯವಾಗಿ ಬರುವ ಭೂ ಸಂಪತ್ತು ಅವರ ಮುಂದಿನ ತಲೆಮಾರಿಗೆ ವರ್ಗಾವಾಗುತ್ತಿದೆಯೇ ಹೊರತು ಅದು ಕಾಲಕಾಲಕ್ಕೆ ಎಲ್ಲಾ ವ್ಯಕ್ತಿಗಳಿಗೂ ಸಿಗುವುದಿಲ್ಲ. ದುಡಿಯುವ ವರ್ಗ ದುಡಿಯುತ್ತಲೇ ಇದೆ. ಅದರ ಫಲವನ್ನು ಮೇಲ್ವರ್ಗ ಅನುಭವಿಸುತ್ತಲೇ ಇದೆ. ಅದರಲ್ಲಿ ಒಂದು ಸಣ್ಣ ಪಾಲು ಭೂ ರಹಿತರಿಗೆ ಸಿಗುವುದು ಸುಲಭವಲ್ಲ. ಆಳ್ವಿಕೆ ನಡೆಸಿದ ಸರ್ಕಾರಗಳು 'ಉಳುವವನೆ ಭೂ ಒಡೆಯ'ನೆಂಬ ಕಾನೂನು ರೂಪಿಸಿದರು. ಸ್ವಲ್ಪ ಮಟ್ಟಿಗೆ ಅದರ ಪರಿಣಾಮದಿಂದ ಭೂ ರಹಿತ ದುಡಿಯುವ ವರ್ಗ ಸ್ವಲ್ಪ ಮಟ್ಟಿಗೆ ಅದರ ಲಾಭವನ್ನು ಪಡೆದರೂ ಕೂಡ ಆ ಕಾನೂನು ಸಂಪೂರ್ಣವಾಗಿ ಫಲ ನೀಡುವಲ್ಲಿ ಸೋತಿದೆ. ಲಚ್ಚಿಯಂಥ ಕುಟುಂಬ ತಲೆತಲೆಮಾರುಗಳಿಂದ ನಷ್ಟವನ್ನು ಅನುಭವಿಸುತ್ತಿದೆ. ಸಂಬಂಧಗಳು ದಿಕ್ಕು ತಪ್ಪಲು ಯಜಮಾನ್ಯ ಜಗತ್ತು ಸದಾ ತವಕಿಸುತ್ತಿದೆ. ಅವರಿಗೆ ಲಾಭ ಮಾತ್ರ ಲೆಕ್ಕಾಚಾರಗಳಾಗುತ್ತವೆಯೇ ಹೊರತು ಯಾವುದೇ ಸಾಮಾಜಿಕ ಸಮಸ್ಯೆಗಳು ಪರಿಹಾರವಾಗುವುದಿಲ್ಲ.

ಅನಂತ ಮೂರ್ತಿಯವರ 'ಮೌನಿ' ಕಥೆಯು ಅತಿ ಮುಖ್ಯವಾದ ಗೇಣಿ ಪದ್ದತಿಯು ಗ್ರಾಮೀಣ ಜಗತ್ತಿನಲ್ಲಿ ಜೀವಂತಿಕೆಯಿಂದ ಇರುವುದನ್ನು ತೋರಿಸುತ್ತದೆ. ಯಜಮಾನಿಕೆಯ ಮತ್ತೊಂದು ಭಾಗವಾಗಿ ಈ ಕಥೆಯಲ್ಲಿ ಮಠವಿದೆ. ಕುಟುಂಬದಲ್ಲಿ ವಾರಸುದಾರರಾಗಿ ವಂಶದವರು ಮುಂದುವರೆದರೆ, ಮಠದಲ್ಲಿ ಶಿಷ್ಯರು ಮುಂದುವರೆಯುತ್ತಾರೆ. 'ಮೌನಿ' ಕಥೆಯಲ್ಲಿನ ಭಾವಿಕೆರೆಯ ಕುಪ್ಪಣ್ಣಭಟ್ಟರು, ಮತ್ತು ಸೀಬಿನಕೆರೆಯ ಅಪ್ಪಣ್ಣಭಟ್ಟರು ಇಬ್ಬರೂ ಕೂಡ ಶ್ರೀ ಮಠದ ನರಸಿಂಹದೇವರ ಒಕ್ಕಲು. ಘಟ್ಟದ ಕೆಳಗಿನಿಂದ ಅಡಿಕೆ ತೋಟ ಮಾಡಲು ಬಂದವರು. 'ಆರ್ಥಿಕ ಬೆಳವಣಿಗೆಯಲ್ಲಿ ಒಬ್ಬರನ್ನು ತುಳಿದು ಬೆಳೆಯುವುದಕ್ಕಿಂತ, ತಾವು ಬೆಳೆದು ಮತ್ತೊಬ್ಬರನ್ನು ಬೆಳೆಸಿ ಬೆಳೆಯುವುದು ಅತಿ ಮುಖ್ಯವಾಗುತ್ತದೆ.' ಆದರೆ 'ಮೌನಿ'ಕಥೆಯ ಸನ್ನಿವೇಶಗಳು ಆರ್ಥಿಕ ಸಿದ್ಧಾಂತದ ವಿರುದ್ದವಾಗಿ ನಿಲ್ಲುತ್ತವೆ.

ಅಪ್ಪಣ್ಣಭಟ್ಟನು ಉತ್ತಮ ಬೆಳೆಯನ್ನು ತೆಗೆಯುವುದರ ಜೊತೆಗೆ ಕುಪ್ಪಣ್ಣ ಭಟ್ಟನ ವ್ಯವಸಾಯದ ಬೆಳವಣಿಗೆಗೆ ತೊಡರು ಹಾಕುತ್ತಾನೆ. ಕುಪ್ಪಣ್ಣನು ಆರ್ಥಿಕವಾಗಿ ಬೆಳೆಯುವ

ಬದಲು ಎಲ್ಲವನ್ನೂ ಮಠಕ್ಕೆ ಒಪ್ಪಿಸುವ ಅನಿವಾರ್ಯತೆ ಉಂಟಾಗುತ್ತದೆ. ಅಂತಿಮವಾಗಿ ಅಪ್ಪಣ್ಣಭಟ್ಟನು ಕುಪ್ಪಣ್ಣಭಟ್ಟನಿಗೆ ಆಸರೆಯಾಗಲು ಮುಂದಾಗುತ್ತಾನೆ. "ಮಹಾರಾಯರೇ, ನಿಮ್ಮ ಗಂಟು ನನಗೆ ಬೇಡ. ಮಹಾರಾಯರೇ, ಈ ಮನೆಯಲ್ಲಿ ನೀವೇ ಇದ್ದು ಬಿಡಿ. ನೀವು ಕಣ್ಣುಮುಚ್ಚುವ ತನಕ ನಿಮ್ಮ ಕೃಷಿಗೆ ನಾನೇ ಈ ತೋಟವನ್ನು ಬಿಟ್ಟುಕೊಟ್ಟಿರುತ್ತೇನೆ. ನರಸಿಂಹದೇವರ ಗೇಣಿಯನ್ನು ನೀವು ಬಾಕಿ ಮಾಡಿಕೊಳ್ಳದಂತೆ ನನಗೆ ವರ್ಷ ವರ್ಷ ಗೇಣಿ ಕೊಡುತ್ತ ಬಂದರೆ ಸಾಕು. ನಾನು ಕಟುಕನಲ್ಲ ಭಟ್ಟರೇ. ನಿಮ್ಮ ಹಾಗೆ ನಾನೂ ಘಟ್ಟದ ಕೆಳಗಿನಿಂದ ಬರಿಯ ತಾಲಿ ಹಿಡಿದು ಬಂದವ. ಸಂಭಾವನೆಗೆ ಹೋಗಿದ್ದಾಗ ದಾರಿಯ ಬಿಸಿಲಿನಲ್ಲಿ ನನ್ನ ಅಪ್ಪಯ್ಯ ಬಿದ್ದು ಸತ್ತಂತೆ ನನಗೊಂದು ಸಾವು ಬರದಿದ್ದರೆ ಸಾಕು. ಸಾಯುವಾಗ ಒಂದು ಗುಟುಕು ನೀರಿಲ್ಲದೆ, ದಾರಿಯ ಬಿಸಿಲಿನಲ್ಲಿ ಕಾಗೆಗಳು ನನ್ನ ಅಪ್ಪಯ್ಯನನ್ನು ಕುಟುಕಿದಂಥ ಪಾಡು ನನಗೆ ಬರದಿದ್ದರೆ ಸಾಕು. ಇಕ್ಕೊಳ್ಳಿ ಬೀಗದ ಕೈ ಮಾರಾಯರೆ, ಇಕ್ಕೊಳ್ಳಿ' ಎಂದು ಅಪ್ಪಣ್ಣಭಟ್ಟರು ಮೂಗಿನಿಂದ ಸಿಂಬಳತೆಗೆದು ಅತ್ತರು."[೧೮]

ದುಡಿಮೆಯ ವರ್ಗದಲ್ಲಿ ಅಂತಿಮವಾಗಿ ನೆಲೆ ನಿಲ್ಲುವುದು ಮಾನವೀಯತೆ. ಅದು ಅದೃಶ್ಯವಾದ ದೈವದ ಹೆಸರಿನಲ್ಲಿ ಧರ್ಮ-ಕರ್ಮದ ನೆರಳಿನಲ್ಲಿ ಸಹಾಯ ಹಸ್ತ ನೀಡುತ್ತದೆ. ಕುಪ್ಪಣ್ಣನ ಆರ್ಥಿಕ ದುರಂತದಲ್ಲಿ ಅಪ್ಪಣ್ಣಭಟ್ಟನು ಅಂತಿಮವಾಗಿ ಸ್ಪಂದಿಸುತ್ತಾನೆ. 'ಸಾವು' ಮನುಷ್ಯನಿಗೆ ಅತಿ ಭಯ ಮತ್ತು ಹೆದರಿಕೆಯನ್ನು ಉಂಟುಮಾಡುತ್ತದೆ. ವ್ಯಕ್ತಿಗೆ ಸಂಭವಿಸುವ ಸಾವು ಬದುಕಿನ ಎಲ್ಲಾ ಸ್ತರಗಳನ್ನು ಮುಚ್ಚಿಹಾಕುತ್ತದೆ. ಆಧುನಿಕ ಜಗತ್ತಿನಲ್ಲಿ 'ದೈವ', 'ಧರ್ಮ-ಕರ್ಮ' ಎನ್ನುವ ವಸ್ತುಗಳು ಸವಕಲಿನ ನಾಣ್ಯ ಇದ್ದಂತೆ. ಆದರೆ 'ಸಾವು' ಮಾತ್ರ ಎಲ್ಲವನ್ನು ಮರೆಸುತ್ತದೆ. ಎಲ್ಲರನ್ನು ನುಂಗು ಹಾಕುತ್ತದೆ. ಅಂತಹ ಭಯ ಅಪ್ಪಣ್ಣಭಟ್ಟರಿಗೆ ಕಾಡುತ್ತದೆ. ಆ ಕಾರಣದಿಂದಲೇ ಕುಪ್ಪಣ್ಣ ಭಟ್ಟರಿಗೆ ಸಹಾಯ ಹಸ್ತ ಚಾಚಲು ಮುಂದಾಗುತ್ತಾನೆ. ಅನಂತಮೂರ್ತಿಯವರ ಈ ಕಥೆಯೂ ದುಡಿಯುವ ವರ್ಗ ಸಂಬಂಧವನ್ನು ತೋರುತ್ತದೆ.

ನವ್ಯ ಸಾಹಿತ್ಯದ ಸಮಾಜ ಪರಿಕಲ್ಪನೆಯಲ್ಲಿ 'ವರ್ಗ ಸಂಬಂಧ ' ಚಿಂತನೆಗೆ ಹೆಚ್ಚಿನ ಪ್ರಾಧಾನ್ಯತೆ ಇರುತ್ತದೆ. ಅಂತಹ ವಿಚಾರಗಳನ್ನು ಕಥೆಯ ಚೌಕಟ್ಟಿನಲ್ಲಿ ತಂದವರು ತೇಜಸ್ವಿ, ಲಂಕೇಶ್ ಮತ್ತು ಅನಂತಮೂರ್ತಿ. ಸಮಾಜವಾದಿ ಚಿಂತನೆಗಳು ಸೈದ್ಧಾಂತಿಕ ಹೋರಾಟಕ್ಕೆ ಮುನ್ನುಡಿಯನ್ನು ಬರೆದು ಆರೋಗ್ಯಕರ ಸಮಾಜದ ಕಡೆ ತಿರುಗುವುದನ್ನು ತಮ್ಮ ಕಥೆಗಳಲ್ಲಿ ಚಿತ್ರಿಸಿದ್ದಾರೆ.

### ೫.೨. ನಿರಂತರವಾಗಿರುವ ವರ್ಗ ಸಂಘರ್ಷಗಳು

ಜಾತಿ ಧರ್ಮಗಳಿಂದ ಕೂಡಿರುವ ಭಾರತದಲ್ಲಿ ವರ್ಗರಹಿತ ದೇಶದ ನಿರ್ಮಾಣ ಸಾಧ್ಯವಿಲ್ಲ. ದೇಶ ಬಹುಪಾಲು ಗ್ರಾಮೀಣ ನೆಲೆಗಟ್ಟಿನಿಂದ ರೂಪುಗೊಂಡಿದೆ. ಹಾಗೆಯೇ ನಗರೀಕರಣ ತುಸು ಭಾರವಾದ ದೇಶವೂ ಆಗಿದೆ. ಭಾರತೀಯರನ್ನು ಆರ್ಥಿಕ ಹಿನ್ನೆಲೆಯಲ್ಲಿ ಮೇಲ್ವರ್ಗ, ಮಧ್ಯಮವರ್ಗ, ಕೆಳವರ್ಗಗಳೆಂದು ಮೂರು ಭಾಗಗಳಾಗಿ ವಿಂಗಡಿಸುವ ಸ್ಥಿತಿ ಇದೆ. ಆರ್ಥಿಕ ದೃಷ್ಟಿಕೋನದಿಂದ ನೋಡಿದಾಗ ಪ್ರಬಲರಾಗಿರುವವರನ್ನು ಮೇಲ್ವರ್ಗವೆಂತಲೂ, ಆರ್ಥಿಕತೆಯಲ್ಲಿ ಸಾಮಾನ್ಯವಾಗಿರುವವರನ್ನು ಮಧ್ಯಮವರ್ಗವೆಂತಲೂ, ಕನಿಷ್ಠ ಆರ್ಥಿಕ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳಲು ಸಾಧ್ಯವಾಗದೇ ಇರುವವರನ್ನು ಕೆಳವರ್ಗವೆಂತಲೂ ಕರೆಯಲಾಗುತ್ತದೆ. ಸಾಮಾನ್ಯವಾಗಿ ಜಾತಿ ದೃಷ್ಟಿಯಿಂದ ನೋಡಿದಾಗ ಬ್ರಾಹ್ಮಣರನ್ನು ಉನ್ನತವರ್ಗದವರೆಂತಲೂ, ಬ್ರಾಹ್ಮಣರೇತರ ಹಿಂದುಳಿದ ವರ್ಗವನ್ನು ಮಧ್ಯಮವರ್ಗವೆಂತಲೂ, ಸಮಾಜದಲ್ಲಿ ತುಳಿತಕ್ಕೆ ಒಳಗಾದವರನ್ನು ಕೆಳವರ್ಗವೆಂತಲೂ ನೋಡಲಾಗುತ್ತದೆ.

ಗ್ರಾಮೀಣ ಭಾಗದ ರೈತನು ಅವಶ್ಯಕತೆಗಿಂತ ಹೆಚ್ಚಿನ ಭೂಮಿಯನ್ನು ಹೊಂದಿದ್ದರೆ ಅವನು ಯಜಮಾನಿಕೆಯನ್ನು ಹೊಂದಿದವನಾಗಿರುತ್ತಾನೆ. ಹಾಗೆಯೇ ಯಾರು ಭೂಮಿಯನ್ನು ಹೊಂದಿರುವುದಿಲ್ಲವೋ, ಭೂ ರಹಿತರಾಗಿರುತ್ತಾರೋ ಅಂಥವರಲ್ಲಿ ಬಹುಪಾಲು ಜಾತಿಯಲ್ಲಿ ಹಿಂದುಳಿದವರು ಮತ್ತು ಭೂರಹಿತ ದುಡಿಮೆಯ ವ್ಯಕ್ತಿಗಳಾಗಿರುತ್ತಾರೆ. ಅಂಥವರು ಯಜಮಾನಿಕೆಯ ಅಡಿಯಲ್ಲಿ ದುಡಿಯುತ್ತಾರೆ. ಅವರುಗಳು ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯನಂತರದ ಕಾಲದಲ್ಲಿ ಬಹುಪಾಲು ಗ್ರಾಮೀಣ ಭಾಗದಲ್ಲಿ ನೆಲೆಯಲ್ಲಿ ಇದ್ದ 'ಜೀತ ಪದ್ದತಿ'ಗೆ ಒಳಗಾಗಿ ದುಡಿಯುತ್ತಿದ್ದರು. ತಾವು ಮಾಡಿದ ಸಾಲಕ್ಕೆ ಅಥವಾ ತಮ್ಮ ಕುಟುಂಬ ಮಾಡಿದ ಸಾಲಕ್ಕೆ ಪ್ರತಿಯಾಗಿ ಭೂ ಒಡೆಯನ ಬಳಿ ದುಡಿಯುವ ಸ್ಥಿತಿ ಇರುತ್ತಿತ್ತು. ಜೀತಪದ್ದತಿಗೆ ಒಳಗಾಗುವ ಇವರುಗಳು ಸಾಮಾನ್ಯವಾಗಿ ಅವಶ್ಯಕತೆಗಿಂತ ಕಡಿಮೆ ಭೂಮಿ ಅಥವಾ ಭೂ ರಹಿತರಾಗಿರುತ್ತಿದ್ದರು. ಆ ಜೀತಪದ್ದತಿಯವರ ದುಡಿಮೆ ತಲೆತಲಾಂತರಗಳಲ್ಲಿ ವರ್ಗಾವಣೆಯಾಗುತ್ತಿತ್ತು. ಒಂದು ವೇಳೆ ಆ ಭೂ ಮಾಲೀಕನನ್ನು ಬಿಟ್ಟು ಬರಬೇಕಾದರೆ ಅವನಿಗೆ ಕೊಡಬೇಕಾದ ಸಾಲ ಮರುಪಾವತಿಸಿ ಹೊರಬರಬೇಕಾಗುತ್ತಿತ್ತು. ಅಕಸ್ಮಾತ್ ಆತನ ಹಿಂಸೆ ಹೆಚ್ಚಾಗುತ್ತಿದ್ದರೆ ಅವನಿಂದ ಹೊರಬರಲು ಮತ್ತೊಬ್ಬ ಭೂಮಾಲೀಕನ ಬಳಿ ಸಾಲವನ್ನು ತಂದು ತೀರಿಸಬೇಕಾಗುತ್ತಿತ್ತು. ನಂತರದ ದಿನಗಳಲ್ಲಿ ಅವನ ಬಳಿ ಹೋಗಿ ದುಡಿಯುವ ಪರಿಸ್ಥಿತಿ ಇರುತ್ತಿತ್ತು.

ಇನ್ನೂ ನಗರ ಪ್ರದೇಶಗಳಲ್ಲಿ ಜಾತಿ ಪ್ರಧಾನವಾಗದಿದ್ದರೂ ತಮ್ಮ ಆರ್ಥಿಕ ಅಸಮಾನತೆಯಿಂದ ಬದುಕಿನ ನಿರ್ವಹಣೆಗಾಗಿ ಸಹಜವಾಗಿ ಫ್ಯಾಕ್ಟರಿ, ಕಂಪನಿ ಅಥವಾ

ಕಾರ್ಖಾನೆಗಳ ಮಾಲೀಕನ ಬಳಿ ಮುಂಗಡ ಹಣವನ್ನು ಪಡೆದು ದುಡಿಯುವ ಪರಿಸ್ಥಿತಿ ಇರುತ್ತಿತ್ತು. ಒಂದು ವೇಳೆ ಮತ್ತೊಂದು ಕಡೆ ಉದ್ಯೋಗಕ್ಕೆ ಹೊರಟರೆ ಆ ಮುಂಗಡ ಹಣವನ್ನು ದುಡಿಮೆಯ ಮೂಲಕ ಮರು ಪಾವತಿಸಿ. ಮತ್ತೊಂದು ಕಡೆ ಉದ್ಯೋಗವನ್ನು ಪಡೆಯಬೇಕಾಗುತ್ತಿತ್ತು. ಬಹುಪಾಲು ಸನ್ನಿವೇಶಗಳು ದುಡಿಯುವ ವರ್ಗವು ಶೋಷಣೆಗೆ ಒಳಗಾಗುವ ಸ್ಥಿತಿ ಇತ್ತು. ಇವರುಗಳು ಪ್ರತಿಭಟಿಸುವ ಸಂದರ್ಭಗಳೂ ತುಂಬಾ ಕಡಿಮೆಯಾಗಿರುತ್ತಿದ್ದವು.

ಗ್ರಾಮೀಣ ಭಾಗ ಮತ್ತು ನಗರ ಪ್ರದೇಶಗಳ ದುಡಿಯುವ ವರ್ಗವು ಶೋಷಣೆಯ ವಿರುದ್ಧ ಹೋರಾಟ ಮಾಡುವ ಸಂದರ್ಭಗಳು ವ್ಯಕ್ತಿಗತವಾಗಿ ನಡೆಯುತ್ತಿದ್ದವೇ ಹೊರತು ಸಂಘಟನೆಯ ರೂಪದಲ್ಲಿ ನಡೆಯುತ್ತಿರಲಿಲ್ಲ. ಇಂತಹ ಹೋರಾಟಗಳು 'ವರ್ಗ ಸಂಘರ್ಷ'ಗಳಾಗಿ ಪರಿವರ್ತಿತವಾಗುತ್ತಿದ್ದವು. ಆ ಸಂಘರ್ಷಗಳೂ ಮೌನವಾಗಿ ಪ್ರತಿಭಟನೆಯಾಗಿ, ಹೋರಾಟಗಳ ರೂಪದಲ್ಲಿ ಇರುತ್ತಿದ್ದವು. ಸ್ವಾತಂತ್ರ್ಯದ ಆನಂತರದಲ್ಲಿ ಸರ್ಕಾರದ ಕಾನೂನುಗಳು 'ಜೀತ ಪದ್ದತಿ'ಯಂಥ ಅಮಾನುಷ ಪದ್ಧತಿಯನ್ನು ತೆಗೆದು ಹಾಕಿತು. ಆದರೂ ದುಡಿಯುವ ವರ್ಗ ಮಾಲೀಕರ ಬಳಿ ದುಡಿಯುತ್ತಲೇ ಇದೆ. ಶೋಷಣೆಗೆ ಒಳಗಾಗುತ್ತಲೇ ಇದೆ. ವರ್ಗ ಸಂಘರ್ಷಗಳು ನಡೆಯುತ್ತಲೇ ಇದೆ.

ಜಾತಿ ಅಥವಾ ಮೇಲ್ವರ್ಗ, ಕೆಳವರ್ಗಗಳಿಂದ ಕೂಡಿದ ದುಡಿಮೆ ಭಾರತೀಯರಲ್ಲಿ ಪ್ರಧಾನವಾಗಿದೆ. ವಿದೇಶಗಳಲ್ಲಿ ಇದು ವಿಭಿನ್ನವಾಗಿದೆ. ತೇಜಸ್ವಿಯವರು ಈ ವಿಚಾರಕ್ಕೆ ಸಂಬಂಧಿಸಿದಂತೆ ಪಾಶ್ಚಿಮಾತ್ಯರಲ್ಲಿ "ಇಲ್ಲಿಯಂತೆ ಮೇಲ್ವರ್ಗ, ಮಧ್ಯಮ ವರ್ಗ, ಕೆಳವರ್ಗ ಇತ್ಯಾದಿಗಳಿದ್ದರೂ ಇಲ್ಲಿನ ಜಾತಿ ಪದ್ದತಿಯಂತೆಯೇ ಶ್ರೇಣೀಕೃತ ವ್ಯವಸ್ಥೆಯಾದರೂ ವರ್ಗವ್ಯವಸ್ಥೆಯಲ್ಲಿ ಮುಕ್ತ ಚಲನಶೀಲತೆ ಇರುತ್ತದೆ. ವರ್ಣವ್ಯವಸ್ಥೆಯಲ್ಲಿ ಈ ಚಲನಶೀಲತೆ ಇರುವುದಿಲ್ಲ. ಪ್ರತಿಯೊಂದು ಜಾತಿಯೂ ತನ್ನ ಜಾತಿಯ ಸರಹದ್ದನ್ನು ಮೀರುವಂತೆಯೇ ಇಲ್ಲ. ನಮ್ಮ ಜೀವನಾನುಭವಗಳಿಗೆ ಅನುಸಾರವಾಗಿ ನಾವೇ ಯಾವ ತತ್ವಪಂಥ ಸರಿ ಎಂದು ನಿರ್ಣಯಿಸಿ ಆ ಸಮುದಾಯಕ್ಕೆ ಅಥವಾ ಜಾತಿಗೆ ನಾವು ಸೇರುವಂತೆಯೂ ಇಲ್ಲ. ಹುಟ್ಟಿದ ಜಾತಿಯನ್ನು ಬಿಡುವಂತೆಯೂ ಇಲ್ಲ. ವರ್ಗ ತಾರತಮ್ಯದಲ್ಲಿ ಒಬ್ಬ ಕಷ್ಟಪಟ್ಟು ದುಡಿದು ಶ್ರೀಮಂತನಾಗಿ ಮೇಲ್ವರ್ಗಕ್ಕೆ ಏರಬಹುದು, ಇಲ್ಲವೇ ದುಂದು ಮಾಡಿ ನಷ್ಟ ಕಟ್ಟಿಕೊಂಡು ಕೆಳವರ್ಗಕ್ಕೆ ಇಳಿಯಲೂ ಬಹುದು. ಆದರೆ ವರ್ಗ ತಾರತಮ್ಯದಲ್ಲಿ ಒಬ್ಬ ಹುಟ್ಟಿದನಿಂದ ಸಾಯುವವರೆಗೆ ಯಾವ ವರ್ಣದಲ್ಲಿ ಹುಟ್ಟಿದನೋ ಅಲ್ಲೇ ಇರಬೇಕಾಗುತ್ತದೆ."[೧೯] ಎಂದು ಹೇಳುತ್ತಾರೆ.

ಭಾರತದಂತಹ ದೇಶದಲ್ಲಿ ಆರ್ಥಿಕ ಕಾರಣಕ್ಕಾಗಿ ದುಡಿಯುವ ವರ್ಗದ ಸಂಘರ್ಷಕ್ಕಿಂತಲೂ ಅಪಾಯಕಾರಿಯಾದುದು ಜಾತಿಯಿಂದ ಕೂಡಿದ ಸಂಘರ್ಷವಾಗಿದೆ.

ಗ್ರಾಮೀಣ ಭಾಗದಲ್ಲಿ ಮೇಲ್ವರ್ಗದ ಜಾತಿಯಿಂದ ಕೂಡಿದ ಅಥವಾ ಭೂಮಾಲೀಕರ ಶೋಷಣೆಯು ದುಡಿಯುವ ದುರ್ಬಲ ಮತ್ತು ತುಳಿತಕ್ಕೆ ಒಳಗಾಗುವ ಜಾತಿ ಸಮುದಾಯ ಬದುಕುವ ಹಕ್ಕನ್ನೆ ಕಿತ್ತುಕೊಳ್ಳುವಂತೆ ಮಾಡುವ ಸ್ಥಿತಿ ಉಂಟಾಗುತ್ತದೆ. ಕೆಲವೊಮ್ಮೆ ಪ್ರತಿಭಟನೆ ಅವರ ಕೊನೆಗೂ ಕಾರಣವಾಗುತ್ತದೆ. ಅಂತಹ ಸಂದರ್ಭದಲ್ಲಿ ಸಂವಿಧಾನದ ಆಶಯಗಳು ಗಾಳಿಗೆ ತೂರಲ್ಪಡುತ್ತವೆ. ಆಗ ಅಂಬೇಡ್ಕರ್‌ರವರ ನೀಡಿರುವ ಸಂವಿಧಾನದ ಜಾತ್ಯಾತೀತ ಪರಿಕಲ್ಪನೆಗಳು, ಸಾಮಾಜಿಕ ನ್ಯಾಯ ಮತ್ತು ಮಾನವೀಯ ಹಿನ್ನೆಲೆಯ ಸಮಷ್ಠಿ ನೆಲೆಯ ಕಲ್ಪನೆಗಳು ತಮ್ಮ ಅರ್ಥವನ್ನು ಕಳೆದುಕೊಳ್ಳುತ್ತವೆ. ಶೋಷಣೆಯೇ ಪ್ರಧಾನವಾಗಿರುತ್ತದೆ. ಸಂಘರ್ಷಗಳು ನಡೆಯುತ್ತಲೇ ಇವೆ. ದುರ್ಬಲ ವರ್ಗದವರ ಆರ್ಥಿಕ ಶಕ್ತಿ ಕಡಿಮೆಯಾಗಿರುತ್ತದೆ. ಅದು ಭೂ ಮಾಲೀಕನಿಗೆ ಚೆನ್ನಾಗಿಯೇ ತಿಳಿದಿದೆ. ಇಂದು ಜಾತಿ ದೃಷ್ಟಿಕೋನ ಬದಲಾವಣೆಯನ್ನು ಪಡೆದಿದೆ. ಜಾತಿಗಿಂತ ಗ್ರಾಮೀಣ ಭಾಗದಲ್ಲಿ ಶ್ರಮಿಕ ವರ್ಗದ ಹಿನ್ನೆಲೆಯಲ್ಲಿ ಸಂಘರ್ಷವನ್ನು ನೋಡುವುದು ಸೂಕ್ತವಾಗಿದೆ. ತುಳಿತಕ್ಕೆ ಒಳಗಾದ ಜಾತಿಯವರು ಇಂದು ಶ್ರೀಮಂತಿಕೆಯನ್ನು ಹೊಂದಿದ್ದು, ಅವರುಗಳು ಅವರ ಜಾತಿಗಳನ್ನೆ ಶೋಷಣೆಗೆ ಒಳಪಡಿಸುತ್ತಿರುವುದರಿಂದ ವರ್ಗ ಸಂಘರ್ಷವನ್ನು ಪ್ರಧಾನವಾಗಿ ಜಾತಿ ಹಿನ್ನೆಲೆಯಲ್ಲಿ ನೋಡಬಹುದು. ಜಾತಿಯ ಪರಿಕಲ್ಪನೆಯು ಪ್ರಸ್ತುತವಾಗಿ ಬದಲಾವಣೆಯ ಸ್ವರೂಪವನ್ನು ಪಡೆದುಕೊಳ್ಳುತ್ತಿದೆ. ಡಿ.ಆರ್. ನಾಗರಾಜರವರು ಇಪ್ಪತ್ತನೆಯ ಶತಮಾನದಲ್ಲಿನ ಜಾತಿ ಹಿನ್ನೆಲೆಯ ವರ್ಗ ಸಂಘರ್ಷಗಳ ಬಗ್ಗೆ ಹೇಳುತ್ತಾ ಅಂದಿನ ಜಾತಿ ಸಂಘಟನೆಗೆ ಕಾರಣವಾದ ತಾತ್ವಿಕ ಅಂಶಗಳನ್ನು ಹೇಳುತ್ತಾರೆ. " ಶುದ್ಧಿ ಮತ್ತು ಅಶುದ್ಧಿಯ ವಿರೋಧದ ಮೇಲೆ ನಿಂತ ಅಂತಸ್ತು, ಅನುವಂಶಿಕ ಶ್ರೇಷ್ಟತೆ, ವ್ಯಕ್ತಿಯ ಬದುಕಿಗೆ ಸಂಬಂಧಿಸಿದಂತೆ ಕರ್ಮ ಸಿದ್ದಾಂತ, ಗೋತ್ರ ಪದ್ದತಿಗಳ ಬಗ್ಗೆ ಹಳೆ ಮೈಸೂರಿನ ಬ್ರಾಹ್ಮಣೇತರ ಚಳುವಳಿ ವ್ಯಾಪಕವಾದ ಬಂಡಾಯವನ್ನು ಹೂಡಲಿಲ್ಲ."[೨೦] ಎಂಬ ಮಾತುಗಳು ಇಂದು ಬಂಡವಾಳ ಶಾಹಿ ಜಗತ್ತಿನಲ್ಲಿ ವಿಶೇಷವಾದ ಅರ್ಥವೇನು ನೀಡುವುದಿಲ್ಲ. ಇಂದು ಎಲ್ಲಾ ಜಾತಿಯ ಬಂಡವಾಳ ಶಾಹಿ ವ್ಯಕ್ತಿಗಳು ಇದ್ದಾರೆ. ಹಾಗೆಯೇ ಉತ್ಪಾದನ ವ್ಯವಸ್ಥೆಯಲ್ಲಿ ಎಲ್ಲರೂ ಒಂದೊಂದು ರೀತಿಯಲ್ಲಿ ಶೋಷಣೆಯನ್ನು ಮಾಡುತ್ತಲೇ ಇದ್ದಾರೆ.

ಆಧುನಿಕ ಬಂಡವಾಳ ಶಾಹಿ ನಿರ್ಮಿತ ನಗರೀಕರಣದ ಜಗತ್ತಿನಲ್ಲಿ ದುಡಿಯುವ ವರ್ಗದ ಶೋಷಣೆಯ ವಿವಿಧ ಮುಖಗಳು ಅನಾವರಣಗೊಳ್ಳುತ್ತವೆ. ಲಾಭವೇ ಪ್ರಧಾನವಾದ ಬಂಡವಾಳ ಶಾಹಿ ಜಗತ್ತಿನಲ್ಲಿ ಸಾಮಾಜಿಕ ನ್ಯಾಯಕ್ಕೆ ಹೆಚ್ಚಿನ ಮಹತ್ವ ಇರುವುದಿಲ್ಲ. ಹಾಗೆಯೇ ಸಂಘಟನೆಯ ಹೋರಾಟದ ಸಂಘರ್ಷಕ್ಕೂ ಅವಕಾಶ ಕಡಿಮೆಯಾಗಿರುತ್ತದೆ. ವ್ಯವಸ್ಥಿತವಾಗಿ ಒಡೆದು ಆಳುವ ವಿಚಾರವೇ ಬಂಡವಾಳ ಶಾಹಿ ಕಂಪನಿಗಳ ಪ್ರಧಾನವಾದ

ಆಶಯವಾಗಿರುತ್ತದೆ. ಈ ಬಂಡವಾಳ ಶಾಹಿ ಜಗತ್ತು ಉದ್ಯೋಗವನ್ನು ಸೃಷ್ಟಿಸುತ್ತದೆ ಎಂದು ಹೇಳಿಕೆಯನ್ನು ನೀಡಿದರೂ ಅದರ ಪ್ರಧಾನ ಗುರಿಯೇ ಅತಿ ಹೆಚ್ಚು ಲಾಭ. ಅದಕ್ಕಾಗಿ ಭಾರತಂತಹ ಜನಸಂಖ್ಯೆ ಪ್ರಧಾನ ದೇಶದಲ್ಲಿ ದುಡಿಯುವ ವರ್ಗಕ್ಕೇನೂ ಕಡಿಮೆ ಇಲ್ಲ. ಇಂತಹ ಪರಿಸ್ಥಿತಿಯ ಲಾಭವನ್ನು ಬಂಡವಾಳ ಶಾಹಿ ಜಗತ್ತು ಬಳಸಿಕೊಳುತ್ತಿದೆ.

ಗ್ರಾಮೀಣ ಭಾಗದ ಶ್ರಮಿಕ ವರ್ಗ ಮತ್ತು ನಗರ ಪ್ರದೇಶದ ಶ್ರಮಿಕ ವರ್ಗದ ದುಡಿಮೆಯ ಹಿನ್ನೆಲೆಯ ಸಂಘರ್ಷವನ್ನು ನವ್ಯ ಸಾಹಿತ್ಯದ ಕಥೆಗಾರರಾದ ತೇಜಸ್ವಿ, ಲಂಕೇಶ್, ಮತ್ತು ಅನಂತಮೂರ್ತಿಯವರ ಕಥೆಗಳಲ್ಲಿ ಕಂಡು ಬರುತ್ತದೆ.

ಭೂಮಾಲೀಕರ ಹಿಡಿತದಲ್ಲಿನ ದುರ್ಬಲ ವರ್ಗಗಳು ನೇರವಾಗಿ ಪ್ರತಿಭಟಿಸಲು ಸಾಧ್ಯವಾಗುವುದಿಲ್ಲ. ಆದರೆ ಶೋಷಣೆಯ ವಿರುದ್ದವಾಗಿ ಅವರ ಮಾತುಗಳು ಇರುತ್ತವೆ ಎಂಬುದಕ್ಕೆ ತೇಜಸ್ವಿಯವರ "ಲಿಂಗ ಬಂದ" ಕಥೆಯಲ್ಲಿ ಕಾಣಿಸುತ್ತದೆ. ಮನೆಯ ಕೆಲಸ ಮಾಡುತ್ತಿದ್ದ ಲಿಂಗನು ಮಳೆಗಾಲದ ಸಂದರ್ಭದಲ್ಲಿ ಬೆಂಕಿಯನ್ನು ಕಾಯಲು ಹೋದಾಗ ಆ ಯಜಮಾನನ ಮಕ್ಕಳು ಇವನನ್ನು ಜಾಗ ಬೇಕು ಸ್ವಲ್ಪ ಸ್ಥಳ ಬಿಡಲು ಹೇಳಿದಾಗ ಲಿಂಗನು "ನಿಮ್ಮಂಗೇ ಇಂಗ್ಲಾಂದೀಲಿ ಒಬ್ಬ ಹಳೇ ಪೈಕದೋನು ನಂಗೆ ಅನ್ನ ಹೆಚ್ಗೆಬೇಕು, ಊಟ ಹೆಚ್ಗೆಬೇಕು. ಗದ್ದೆ ಮಾಡಕ್ಕೆ ಜಾಗ ಹೆಚ್ಗೆಬೇಕು, ಅಂತ ಸಿಕ್ಕಿಸಿಕ್ಕಿದಕ್ಕೆಲ್ಲಾ ಹೆಚ್ಗೆಬೇಕು ಅನ್ತಿದ್ದ ನೋಡಿ ಒಂದಿವಸ ಅವನ್ಹೆಣ್ತಿಗೆ!!"[೨೧] ಅಂಥ ಒಂದು ಅಸಂಗತ ಜನಪದ ಕಥೆಯನ್ನು ಹೇಳುತ್ತಾನೆ. ಹೀಗೆ ಕಥೆಯನ್ನು ಆ ಮಕ್ಕಳಾದ ಕಿಟ್ಟಿ ಮತ್ತು ಅವನ ತಂಗಿಗೆ ಹೇಳುತ್ತ ಕಥೆ ಮುಂದುವರೆಯುತ್ತದೆ. ಅವನ ಹೆಂಡತಿಗೆ ಒಂದು ಮಗ ಜನಿಸಿ ಅದು ದಿನೇ ದಿನೇ ರಾಕ್ಷಸಾಕಾರವಾಗಿ ಬೆಳೆಯುತ್ತಿರುತ್ತದೆ. ಅದನ್ನು ಕಂಡ ಕೇರಿಯ ಜನ ಭಯಗೊಳ್ಳುತ್ತಾರೆ ಕೊನೆಗೆ ಲಿಂಗನ ಅಜ್ಜ ಅದನ್ನು ಸಂಹಾರ ಮಾಡಿ ಜನತೆಯ ಭಯವನ್ನು ನಿವಾರಿಸುತ್ತಾನೆ. ಹೀಗೆ ವಂಶಪಾರಂಪರ್ಯವಾಗಿ ಬರುವ ದಬ್ಬಾಳಿಕೆಯನ್ನು ದುರ್ಬಲ ವರ್ಗದವರು ಕಥೆಗಳನ್ನು ಹೇಳುವ ಮೂಲಕ ಪ್ರತಿಭಟಿಸುವ ಕೆಲಸ ಮಾಡುತ್ತಾರೆ. ಇಂತಹ ಕಥೆಗಳು ಶೋಷಣೆಯ ವಿರುದ್ದ ಹೋರಾಟ ಮಾಡುವ ರೂಪಕಗಳಾಗಿ ಕಂಡುಬರುತ್ತವೆಯೇ ಹೊರತು ವಾಸ್ತವದಲ್ಲಿ ದಬ್ಬಾಳಿಕೆಯನ್ನು ಒಪ್ಪಿಕೊಳ್ಳುವ ಅಸಹಾಯಕತೆ ಇರುತ್ತದೆ.

ತೇಜಸ್ವಿಯವರ 'ಸ್ವರೂಪ' ಕಥೆಯಲ್ಲಿ ವರ್ಗ ಸಂಘರ್ಷದ ಮುಖ್ಯ ಭೂಮಿಕೆಯಾದ ಶೋಷಣೆಯ ಭಾಗವನ್ನು 'ಇಂಬಳ'ಗಳಿಗೆ ಹೋಲಿಸುವ ನಿಟ್ಟಿನಲ್ಲಿ ಬಂಡವಾಳ ಶಾಹಿಯ ಮನಸ್ಥಿತಿಯನ್ನು ಅನಾವರಣಗೊಳಿಸುತ್ತಾರೆ. ವ್ಯಕ್ತಿಯ ಆರಾಧನೆಯ ಭಾಗಗಳಾದ 'ಸೋಷಲಿಸಂ', 'ಶೋಷಣೆ' ಎನ್ನುವ ಪದಗಳು ಹಣ ಕಂಡೊಡನೆ ವಿಭಿನ್ನವಾಗಿ

ಯೋಚಿಸುವಂತೆ ಮಾಡುತ್ತದೆ ಎಂಬುದನ್ನು ಹೇಳುತ್ತಾರೆ. “ಶೋಷಣೆ ಕೇವಲ ಬಂಡವಾಳಗಾರನಿಗೆ ಸೀಮಿತವಲ್ಲ ಎನ್ನುವುದು, ಇಂಬಳಗಳನ್ನು ನೋಡಿದ್ದೀಯಾ! ಮಳೆಗಾಲಕ್ಕೆ ಬಂದಿದ್ದರೆ ಈ ಹೊತ್ತಿಗೆ ನಿನ್ನ ಬಟ್ಟೆಗಳೆಲ್ಲಾ ರಕ್ತವಾಗಿರುತ್ತಿದ್ದವು. ಸುಮ್ಮನೇ ಸದ್ದೆ ಇಲ್ಲದ ಕಾಲನ್ನ ತಬ್ಬಿ, ನೋವೇ ಇಲ್ಲದಂತೆ ಚರ್ಮ ಕೊರೆದು, ಗೊತ್ತೇ ಆಗದಂತೆ ರಕ್ತ ಕುಡಿದು, ಸಣ್ಣಗೆ ದಾರದಂತಿದ್ದುವು ಗುಂಡಗೆ ಗೋಲಿಯಂತಾಗಿ ಬಿದ್ದು ಹೋಗುತ್ತವೆ. ಈಗೆಲ್ಲಿ ನೆಲದಲ್ಲಿ ಹುದುಗಿರುತ್ತವೋ! ಒಂದೇ ಒಂದು ಮಳೆ ಬಿದ್ದರೆ ಸಾಕು ಓಡಾಡುವ ದಾರಿ ಬದಿಯಲ್ಲೆಲ್ಲಾ ತಲೆ ಎತ್ತಿಕೊಂಡು ಕಾಯುತ್ತಿರುತ್ತವೆ. ಏಕೆ ಹೇಳಿದೆನೆಂದರೆ ನಾನು ಹಳ್ಳಿಗರ ಕೈಲಿ ದುಡಿಸಿ ಶೋಷಿಸಿ ದೊಡ್ಡವನಾದೆನೆನ್ನುವುದು ಕಾಣುವ ವಿಷಯ. ಆದರೆ ದಿನಾ ಕೆಲಸ ಮಾಡಿದ್ದರೆ ಮೇಲೆ ನಾಲ್ಕಾಣೆ ಹೆಚ್ಚಿಗೆ ಕಿತ್ತು, ಸಾಲಾಮಾಡಿ ಸಂತೆಗೆ ಹೋಗಿ ಕಜ್ಜಿ ತುರಿಸುತ್ತಾ ಕಾಲ ಕಳೆದು ಗದ್ದೆಯನ್ನೆಲ್ಲಾ ಹಾಳುಮಾಡಿ ನಮ್ಮ ಚಿಕ್ಕಪ್ಪನನ್ನು ಶೋಷಿತರೇ ಶೋಷಿಸಿದ್ದು ಬೇರೆತರದ ಶೋಷಣೆ. ಸೋಷಲಿಸಂಮ್ಮಿಗೆ ಸಿಕ್ಕುವುದು ದುಡಿಸಿ ಉತ್ಪಾದನೆ ಮಾಡಿದವನ ಶೋಷಣೆ. ಇನ್ನೊಂದು ಅನ್ಯತರದ್ದು ಅದರ ಹಿಡಿತಕ್ಕೆ ಸಿಗುವುದಿಲ್ಲ. ನನಗೆ ನಮ್ಮ ಗದ್ದೆಯ ಬಾಂದುಗಳನ್ನು ಪತ್ತೆ ಹಚ್ಚಬೇಕಾದರೆ ನೂರಾರು ರೂಪಾಯಿ ಖರ್ಚಾಯಿತು. ಶೋಷಣೆ ಒಂದಲ್ಲ ಒಂದು ರೀತಿಯಲ್ಲಿ ಅನಿವಾರ್ಯ. ಇಲ್ಲ ಉತ್ಪಾದಿಸಲು ಶೋಷಿಸಬೇಕು. ಇಲ್ಲ ಹಾಳು ಮಾಡಲು ಶೋಷಿಸಬೇಕು.”[೨೨] ಎಂದು ಹೇಳುವ ಕಥೆಯಲ್ಲಿನ ಹೇಮಂತನ ಮಾತುಗಳು ಶೋಷಣೆಯ ವಿವಿಧ ಮುಖಗಳನ್ನು ತೋರಿಸುತ್ತವೆ. ಶೋಷಣೆಯ ಸಂಕೇತವೆನ್ನುವ ‘ಇಂಬಳ’ ಕೀಟವು ಸದಾ ಜಾಗೃತವಾಗಿರುತ್ತದೆ. ಅದಕ್ಕೆ ಮಳೆಗಾಲವೇ ಜಾಗೃತ. ಬಂಡವಾಳ ಶಾಹಿ ಜಗತ್ತಿನ ಇಂದಿನ ವಾತಾವರಣದಲ್ಲಿ ಮನುಷ್ಯನು ಶೋಷಣೆ ಮುಕ್ತನಾಗಿ ಜೀವನ ನಿರ್ವಹಿಸಲು ಸಾಧ್ಯವಾಗುವುದಿಲ್ಲ. ಹಿಂದಿನ ಜಮ್ದಿಂದಾರಿ ಪದ್ಧತಿಯಲ್ಲಿ ಇಂತಹದೇ ಶೋಷಣೆಯನ್ನು ‘ಇಂಬಳ’ದ ರೂಪದಲ್ಲಿ ಮಾಲೀಕನು ದುರ್ಬಲ ದುಡಿಯುವ ವರ್ಗಕ್ಕೆ ಕಾಡುತ್ತಿದ್ದನು. ಆದರೆ ಇಂದು ಬಂಡವಾಳ ಶಾಹಿದಾರರು ಉದ್ಯೋಗವೆನ್ನುವ ನೆಪದಲ್ಲಿ ದುಡಿಯುವ ವರ್ಗವನ್ನು ಶೋಷಣೆ ಮಾಡುತ್ತಿದ್ದಾರೆ. ಹೇಮಂತನ ಚಿಕ್ಕಪ್ಪನು ಶೋಷಣೆಗೆ ಒಳಗಾದವನು. ದುರಂತವೆಂದರೆ ಆತನು ಇತರರನ್ನು ಶೋಷಿಸುವುದು ಪರಿಸ್ಥಿತಿಯ ವ್ಯಂಗ್ಯತೆಯನ್ನು ತೋರಿಸುತ್ತದೆ.

ವರ್ಗ ಸಂಘರ್ಷಗಳು ಕೇವಲ ಮಾಲೀಕರಿಂದ ಅಷ್ಟೆ ನಡೆಯುವುದಿಲ್ಲ. ದುಡಿಮೆಯ ಮಾಡುವ ಜೊತೆಗಾರರಿಂದಲೆ ಶೋಷಣೆ ನಡೆಯುತ್ತದೆ. ಒಂದು ಕಡೆ ಭೂ ಒಡೆಯರು ಮತ್ತೊಂದು ಕಡೆ ಶೋಷಿತರೆ ಶೋಷಣೆ ಮಾಡಲು ಹೊರಟರೆ ದುರ್ಬಲ ವರ್ಗದವರ ರಕ್ಷಣೆಯ ಜವಬ್ದಾರಿಯನ್ನು ಯಾರು ಹೊರಲು ಸಾಧ್ಯವಾಗುವುದಿಲ್ಲ. ಶೋಷಣೆಯು ನಿರಂತರ ಪ್ರಕ್ರಿಯೆಯಾಗಿರುತ್ತದೆ.

ಅಧಿಕಾರಿ ಶಾಹಿ ವರ್ಗ ಮತ್ತು ರಾಜಕೀಯ ವರ್ಗ, ಜಾತಿಯಾಧಾರಿತ ವರ್ಗ ಸಮಾಜವು ತಮ್ಮ ಅಧೀನದಲ್ಲಿ ಬರುವ ದುರ್ಬಲ ವರ್ಗದವರನ್ನು ಸದಾ ಶೋಷಣೆಯನ್ನು ಮಾಡುವ ಮೂಲಕ ತಮ್ಮ ಅಸ್ತಿತ್ವ ಸ್ಥಾಪಿಸಲು ಸದಾ ಯತ್ನಿಸುತ್ತಿರುತ್ತಾರೆ. ಇವರುಗಳ ಅಡಿಯಲ್ಲಿ ದುಡಿಯುವ ದುರ್ಬಲ ವರ್ಗ ಸದಾ ಇವರ ಅಧೀನದಲ್ಲಿಯೇ ದುಡಿಯುತ್ತಾ ಅವಮಾನ, ಹತಾಶೆಗಳನ್ನು ಅನುಭವಿಸುತ್ತಾರೆ. ಸಾಧ್ಯವಾದರೆ ಮೌನವಾಗಿಯೇ ಪ್ರತಿಭಟನೆಯನ್ನು ಮಾಡುತ್ತಾರೆ. ಆದರೆ ಅದು ದುರ್ಬಲ ವರ್ಗದ ಅರಣ್ಯರೋಧನ ವಾಗಿರುತ್ತದೆಯೇ ಹೊರತು ಪ್ರಬಲವಾದ ಹೋರಾಟದ ಶಕ್ತಿಯಾಗಿ ಹೊರಹೊಮ್ಮುವುದಿಲ್ಲ.

ತೇಜಸ್ವಿಯವರ "ಕುಬಿ ಮತ್ತು ಇಯಾಲ" ಕಥೆಯು ವರ್ಗ ಸಂಘರ್ಷದ ವಿಭಿನ್ನ ಸ್ವರೂಪವನ್ನು ಬಿಚ್ಚಿಡುತ್ತದೆ. ಬಲಿಷ್ಠರ ಉಪಟಳಕ್ಕೆ ಬಲಿಯಾಗುವವರು ದುರ್ಬಲ ಶ್ರಮಿಕರಾದ ಹಮಾಲರು. ಕಥೆಯಲ್ಲಿನ ಹಮಾಲರಾದ ರಹಮಾನ್ ಮತ್ತು ರಂಗನು ಸೊಸೈಟಿಯಲ್ಲಿ ಮೂಟೆಯನ್ನು ಹೊರುವ ಕೆಲಸ ಮಾಡುತ್ತಿರುತ್ತಾರೆ. ಬೈರಾಪುರದಲ್ಲಿ ಯಾವುದೇ ಕಳ್ಳತನವಾಗಲಿ ಅದಕ್ಕೆ ಕಾರಣ ರಹಮಾನ್ ಮತ್ತು ರಂಗರೆಂದು ಪೋಲೀಸರು ತೀರ್ಮಾನಿಸುತ್ತಿದ್ದರು. ಇನ್ನೊಂದು ವಿಚಿತ್ರವೆಂದರೆ ಅವರಿಗೂ ಗೊತ್ತು ಹಮಾಲರು ಕಳ್ಳರಲ್ಲವೆಂದು, ಆದರೂ ತನಿಖೆಯ ನೆಪದಲ್ಲಿ ಚರ್ಮ ಸುಲಿಯುವರೆಗೂ ಹೊಡೆಯುತ್ತಿದ್ದರು. ಒಮ್ಮೆ ಭೈರಾಪುರದ ಡಾಕ್ಟರ್ ಕುಬಿಯು ಹಮಾಲರಿಗೆ ದಂಡಿಸಿದ ಕಾರಣ ಕೇಳಿದಾಗ ಇನ್‌ಸ್ಪೆಕ್ಟರ್ ಅಸ್ಘರ್‌ನು "ಏನು ಮಾಡೋದು ಡಾಕ್ಟರೆ, ದೊಡ್ಡ ದೊಡ್ಡ ಪಾರ್ಟಿಗಳು ಕಂಪ್ಲೇಂಟು ಲಾಂಚು ಮಾಡಿರುತ್ತಾರೆ. ಸುಮ್ಮನೆ ಕೂರೋ ಹಾಗಿಲ್ಲ ನಾವು. ಏನಾರೂ ಪ್ರೋಗ್ರೆಸ್ ತೋರಿಸಬೇಕು ನೋಡಿ"[೨]. ಎಂದು ಅಸಂಬದ್ಧವಾದ ಮಾತುಗಳನ್ನು ಹೇಳುತ್ತಾನೆ. ಪೋಲೀಸನ ಮಾತುಗಳು ಭಾರತೀಯ ಪ್ರಬಲವರ್ಗದ ಮನಸ್ಥಿತಿಗಳು. ಸದಾ ದುಡಿಯುವ ವರ್ಗವನ್ನು ಅನುಮಾನಗಳಿಂದ ನೋಡುತ್ತಾ ಅವರ ತಪ್ಪುಗಳನ್ನೆ ಹುಡುಕುತ್ತಾರೆ. ಒಂದು ವೇಳೆ ತಪ್ಪುಗಳು ಸಿಗದಿದ್ದರೂ ಅವುಗಳನ್ನು ಸೃಷ್ಟಿಸುವ ಹುನ್ನಾರ ಮಾಡುತ್ತಿರುತ್ತಾರೆ. ಅದು ಅವರ ವಿಕೃತ ಮನಸ್ಸನ್ನು ತೋರಿಸುತ್ತದೆ. ಅಂತಹ ಪ್ರತಿನಿಧಿಯಾಗಿ ಇನ್ಸ್‌ಪೆಕ್ಟರ್ ಕಾಣಿಸುತ್ತಾನೆ. ಅಧಿಕಾರಿ ಶಾಹಿ ವರ್ಗ ತಮ್ಮ ಮೇಲೆ ಬರುವ ಅರೋಪವನ್ನು ಅಮಾಯಕರ ಮೇಲೆ ವರ್ಗಾಯಿಸುವ ಜಾಣ್ಮೆಯನ್ನು ಹೊಂದಿರುತ್ತಾರೆ. ಅವರು ಧರ್ಮ-ಕರ್ಮಗಳ ಬಗ್ಗೆ ಯೋಚಿಸುವುದಕ್ಕೆ ಹೋಗುವುದಿಲ್ಲ. ಭಾರತೀಯ ರೋಗಿಷ್ಠ ಮನಸ್ಥಿತಿಗೆ ಇಂತಹ ಘಟನೆಗಳು ಉದಾಹರಣೆಯಷ್ಟೆ. ಹಮಾಲರ ಪ್ರತಿಕ್ರಿಯೆಯನ್ನು ಕೇಳುವ ಸೌಜನ್ಯ ಆ ಪೋಲೀಸನಿಗೆ ಇರುವುದಿಲ್ಲ. ಡಾಕ್ಟರ್ ನಿಜವಾದ ಕಾರಣವೇನು ಎಂದು ಕೇಳಿದಾಗ, ಹಮಾಲರು "ಏನೂ ಕಳ್ಳತನ ನಡೆದಿಲ್ಲ ಸ್ವಾಮಿ, ನೂರಾರು ಮೂಟೆ ನಾವು ಹೊತ್ತು, ಸಾಗಿಸೋದಾದರೂ ಎಲ್ಲಿಗೆ? ಎಲ್ಲಾ ಸೊಸೈಟಿಯ ಡೈರೆಕ್ಟರುಗಳೂ ಕಾರ್ಯದರ್ಶಿಗಳೂ

ಸೇರಿ ತಿಂದು ಹಾಕಿದ್ದಾರೆ. ಜನರ ಕಣ್ಣಿಗೆ ಮಣ್ಣೆರೆಚುವುದಕ್ಕೆ ಕಂಪ್ಲೇಂಟು ಕೊಟ್ಟು ನಮಗೆ ಹೊಡೆಸುತ್ತಿದ್ದಾರೆ. ಭೈರಾಪುರದಲ್ಲಿ ಯಾವಾಗ ಕಳ್ಳತನ ಆಗಲಿ, ನಮ್ಮನ್ನು ಕರೆದು ಚಮಡ ಸುಲಿಯುತ್ತಾರೆ. ಸ್ವಾಮಿ, ನಾವು ಲಂಚಗಿಂಚ ಕೊಟ್ಟು ಪೋಲೀಸರನ್ನು ಸಾಕುವಷ್ಟು ಸಾವುಕಾರರಲ್ಲ ಸ್ವಾಮಿ."[೨೪] ಎಂದು ಹೇಳುತ್ತಾ ಅಳುತ್ತಾರೆ.

ನೂರಾರು ಮೂಟೆ ಕಳ್ಳತನವಾಗಿದೆ ಎಂದು ಕಂಪ್ಲೇಂಟ್ ಕೊಟ್ಟಾಗ ಕನಿಷ್ಠ ಯೋಚನೆ ಮಾಡದ ಪೋಲೀಸರು ಅಮಾಯಕರಾದ ಹಮಾಲರನ್ನು ದಂಡಿಸುವುದು ಎಷ್ಟರ ಮಟ್ಟಿಗೆ ಸರಿ? ಆ ದುಡಿಯುವ ದುರ್ಬಲ ವ್ಯಕ್ತಿಗಳು ನೂರಾರು ಮೂಟೆಗಳನ್ನು ಎಲ್ಲಿಗೆ ಸಾಗಿಸುವುದು ಸಾಧ್ಯ? ವೆಂಬ ಕನಿಷ್ಠ ಪರಿಜ್ಞಾನವಿಲ್ಲದಂತೆ ನಡೆದು ಕೊಳ್ಳುವ ಪೋಲೀಸರ ವರ್ತನೆ ಸದಾ ಮೇಲ್ವರ್ಗದ ಪರವಾಗಿಯೇ ಕಾನೂನುಗಳು ಇರುತ್ತವೆ ಎಂಬುದನ್ನು ತೋರಿಸುತ್ತದೆ. ಭಾರತದಂತಹ ದೇಶದಲ್ಲಿ ಇಂತಹ ಕಾನೂನು ಸುಲಭವಾಗಿ ಜಾರಿಯಾಗುತ್ತವೆ. ಇಂದಿನ ಮಾಧ್ಯಮ ಜಗತ್ತಿನಲ್ಲಂತೂ ಸುಳ್ಳನ್ನು ವೈಭವೀಕರಿಸಿ ನಿಜವಾದ ವಸ್ತುಸ್ಥಿತಿಯನ್ನು ಕೆಲವೊಮ್ಮೆ ಮರೆಮಾಚುತ್ತವೆ. ಒಂದು ವೇಳೆ ಅವರ ವೈಭವೀಕರಣ ಸುಳ್ಳು ಎಂದು ಗೊತ್ತಾಗುವ ವೇಳೆಗೆ ವಾಸ್ತವಾಂಶ ಸತ್ತು ಹೋಗುತ್ತದೆ. ದುರ್ಬಲವರ್ಗದವರು ತಮಗೆ ಅನ್ಯಾಯವಾಗುತ್ತಿದೆಂದು ನಂತರದ ಮೇಲಿನ ಅಧಿಕಾರಿ ಶಾಹಿವರ್ಗಕ್ಕೆ ಹೇಳಿಕೊಂಡರೂ ಅದು ಪ್ರಯೋಜನವಾಗುವುದಿಲ್ಲವೆಂದು ಹಮಾಲರು ಡಾಕ್ಟರಿಗೆ ಹೇಳುವ ಮಾತು ಅನಾರೋಗ್ಯ ಸಮಾಜದ ಸ್ಥಿತಿಯನ್ನು ತೋರಿಸುತ್ತದೆ.

ಕಥೆಯ ಮುಂದುವರೆದ ಭಾಗದಲ್ಲಿ ಇಯಾಲಳು ಖೂನಿಯಾಗಿರುತ್ತಾಳೆ. ಅದಕ್ಕೂ ಕಾರಣ ಹಮಾಲಿಗಳೆಂದು ಪೋಲೀಸರು ತೀರ್ಮಾನಿಸುತ್ತಾರೆ. ಅವರು ಡಾಕ್ಟರ್ ಬಳಿ ತಮಗೂ ಆ ಹುಡುಗಿಯ ಸಾವಿಗೂ ಸಂಬಂಧವಿಲ್ಲವೆಂದು, ತಾವು ದಯಮಾಡಿ ಪೋಲೀಸರಿಗೆ ತಿಳಿಸಿರೆಂದು ಕೇಳಿಕೊಂಡಾಗ ಡಾಕ್ಟರ್ ನಿಜಕ್ಕೂ ಅಸಹಾಯಕನಾಗುತ್ತಾನೆ. ಆತನು ಔಷಧ ಉಪಚಾರ ಮಾಡುವಷ್ಟೇ ಶಕ್ತನೆಂದು ತನ್ನ ಪರಿಸ್ಥಿತಿಯನ್ನು ಹೇಳಿಕೊಳ್ಳುತ್ತಾನೆ. ಕೊನೆಗೆ ಹಮಾಲರು ದೈನ್ಯದಿಂದ ಡಾಕ್ಟರ್ ಬಳಿ "ಸ್ವಾಮಿ, ಒಂದು ಕೊನೆ ಉಪಕಾರ ಮಾಡ್ರಿ, ನೀವು ನಮಗೆ ಪ್ರಾಣಕೊಟ್ಟ ದೇವರಿದ್ದಂಗೆ. ಇನ್ಸ್ಪೆಕ್ಟರಿಗೆ ಹೇಳಿ. ಬೇಕಾದರೆ ನಮ್ಮ ಚಮ್ಮಡ ಸುಲಿಯಲಿ. ಆದರೆ ಬೆನ್ನು ಬಿಟ್ಟು ಬೇರೆಲ್ಲಾದರೂ ಹೊಡೆಯಲಿ ಅಂತ ಹೇಳಿ ಸ್ವಾಮಿ"[೨೫] ಎನ್ನುವ ಅವರ ಅಸಹಾಯಕತೆ, ಹತಾಶೆಗಳು ದುರ್ಬಲ ವರ್ಗದವರ ನೋವನ್ನು ತೋರಿಸುತ್ತದೆ. "ಪೋಲೀಸರು ಚಮ್ಮಡ ಸುಲಿಯುವ ಹಾಗೆ ಹೊಡೆಯಲಿ ಆದರೆ ಬೆನ್ನು ಬಿಟ್ಟು ಬೇರೆ ಕಡೆ ಹೊಡೆಯಲಿ" ಎನ್ನುವ ಅವರ ನೋವಿನ ಅಂತರಾಳದ ಮಾತುಗಳು ಡಾಕ್ಟರ್‌ನ ಶಿಸ್ತು ಸಂಯಮವನ್ನೆ ಕಲುಕುವಂತೆ ಮಾಡುತ್ತವೆ. ಹಮಾಲರಿಗೆ ಬೆನ್ನು ದುಡಿಯುವ ಶಕ್ತಿ. ಅದರ ಮೇಲೆ ಹೊಡೆದರೆ ತಾವು ದುಡಿಯುವುದಾದರೂ

ಹೇಗೆ? ಎಂಬ ನೋವಿನ ಮಾತುಗಳು ಡಾಕ್ಟರ್‌ನ ಮನಸ್ಸನ್ನು ಕಲುಕುತ್ತವೆ. ಪ್ರತಿಭಟನೆಯಲ್ಲ ಬದಲಿಗೆ ದೈನ್ಯತೆಯ ಸ್ಥಿತಿ. ಪೋಲೀಸರಿಗೆ ತಾವು ತಪ್ಪು ಮಾಡದಿದ್ದರೂ ಹೊಡೆಯುವ ಹಕ್ಕು ಇದೆ. ಆದರೆ ಬೇರೆ ಕಡೆ ಹೊಡೆಯಲಿ ಎಂಬ ಅವರ ಹತಾಶೆಯ ಮಾತುಗಳು ದುಡಿಯುವ ವರ್ಗದ ವೇದನೆಯ ದುಸ್ಥಿತಿಯನ್ನು ತೋರಿಸುತ್ತದೆ. ಯಾರದೋ ಸಾವಿಗೆ ಇನ್ಯಾರು ಕಾರಣವೆಂದು ಯೋಚಿಸುವ ಪೋಲೀಸರ ವರ್ತನೆಗಳು ನಾಗರಿಕ ಸಮಾಜವನ್ನು ತಲೆತಗ್ಗಿಸುವಂತೆ ಮಾಡುತ್ತವೆ. ತಮ್ಮದಲ್ಲದ ತಪ್ಪಿಗೆ ಶಿಕ್ಷೆಯನ್ನು ಅನುಭವಿಸುವ ದುರ್ಬಲ ವರ್ಗದವರು ಪ್ರತಿಭಟಿಸುವ ಶಕ್ತಿಯನ್ನು ಕಳೆದುಕೊಳ್ಳುತ್ತಾರೆ. ಜೊತೆಗೆ ಆ ಊರಿನಿಂದಲೇ ದೂರ ಹೋಗುವ ಅನಿವಾರ್ಯತೆ ಉಂಟಾಗುತ್ತದೆ. ಅದುವೇ ಅವರ ಪ್ರತಿಭಟನೆಯ ಮತ್ತೊಂದು ರೂಪವೆಂದು ತಿಳಿಯಬೇಕಾಗುತ್ತದೆ. ನಾಗರೀಕ ಸಮಾಜದ ಬಲಿಷ್ಠರ ಅನಾಗರಿಕ ವ್ಯಕ್ತಿಗಳ ಕಾನೂನಿನ ದುರ್ಬಳಕೆಯು ಅನಾವರಣಗೊಂಡಿದೆ.

ಸ್ವಾತಂತ್ರ್ಯೋತ್ತರ ನಗರ ಕೇಂದ್ರಿತ ಭಾರತದಲ್ಲಿ ಅಧಿಕಾರಿ ಶಾಹಿ ವರ್ಗ ದುಡಿಯುವ ವರ್ಗವನ್ನು ನಡೆಸಿಕೊಳ್ಳುವ ರೀತಿಯಿಂದ ಬೇಸತ್ತ ವ್ಯಕ್ತಿಯೊಬ್ಬನು ಬ್ರಿಟಿಷರ ಆಳ್ವಿಕೆಯೇ ಉತ್ತಮವಾಗಿತ್ತು ಎಂಬ ಅಭಿಪ್ರಾಯವನ್ನು ಪಡುತ್ತಾನೆ. ದುಡಿಯುವ ವರ್ಗಕ್ಕೆ 'ಗುಲಾಮಗಿರಿ'ಎಂಬ ಪದ ಶಾಶ್ವತವಾಗಿ ಇರುತ್ತದೆ. ಅದು ಸ್ವಾತಂತ್ರ್ಯಪೂರ್ವ ಅಥವಾ ಸ್ವಾತಂತ್ರ್ಯೋತ್ತರ ನಂತರವೂ ಇದೆ ಎನ್ನುವುದಾದರೆ ಅದರ ಕಬಂಧ ಬಾಹು ಎಷ್ಟರ ಮಟ್ಟಿಗೆ ಕೆಲಸ ಮಾಡುತ್ತಿದೆ ಎಂಬುದೊಂದು ಪ್ರಶ್ನೆ ಓದುಗನಿಗೆ ಕಾಡುತ್ತದೆ. ಬ್ರಿಟಿಷರ ವಿರುದ್ದ ಹೋರಾಡಿದ ಜನ ಸ್ವತಂತ್ರವನ್ನು ಬಯಸಿದರು ಅದು ಕೇವಲ ರಾಜಕೀಯ ಸ್ವಾತಂತ್ರ್ಯವಾಯಿತೆ ಹೊರತು ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗೆ ಸ್ವಾತಂತ್ರ್ಯವೆನ್ನುವುದು ಮರೀಚಿಕೆಯಾಯಿತು.

ದುಡಿಯುವ ವರ್ಗ ದುಡಿಯುತ್ತಲೇ ಇದೆ. ಉಣ್ಣುವ ವರ್ಗ ಅಧಿಕಾರವನ್ನು ಚಲಿಸುವ ಮೂಲಕ ತಮ್ಮ ಪಟ್ಟಭದ್ರ ಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು ಯೋಚನೆ ಮಾಡುತ್ತಲೇ ಇದೆ. ಗಾಂಧಿಯ ಚಿಂತನೆಗಳು ಪಠ್ಯಕ್ಕೆ ಸೀಮಿತವಾಗುವ ಅಪಾಯ ಹೆಚ್ಚಾಗುತ್ತಿದೆ. ತೇಜಸ್ವಿಯವರ 'ತಬರನ ಕಥೆ'ಯ ತಬರನು ಬ್ರಿಟಿಷರ ಕಾಲದಲ್ಲಿ ಸುಂಕವನ್ನು ವಸೂಲಿ ಮಾಡುವ ನೌಕರನಾಗಿದ್ದು, ಸ್ವಾತಂತ್ರ್ಯೋತರದ ನಂತರದ ದಿನಗಳಲ್ಲಿ ಕಾಫಿ ಬೋರ್ಡಿನಲ್ಲಿ ಕೆಲಸ ಮಾಡುವ ನೌಕರನಾಗಿರುತ್ತಾನೆ. ವರ್ಗ ಸಂಘರ್ಷ ಉಂಟಾಗುವುದು ಕೇವಲ ಖಾಸಗಿ ವ್ಯವಸ್ಥೆ ಮತ್ತು ಭೂ ಮಾಲೀಕರ ವಿಚಾರಕ್ಕಷ್ಟೆ ಸೀಮಿತವಾಗಿಲ್ಲ. ಅದು ಸರ್ಕಾರಿ ನೌಕರ ಶಾಹಿ ವರ್ಗದಲ್ಲೂ ನೋಡಬಹುದು. ಮೇಲಿನ ಅಧಿಕಾರಿಗಳು ತಮ್ಮ ಅಧೀನ ನೌಕರರನ್ನು ಹಿಡಿತದಲ್ಲಿಯೇ ನೋಡುತ್ತಾರೆ. ಆಧುನಿಕ ನಿರಂಕುಶ ವ್ಯಕ್ತಿಗಳಾಗಿ ಮಾರ್ಪಟ್ಟು ಅವರು ಕೂಡ ಶೋಷಣೆಯನ್ನು ಮಾಡುತ್ತಾರೆಂಬ ಅಂಶವನ್ನು ತಬರನ ಹಿನ್ನೆಲೆಯಲ್ಲಿ

ಕಾಣಬಹುದು. ತಬರನು, ತನಗಾದ ಅನ್ಯಾಯವನ್ನು ಪ್ರತಿಭಟಿಸಲು ಮುಂದಾದರೆ ಆತನೊಬ್ಬ ಹುಚ್ಚನಂತೆ ಸಮಾಜ ನೋಡುತ್ತದೆ.

ತಬರನಂತಹ ವ್ಯಕ್ತಿಗಳು ಸಮಾಜದ ಅವಕೃಪೆಗೆ ಒಳಗಾಗುತ್ತಲೇ ಬಂದಿದ್ದಾರೆ. ಅವರು ಸಂಘಟನೆಯಾಗಿ ರೂಪುಗೊಂಡು ಹೋರಾಟಮಾಡುವ ಸ್ಥಿತಿಯಲ್ಲಿ ಇಲ್ಲ. ಆಗಾಗೊಮ್ಮೆ ಸಣ್ಣದಾಗಿ ಧ್ವನಿ ಎತ್ತುವ ವ್ಯಕ್ತಿಗಳಾಗಿ ಕಂಡುಬಂದರೂ ಅವರ ಶಕ್ತಿ ಸಂಘಟನೆಯ ಮೂಲಕ ಹೋರಾಟವಾಗಿ ರೂಪುಗೊಳ್ಳುವುದಿಲ್ಲ. ಅಂತಹ ಹೋರಾಟವನ್ನು ಹತ್ತಿಕ್ಕುವ ವ್ಯವಸ್ಥಿತ ಪಿತೂರಿ ಮೇಲ್ವರ್ಗದವರು ಹಿಂದಿನಿಂದಲೂ ನಡೆಸುತ್ತಲೇ ಬಂದಿದ್ದಾರೆ.

ತಬರನು ಅಧಿಕಾರಿ ಶಾಹಿ ಅವ್ಯವಸ್ಥೆಯ ವಿರುದ್ಧವಾಗಿ ಹೋರಾಡಲು ಅಸಹಾಯಕನಾಗುತ್ತಾನೆ. ಆತನ ಹೆಂಡತಿಯು ಸಕ್ಕರೆ ಕಾಯಿಲೆಯಿಂದ ತಬರನ ಹೆಂಡತಿಯ ಕಾಲನ್ನು ತೆಗೆಯುವ ಸಂದರ್ಭವನ್ನು ಆಸ್ಪತ್ರೆಯಲ್ಲಿ ಹೇಳುತ್ತಾರೆ. ಆತನು ಮಾಂಸದಂಗಡಿಯ ಕಟುಕ ಯೂಸುಫ್‌ನನ್ನು ಆತನ ಹೆಂಡತಿಯ ಕಾಲನ್ನು ಕತ್ತರಿಸುವಂತೆ ಕೇಳುವುದು ವ್ಯವಸ್ಥೆಯ ವ್ಯಂಗ್ಯವಾಗಿದೆ. ಉಳ್ಳವರ ನಡುವಳಿಕೆಗಳು ದುರ್ಬಲವರ್ಗದವರ ಬದುಕನ್ನು ನಾಶ ಪಡಿಸುತ್ತವೆ ಎಂಬುದಕ್ಕೆ ತಬರನು ಪ್ರತಿನಿಧಿಯಾಗಿ ಕಾಣುತ್ತಾನೆ.

ಜಾತಿ ಆಧಾರಿತ ವರ್ಗ ಸಂಘರ್ಷದ ಎಳೆಯನ್ನು "ಕಿರಗೂರಿನ ಗಯ್ಯಾಳಿಗಳು" ಕಥೆಯ ಮೂಲಕ ನೋಡಬಹುದಾಗಿದೆ. ಲಾಭವನ್ನು ತಮ್ಮ ಮುಖ್ಯ ಉದ್ದೇಶ ಮಾಡಿಕೊಳ್ಳುವ ಜಾತಿಯಾಧಾರಿತ ಮೇಲ್ವರ್ಗದವರು ತಮ್ಮ ವೈಯಕ್ತಿಕ ಕಾರಣಕ್ಕಾಗಿ ದುಡಿಮೆಯಾಧಾರಿತ ಕಿರಗೂರಿನ ಸಮಾಜದ ಮಧ್ಯೆ ಸಮಸ್ಯೆಯನ್ನು ಸೃಷ್ಟಿಸಿ ಪರಿಸ್ಥಿತಿಯ ಲಾಭ ಮಾಡಿಕೊಳ್ಳುವ ಹುನ್ನಾರವನ್ನು ಕಥೆಯಲ್ಲಿನ ಗ್ರಾಮ ಸೇವಕ ಶಂಕರಪ್ಪನು ಮಾಡಲು ಹೋಗುತ್ತಾನೆ. ಸರ್ಕಾರಿ ಹಣವನ್ನು ದುರುಪಯೋಗ ಪಡಿಸಿಕೊಳ್ಳುತ್ತಾನೆ. ಸರ್ಕಾರದವರು ಕೃಷಿ ಭೂಮಿಯನ್ನು ಪರಿಶೀಲಿಸಲು ಬರುವ ಸಂದರ್ಭದಲ್ಲಿ ತನ್ನ ವೈಯಕ್ತಿಕ ಸ್ವಾರ್ಥಕ್ಕಾಗಿ ಹರಿಜನರ ಪೈಕಿ ಕರಿಯನ ಸಹಿ ಪಡೆದು ಮೇಲ್ಜಾತಿಯವರ ಮೇಲೆ 'ಜಾತಿ ನಿಂದನೆ' ದೂರನ್ನು ನೀಡುತ್ತಾನೆ. ಶಂಕ್ರಪ್ಪನ ಸ್ವಾರ್ಥಕ್ಕೆ ಕಿರಗೂರಿನ ಸಮಾಜ ಬಲಿಯಾಗುತ್ತದೆ. ಹರಿಜನರು ಮತ್ತು ಒಕ್ಕಲಿಗರ ನಡುವಿನ ವರ್ಗ ಸಂಘರ್ಷ ತಾರಕಕ್ಕೇರಿ ಹಳ್ಳಿಯನ್ನು ಅಪೋಶನ ಮಾಡುವ ಸ್ಥಿತಿಗೆ ತಂದೊಡ್ಡುತ್ತಾನೆ.

ವ್ಯಕ್ತಿಗಳ ಮೇಲಿನ ಆರೋಪದ ಬಗ್ಗೆ ಪೂರ್ವಾಪರ ಯೋಚನೆ ಮಾಡದ ಪೋಲೀಸರು ಮೇಲ್ವರ್ಗದವರ ವಿರುದ್ಧ ಜಾತಿ ನಿಂದನೆ ಕೇಸು ಹಾಕುವ ಹೆದರಿಕೆಯನ್ನು ಹಾಕುತ್ತಾರೆ. ದಲಿತಪರವಾದ ಕಾನೂನಿನ ದುರ್ಬಳಕೆಯಿಂದ ನಿಜವಾದ ಉದ್ದೇಶ ಮಾಯವಾಗುವ ಸ್ಥಿತಿಯನ್ನು ಕಥೆಗಾರ ಇಲ್ಲಿ ನೀಡುತ್ತಾನೆ. ಮುಂದೆ ಇಡೀ ಕಿರಗೂರಿನಲ್ಲಿ ಜಾತಿಯ ಕಾರಣವಾದ ಸಮಸ್ಯೆಗಳು ದುಡಿಮೆ, ಪರಸ್ಪರ ಸಹಾಯ ಇವೆಲ್ಲವೂ ದೂರವಾಗುವ

ಸ್ಥಿತಿಯನ್ನು ಶಂಕ್ರಪ್ಪನ ಸ್ವಾರ್ಥದಿಂದ ಎದುರಿಸುತ್ತಾರೆ. ಆ ಊರಿನ ಹೆಂಗಸರಿಂದ ಒಂದಷ್ಟು ಸಮಸ್ಯೆಗಳು ಬಗೆಹರಿದು ಕಥೆ ಮುಕ್ತಾಯವಾಗುತ್ತದೆ. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಗೌಣವಾಗುವ ವಾತಾವರಣದಲ್ಲಿ 'ಕಿರಗೂರಿನ ಗಯ್ಯಾಳಿಗಳು' ಕಥೆ ವಿಭಿನ್ನವಾಗಿ ನಿಲ್ಲುತ್ತದೆ. ದುರ್ಬಲ ಮತ್ತು ಮೇಲ್ವವರ್ಗದವರನ್ನು ಒಂದು ಗೂಡಿಸುವಲ್ಲಿ ಸ್ತ್ರೀಯರ ಪಾತ್ರ ಪ್ರಧಾನವಾಗುತ್ತದೆ.

ಬಲಿಷ್ಠರ ಸಮಾಜದಲ್ಲಿ ದುರ್ಬಲರು ಶೋಷಣೆಗೆ ಒಳಗಾಗುತ್ತಲೇ ಬರುತ್ತಾರೆ. ತಾವು ದೈಹಿಕವಾಗಿ ಪ್ರಬಲರಾಗಿರುತ್ತಾರೆ. ಶೋಷಣೆಗೆ ಒಳಗಾಗುತ್ತಾ ಸಮಾಜವನ್ನು ಎದುರಿಸಲು ಅಸಹಾಯಕರಾಗಿರುತ್ತಾರೆ. ಮೂಡಿಗೆರೆ ಸುತ್ತಮುತ್ತಲಿನ ಗ್ರಾಮೀಣ ನೆಲೆಗಟ್ಟಿನಲ್ಲಿರುವ ವಿಚಾರಗಳನ್ನು ತೆಗೆದುಕೊಂಡು ತೇಜಸ್ವಿಯವರು "ಕೃಷ್ಣೇಗೌಡನ ಆನೆ" ಕಥೆಯನ್ನು ಬರೆದಿದ್ದಾರೆ. ಕಥೆಯಲ್ಲಿ 'ಆನೆ' ದೈಹಿಕವಾಗಿ ಬಲಿಷ್ಠವಾಗಿದ್ದರೂ ಮಾತನಾಡುವ ಶಕ್ತಿಯನ್ನು ಕಳೆದುಕೊಂಡ ಪ್ರಾಣಿ. ತನಗಾಗುತ್ತಿರುವ ಅನ್ಯಾಯದ ವಿರುದ್ಧ ಪ್ರತಿಭಟನೆಯನ್ನು ಮಾಡಲಾರದ ಅಸಹಾಯಕ ವ್ಯಕ್ತಿಯಂತೆ ಇರುವ ಪ್ರಾಣಿ. ಮಾತನಾಡಲಾರದ ಆನೆಯ ಮೇಲೆ ಆರೋಪಗಳನ್ನು ಜನರು ಹೋರಿಸುತ್ತಲೇ ಹೋಗುತ್ತಾರೆ. ಅದು ಯಾವುದೇ ರೀತಿಯ ಪ್ರತಿರೋಧವನ್ನು ತೋರಿಸುವುದಿಲ್ಲ. ಜನಸಾಮಾನ್ಯನ ಮೇಲಿನ ಆರೋಪಗಳಿಗೆ ಮೌನವೇ ಪ್ರತಿರೋಧವೆಂಬತೆ ಆನೆ ಕಾಣಿಸಿಕೊಳ್ಳುತ್ತದೆ. ಕಥೆಯ ದುರ್ಗಪ್ಪನು ಕೆ.ಇ.ಬಿಯಲ್ಲಿ ಲೈನ್‌ಮೆನ್, ಟೆಲಿಪೋನ್ ಡಿಪಾರ್ಟ್‌ಮೆಂಟ್‌ನ ತಿಪ್ಪಣ್ಣ, ಪೋಸ್ಟ್ ಆಫೀಸಿನ ಜಬ್ಬಾರ್, ವೆಟರ್ನರಿ ಸ್ಟಾಕ್‌ಮನ್ ಪುಟ್ಟಯ್ಯರಂಥವರು ಅವ್ಯವಸ್ಥೆಯ ಬಗ್ಗೆ ಮಾತನಾಡಿದರೂ ಅದೆಲ್ಲವೂ ಅರಣ್ಯರೋಧನವಾಗಿರುತ್ತವೆಯೇ ಹೊರತು ಪ್ರತಿಭಟಿಸುವ ಶಕ್ತಿ ಪರಿವರ್ತಿತವಾಗುವುದಿಲ್ಲ. ತಮ್ಮ ಹುದ್ದೆಯ ಮೇಲಿನ ಅಧಿಕಾರಿ ಶಾಹಿಯ ವಿರುದ್ಧ ಹೋರಾಡಲು ಅಸಹಾಯಕರಾಗುತ್ತಾರೆ.

ಫಾರೆಸ್ಟರ್ ನಾಗರಾಜನು ಕೆ.ಇ.ಬಿಯ ದುರ್ಗಪ್ಪನ ಮೇಲೆ ದರ್ಪವನ್ನು ತೋರುತ್ತಾನೆ. ಆದರೆ ಅವನು ಆನೆಯ ವಿಷಯದ ವಿಚಾರದಲ್ಲಿ ಸೋಲುತ್ತಾನೆ. ಜನರ ಆಕ್ರೋಶ ಮತ್ತು ಇಲಾಖೆಯ ಆಧಿಕಾರಿ ಶಾಹಿಯ ಮಾತುಗಳಿಗೆ ಉತ್ತರ ನೀಡುವಲ್ಲಿ ವಿಫಲನಾಗುತ್ತಾನೆ. ಈತನು ಒಳಗೊಂಡಂತೆ ದುರ್ಗಪ್ಪ, ಜಬ್ಬಾರ್, ಪುಟ್ಟಯ್ಯ, ಖಾನ್ ಸಾಹೇಬನ ಆರೋಪಗಳು ಮತ್ತು ಟೆಲಿಫೋನ್ ಇಲಾಖೆಯ ತಿಪ್ಪಣ್ಣ, ಡ್ರೈವರ್ ಅಬ್ಬಾಸ್, ಕ್ಲೀನರ್ ಕೃಷ್ಣ, ಫಾರೆಸ್ಟರ್ ನಾಗರಾಜ, ವೇಲಾಯುಧನ ಸಾವುಗಳಿಗೆ 'ಕೃಷ್ಣೇಗೌಡರ ಆನೆ' ಕಾರಣವೆಂದು ಜನರು ಅರೋಪಿಸುತ್ತಾರೆ. ವರ್ಗ ಸಂಘರ್ಷದ ನೆಲೆಯಲ್ಲಿ ಅಸಹಾಯಕ ಮನುಷ್ಯರು ಬಲಿಪಶುವಾಗುವ ಜೊತೆಗೆ ಕೃಷ್ಣೇಗೌಡರ ಆನೆಯಾದ 'ಗೌರಿ'ಯೂ ಬಲಿಪಶುವಾಗುವುದು ಭ್ರಷ್ಟ ವ್ಯವಸ್ಥೆಗೆ ಹಿಡಿದ ಕನ್ನಡಿಯಾಗಿದೆ.

ಅಂತಿಮವಾಗಿ ಆನೆಯನ್ನು ಶೂಟ್ ಮಾಡುವ ನಿರ್ಧಾರಕ್ಕೆ ಬರುತ್ತಾರೆ "ಆನೆಗೆ ಜಾತಿವಸ್ತರ ಬೆಂಬಲವಾಗಲಿ ರಾಜಕಾರಣಿಗಳ ಅಭಯ ಹಸ್ತವಾಗಲಿ ರಕ್ಷಣೆಗೆ ಕಾಣಲಿಲ್ಲ"[೨೬] ಎಂಬ ವಿಚಾರಗಳು ವರ್ಗ ಹೋರಾಟದಲ್ಲಿ ಜಾತಿ ಮತ್ತು ಪ್ರಬಲ ರಾಜಕೀಯ ವ್ಯವಸ್ಥೆ ಅತಿ ಮುಖ್ಯವೆನಿಸುತ್ತವೆ. ದುಡಿಯುವ ವರ್ಗದವರಿಗೆ ಜಾತಿ ಬೆಂಬಲ, ರಾಜಕೀಯ ಹಿನ್ನೆಲೆ ಇದ್ದರೆ ಅವರು ತಮಗಾಗುತ್ತಿರುವ ಅನ್ಯಾಯದ ವಿರುದ್ದ ಹೋರಾಡಲು ಮುಂದಾಗುತ್ತಾರೆ. ಒಂದು ವೇಳೆ ಆ ಬೆಂಬಲಗಳು ಸಿಗದಿದ್ದರೆ ಅವರಲ್ಲಿ ಹೋರಾಟದ ಶಕ್ತಿ ಕುಂದುತ್ತದೆ ಎಂಬ ವಿಚಾರಕ್ಕೆ ಸಾಂಕೇತಿಕವಾಗಿ 'ಕೃಷ್ಣೇಗೌಡನ ಆನೆ' ಕಾಣುತ್ತದೆ. ಅದು ಮೂಖ ಪ್ರಾಣಿ. ಎಲ್ಲಾ ಆರೋಪಕ್ಕೆ ಪ್ರತಿಕ್ರಿಯೆ ನೀಡುವುದಿಲ್ಲ. ಮೌನವೇ ಅದರ ನಿಲುವು. ಅದರ ಮೌನವೇ ವ್ಯವಸ್ಥೆಯ ಭ್ರಷ್ಟತೆ ಹೆಚ್ಚಲು ಕಾರಣವಾಗುತ್ತದೆ. ಅನ್ಯಾಯದ ವಿರುದ್ದ ಪ್ರತಿಭಟಿಸುವುದೇ ವ್ಯಕ್ತಿಗೆ ಇರುವ ದಾರಿ. ಒಂದು ವೇಳೆ ಅದನ್ನು ಕಳೆದುಕೊಂಡರೆ ಆತನು ಒಳಗೊಂಡತೆ ಇಡೀ ಸಮಾಜ ರೋಗಗ್ರಸ್ಥವಾಗುತ್ತದೆ.

ಶ್ರೀಮಂತರ ಯಜಮಾನಿಕೆಯ ಹಿಡಿತದಿಂದ ಅಧಿಕಾರ ಶಾಹಿ ವರ್ಗ ಸುಖ ಸವಲತ್ತುಗಳನ್ನು ಪಡೆದಾಗ, ಸಮಾಜದಲ್ಲಿನ ಭ್ರಷ್ಟತೆಯ ವಿರುದ್ದ ಹೋರಾಡುವ ಶಕ್ತಿಯನ್ನು ಕಳೆದುಕೊಳ್ಳುತ್ತಾರೆ. ಇಲ್ಲಿ ಸಂಘರ್ಷಕ್ಕಿಂತ ಹೆಚ್ಚಾಗಿ ಹೊಂದಾಣಿಕೆ ಪ್ರಧಾನವಾಗುತ್ತದೆ. ಅದರ ಪರಿಣಾಮ ಅವ್ಯವಸ್ಥೆಯ ಸಮಾಜ ರೂಪುಗೊಳ್ಳುತ್ತದೆ. ಒಂದು ವೇಳೆ ಅಧಿಕಾರಿ ಶಾಹಿ ವರ್ಗ ಪ್ರತಿಭಟಿಸಲು ಮುಂದಾದರೆ ಅವರ ಅಸ್ತಿತ್ವಕ್ಕೆ ಧಕ್ಕೆ ಬರುವಂತೆ ಯಜಮಾನಿಕೆಯ ವರ್ಗ ತಂತ್ರ-ಕುತಂತ್ರಗಳನ್ನು ಹೆಣೆಯುತ್ತಾರೆ. ತೇಜಸ್ವಿಯವರು 'ಮೂಡಿಗೆರೆ ಎಂಬ ಊರು' ಎಂಬ ಕಥೆಯಲ್ಲಿ ಅಂತಹ ಅಂಶಗಳನ್ನು ಗುರ್ತಿಸುತ್ತಾರೆ.

ಮೂಡಿಗೆರೆಯ ಕಾಡಿನ ಸಂಪತ್ತು ಲೂಟಿಯಾಗುತ್ತದೆ. ಅದನ್ನು ತಡೆಗಟ್ಟುವ ವಿಚಾರಕ್ಕೆ ಸಂಬಂಧಿಸಿದಂತೆ ಲೇಖಕರು ಪೋಲೀಸ್ ಇಲಾಖೆಯವರ ಜೊತೆ ಮಾತನಾಡಿದಾಗ ಅವರು "ತಮ್ಮ ಬಳಿ ಕಳ್ಳರು ಯಾರು ಎಂಬ ಪುರಾವೆ ಇದೆ ಆದರೆ ಏನು ಮಾಡುವುದು ಕಾನೂನು ಅವರನ್ನು ತಪ್ಪಿಸಿಕೊಳ್ಳುವಂತೆ ಮಾಡುತ್ತದೆ" ಎಂದು ನ್ಯಾಯಾಂಗವನ್ನು ದೂರುತ್ತಾರೆ. ಇದೇ ವಿಚಾರವನ್ನು ನ್ಯಾಯಾಧೀಶರ ಬಳಿ ಕೇಳಿದರೆ "ಪೋಲೀಸರು ನಿಜವಾದ ಅಪರಾಧಿಗಳನ್ನು ಬಿಟ್ಟು, ನಿರಪರಾಧಿಗಳನ್ನು ಹಿಡಿಯುತ್ತಾರೆ" ಎನ್ನುತ್ತಾರೆ. ಇವೆಲ್ಲವೂ ಒಬ್ಬೊಬ್ಬರ ರಕ್ಷಣೆಗೆ ನಿಲ್ಲುತ್ತಾರೆ ಎಂದು ಭಾಸವಾಗುತ್ತದೆ. ಒಂದು ವೇಳೆ ಇದೇ ವಿಚಾರವನ್ನು ಮೂಡಿಗೆರೆ ಜನರ ಬಳಿ ಕೇಳಿದರೆ "ಇಲ್ಲಿಗೆ ಯಾವೊಬ್ಬ ನಿಷ್ಠಾವಂತ ಅಧಿಕಾರಿ ಬರಲಿ ಅವನನ್ನು ಇಲ್ಲಿಯ ಶ್ರೀಮಂತರೇ ಮನೆಗೆ ಕರೆಸಿಕೊಂಡು ಹೋಗಿ ಹೆಂಡ ಕುಡಿಸಿ ಅವನಿಗೆ ಬೇಕಾದ ಮೇಜವಾನಿ ಮಾಡಿಸಿ ಹಾಳುಮಾಡುತ್ತಾರೆ. ಹಾಗೂ ಅವನೇನಾದರೂ ನಿಷ್ಠಾವಂತನಾಗಿ ಉಳಿದ ಅನ್ನಿ ಅವನನ್ನು ಆದಷ್ಟು ಬೇಗ ತಕರಾರು

ಅರ್ಜಿ ಬರೆದು ಇಲ್ಲಿಂದ ವರ್ಗ ಮಾಡಿಸುತ್ತಾರೆ ಎಂದು ಊರನ್ನು ಊರಿನ ಶ್ರೀಮಂತರನ್ನು ದೂರಿ ಇಲ್ಲಿಗೆ ಬಂದು ಹಾಳಾದ ಅಧಿಕಾರಿಗಳ ಪಟ್ಟಿಯನ್ನೇ ಕೊಡುತ್ತಾರೆ."[೨೭]

ವರ್ಗ ಸಂಘರ್ಷಗಳು ವಿಫಲಗೊಳ್ಳುವಲ್ಲಿ ಅಧಿಕಾರ, ಬಲಿಷ್ಠ ವರ್ಗಗಳು ಆಯಾಯ ಸಮಾಜವನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿರುತ್ತಾರೆ. ಅಂಥ ಸಂದರ್ಭದಲ್ಲಿ ಹೋರಾಟಗಳು ವಿಫಲವಾಗುತ್ತವೆ. ಹೊಂದಾಣಿಕೆ ಅನಿವಾರ್ಯ ಮತ್ತು ಅವಶ್ಯಕವಾಗಿರುತ್ತದೆ. ಅಂಥ ಸಂದರ್ಭದಲ್ಲಿ ಅಸ್ತಿತ್ವ ಪ್ರಧಾನವಾಗಿರುತ್ತದೆ ಉಳಿದೆಲ್ಲ ವಿಚಾರಗಳು ಗೌಣವಾಗುತ್ತವೆ. ಇಂತಹ ವಿಚಾರಗಳು ತೇಜಸ್ವಿಯವರ ಕಥೆಗಳಲ್ಲಿ ಕಂಡುಬರುವಂತೆ ಲಂಕೇಶರ ಕಥೆಗಳಲ್ಲೂ ವರ್ಗ ಸಂಘರ್ಷದ ವಿಚಾರಗಳು ಬರುತ್ತವೆ. ಜಾತಿಯಿಂದ ರೂಪುಗೊಂಡ ಸಂಘರ್ಷಗಳು ಬಹುಪಾಲು ವೈಯಕ್ತಿಕ ಹಿತಾಸಕ್ತಿಗಳನ್ನು ಇಟ್ಟುಕೊಂಡು ಹೋರಾಟ ನಡೆಸುತ್ತವೆ. ಲಂಕೇಶರ "ಒಬ್ಬಂಟಿ" ಕಥೆಯಲ್ಲಿ ಆ ಅಂಶ ಕಾಣುತ್ತದೆ. 'ಮಾನವೇ ಪ್ರಾಣ'ವೆಂದು ಬದುಕುತ್ತಿದ್ದ ಮಂಜಣ್ಣನು ಮೇಲ್ವರ್ಗಕ್ಕೆ ಸೇರಿದ್ದವನಾಗಿರುತ್ತಾನೆ. ತಾಂಡದ ಕೆಳಜಾತಿಯ ಭಜ್ಯನು ಮಗಳ ಮದುವೆಯ ಕಾರಣಕ್ಕಾಗಿ ಐದುನೂರು ರೂಪಾಯಿ ಸಾಲ ಪಡೆದಿರುತ್ತಾನೆ. ಅನಂತರದ ದಿನಗಳಲ್ಲಿ ಮಂಜಣ್ಣನು ತನಗೆ ಬರಬೇಕಾಗಿದ್ದ ಹಣವನ್ನು ವಾಪಸ್ಸು ನೀಡುವಂತೆ ಭಜ್ಯನನ್ನು ಕೇಳುತ್ತಾನೆ. ಭಜ್ಯನು ಸಾಲವನ್ನು ಹಿಂದಿರುಗಿಸುವುದಿಲ್ಲ ಮತ್ತು ಅದಕ್ಕೆ ತಕ್ಕಂತೆ ದುಡಿಮೆಯನ್ನು ಮಾಡುವುದಿಲ್ಲ. ಆದರೆ ತಾನು ಸಾಲವನ್ನು ಪಡೆಯಲೇ ಇಲ್ಲವೆಂದು ಹೇಳುತ್ತಾನೆ. ಇಬ್ಬರಿಗೂ ಮಾತಿಗೆ ಮಾತು ಬೆಳೆದು ಜಗಳವಾಗುತ್ತದೆ. ಕೋಪದಲ್ಲಿ ಮಂಜಣ್ಣನು ಮುಳ್ಳಿನ ಕಟ್ಟಿಗೆಯಿಂದ ಹೊಡೆಯುತ್ತಾನೆ. ಅದಕ್ಕೆ ಪ್ರತಿಯಾಗಿ ಭಜ್ಯನು ಚಪ್ಪಲಿಯಲ್ಲಿ ಮಂಜಣ್ಣನಿಗೆ ಹೊಡೆಯುತ್ತಾನೆ. ಮಂಜಣ್ಣನಿಗೆ ಹಣವೂ ವಾಪಸ್ಸು ಬರುವುದಿಲ್ಲ. ಮತ್ತು 'ಚಪ್ಪಲಿಯ ಏಟಿ'ನಿಂದ ಅವಮಾನವೂ ಆಗುತ್ತದೆ. ಈ ವಿಚಾರಕ್ಕೆ ಸಂಬಂಧಿಸಿದಂತೆ ಊರಿನಲ್ಲಿ ಪಂಚಾಯ್ತಿ ಸೇರುತ್ತದೆ.

ಊರಿನ ಗೌಡನಿಗೆ ಮಂಜಣ್ಣನನ್ನು ಕಂಡರೆ ದ್ವೇಷ ಇರುತ್ತದೆ. ಅಂಥ ಸಂದರ್ಭದಲ್ಲಿ ನ್ಯಾಯ ಪಂಚಾಯ್ತಿಯಲ್ಲಿ ಮಂಜಣ್ಣನನ್ನು ಹಣ ಕೊಟ್ಟದ್ದಕ್ಕೆ ಸಾಕ್ಷಿ ಏನು ಎಂದು ಕೇಳುತ್ತಾನೆ. ಅದಕ್ಕೆ ಉತ್ತರವಾಗಿ 'ಸಾಲ ಪಡೆದ ದಿನದಂದು ಮಾತನಾಡಿರುವುದೇ ಸಾಕ್ಷಿ' ಎಂಬುದಾಗಿ ಹೇಳುತ್ತಾನೆ. 'ಮಾತಿನ ಸಾಕ್ಷಿ'ಯ ಮೇಲೆ ಯಾವ ನ್ಯಾಯವೂ ನಿಲ್ಲುವುದಿಲ್ಲವೆಂದು ತೀರ್ಮಾನಿಸಿ ಗೌಡನು ಮತ್ತೊಂದು ರೀತಿಯಲ್ಲಿ ಅವಮಾನ ಮಾಡುತ್ತಾನೆ. ಅವಮಾನದಿಂದ ತತ್ತರಿಸಿದ ಮಂಜಣ್ಣನು ಮಗ ಕೊಯ್ಲಿನ ವೇಳೆಗೆ ಊರಿಗೆ ಬಂದಾಗ ತನಗಾದ ನೋವನ್ನು ಹೇಳಿಕೊಳ್ಳುತ್ತಾನೆ. ಮಗನು ಯಾವುದೇ ಪ್ರತಿಕ್ರಿಯೆ ನೀಡಲಿಲ್ಲ. ಬದಲಿಗೆ ಮಂಜಣ್ಣನಿಗೆ ವಿರೋಧಿಯಾಗಿದ್ದ ರಾಮಣ್ಣನ ಜೊತೆ ಮಂತ್ರಿಯನ್ನು ಕಾಣಲು ಹೋಗುತ್ತಾನೆ. ಗುಮಾಸ್ತನ ಹುದ್ದೆ ಪಡೆಯುತ್ತಾನೆ. ಮಂಜಣ್ಣನು ನೋವಿನಿಂದಲೇ ಸಾಯುತ್ತಾನೆ.

ಭಜ್ಯನು ಕೆಳವರ್ಗದವನಾಗಿದ್ದರೂ ಮಾತಿನಲ್ಲಿ ನಂಬಿಕೆಯನ್ನು ಕಳೆದುಕೊಂಡಿದ್ದ ವ್ಯಕ್ತಿಯಾಗುತ್ತಾನೆ. ಸಂಘರ್ಷಗಳು ಕೆಲವೊಮ್ಮೆ ದಿಕ್ಕು ತಪ್ಪುತ್ತವೆ ಎಂಬುದಕ್ಕೆ ಭಜ್ಯನಂತಹ ನಡುವಳಿಕೆಗಳು ಕಾರಣವಾಗುತ್ತವೆ. ಮಂಜಣ್ಣನು ಉತ್ತಮ ಜಾತಿಯವನಾಗಿದ್ದರೂ ಕೂಡ ಪರಿಸ್ಥಿತಿಯನ್ನು ಎದುರಿಸಲಾರದೆ ಅಸಹಾಯಕನಾಗುತ್ತಾನೆ. ಅವನ ಊರಿನ ಗೌಡರಿಗೆ ಆತನ ಬೆಳವಣಿಗೆ ಇಷ್ಟವಿಲ್ಲದ ಕಾರಣದಿಂದ ಎರಡು ಕಡೆಯ ಅವಮಾನ ಮಂಜಣ್ಣನಿಗೆ ಆಗುತ್ತದೆ. ಆತನ ಜೀವನ ದುರಂತವಾಗುತ್ತದೆ. ಲಂಕೇಶರ ಸೂಕ್ಷ್ಮತೆಯ ಚಿಂತನೆಗಳು ಈ ಕಥೆಯಲ್ಲಿ ಕಂಡುಬರುತ್ತವೆ.

ಅಧಿಕಾರ ಶಾಹಿ ವೃತ್ತಿ ಅಹಂಗಳು ಕೆಲವರಲ್ಲಿ ವಯಸ್ಸಾದರೂ ಮುಂದುವರೆಯುತ್ತವೆ. ಅವು ಸುಲಭವಾಗಿ ಹೋಗಲು ಸಾಧ್ಯವಾಗುವುದಿಲ್ಲ. ವೃತ್ತಿಯಲ್ಲಿ ಇದ್ದಾಗ ಅಧೀನದಲ್ಲಿರುವ ವ್ಯಕ್ತಿಗಳ ಮೇಲೆ ತೋರುವ ದರ್ಪವು ನಿವೃತ್ತಿ ಹೊಂದಿದ ನಂತರವು ಇರುತ್ತದೆ ಎಂಬುದನ್ನು ಲಂಕೇಶರು 'ನಿವೃತ್ತರು' ಕಥೆಯಲ್ಲಿ ತಂದಿದ್ದಾರೆ. ರೆವಿನ್ಯೂ ಆಫೀಸಿನಲ್ಲಿ ನರಸಿಂಗರಾಯರ ಅಧೀನದಲ್ಲಿ ಪ್ರಹ್ಲಾದರಾಯನು ಕೆಲಸ ಮಾಡುತ್ತಿರುತ್ತಾನೆ. ಇಬ್ಬರಿಗೂ ನಿವೃತ್ತಿಯಾಗಿದೆ. ಆದರೆ ನರಸಿಂಗರಾಯನಲ್ಲಿ ಅಧಿಕಾರ ಚಲಾಯಿಸಲು ಸಾಧ್ಯವಿಲ್ಲ. ಪ್ರಹ್ಲಾದರಾಯನಲ್ಲಿ ವಿಧೇಯತೆ ಇಲ್ಲ. ಇಬ್ಬರು ಸ್ನೇಹಿತರಾಗಲು ಯತ್ನಿಸಿ ಸೋಲುತ್ತಾರೆ.

ವ್ಯಕ್ತಿಯ ಅಹಂಗಳು ಅವರ ಅಂತ್ಯದೊಂದಿಗೆ ಕೊನೆಗೊಳ್ಳುತ್ತವೆ. ಅವುಗಳಿಂದ ಹೊರಬರಲು ಅವರುಗಳಿಗೆ ಸಾಧ್ಯವಾಗುವುದಿಲ್ಲವೆಂಬುದಕ್ಕೆ ನರಸಿಂಗರಾಯ ಮತ್ತು ಪ್ರಹ್ಲಾದರಾಯರ ಪ್ರತಿಷ್ಠೆಗಳು ಇಬ್ಬರ ವ್ಯಕ್ತಿತ್ವವನ್ನು ಹಾಳುಮಾಡುತ್ತದೆ. ನಗರದ ವೃತ್ತಿ ನಿರತ ವರ್ಗದ ನರಸಿಂಗರಾಯನು ನಿವೃತ್ತಿ ಹೊಂದಿದ್ದರೂ ತನ್ನ ದರ್ಪವನ್ನು ತೋರಿಸುವುದು ಹಾಸ್ಯಾಸ್ಪದವಾಗಿದೆ. ಹಾಗೆಯೇ ಪ್ರಹ್ಲಾದರಾಯನು ವೃತ್ತಿಯಲ್ಲಿ ಇದ್ದಾಗ ನರಸಿಂಗರಾಯನ ವೃತ್ತಿ ಘಟನೆಗಳನ್ನು ಹೇಳುವುದು ಕೂಡ ಹಾಸ್ಯಾಸ್ಪದವಾಗಿದೆ. ವಂಶಪಾರಂಪರ್ಯವಲ್ಲದ ವೃತ್ತಿಯನ್ನು ಪಡೆದ ಇಬ್ಬರು ನಿವೃತ್ತರಾದ ನಂತರವೂ ಸಂಘರ್ಷನಡೆಸುವುದು ವಿಪರ್ಯಾಸ.

ಜಾತಿ ನಿರ್ಮಿತ ವರ್ಗ ಜಗತ್ತಿನಲ್ಲಿ ಅಮಾಯಕರು ಕಷ್ಟವನ್ನು ಅನುಭವಿಸುತ್ತಾರೆ. ಅವರ ಜಾತಿಗಳು ಪ್ರಬಲವೆಂದು ಭಾವಿಸುತ್ತಾರೆ. ಆಯಾ ಜಾತಿ ವ್ಯಕ್ತಿಗಳು ತಮ್ಮ ರಕ್ಷಣೆಗೆ ನಿಲ್ಲುತ್ತಾರೆ. ತಮ್ಮ ಬದುಕಿಗೆ ದಾರಿ ತೋರಿಸುತ್ತಾರೆ ಎಂಬ ಭ್ರಮೆಗೆ ಒಳಗಾಗುತ್ತಾರೆ. ಅದರಲ್ಲೂ ಜಾತಿ ನಿರ್ಮಿತ ಅಪಾಯಕಾರಿ ವಲಯ ಗ್ರಾಮೀಣ ಭಾಗದಲ್ಲಿ ಹೆಚ್ಚಾಗಿರುತ್ತದೆ. ಆ ಜಾತಿಗಳ ಬೆನ್ನು ಹತ್ತುವ ಮಠಮಾನ್ಯಗಳು, ರಾಜಕಾರಣಿವರ್ಗಗಳು ಜಾತಿಯ ಬೇಲಿಯನ್ನು ಹಾಕಿರುತ್ತಾರೆ. ಬಹುಪಾಲು ಅಮಾಯಕರು ಆ ಬೇಲಿಯ ಒಳಗೆಯೆ ಬಂಧಿಯಾಗಿರುತ್ತಾರೆ. ಜಾತಿಗಿಂತ ವೃತ್ತಿಯ ಮಾನವೀಯತೆಗಳು ಪ್ರಮುಖವಾಗಿರುತ್ತವೆ

ಎಂಬುದು ಅವರ ಅನುಭವಕ್ಕೆ ಬಂದಾಗ ಮಾತ್ರ ಹೊರಬರಲು ಪ್ರಯತ್ನಿಸುತ್ತಾರೆ. ಅಂತಹ ಘಟನೆ ಲಂಕೇಶರ "ಮುಟ್ಟಿಸಿಕೊಂಡವನು" ಕಥೆಯಲ್ಲಿ ಕಾಣುತ್ತದೆ. ಜಾತಿಯಾಧಾರಿತ ಸಮಾಜದಲ್ಲಿ ವೃತ್ತಿಗಳಿಗೆ ಗೌರವ ಕಡಿಮೆಯೆನಿಸುವಷ್ಟರ ಮಟ್ಟಿಗೆ ಬಸಲಿಂಗನ ನಡವಳಿಕೆಗಳು ಕಂಡು ಬರುತ್ತವೆ. ಎಡಗಣ್ಣಿನ ನೋವಿನ ಕಾರಣಕ್ಕಾಗಿ ಡಾ. ತಿಮ್ಮಪ್ಪನನ್ನು ಕಾಣಲು ಹೋಗುತ್ತಾನೆ. ಡಾಕ್ಟರ್ ವಿಶ್ವಾಸದಿಂದಲೇ ಅವನನ್ನು ಪರೀಕ್ಷಿಸಿ, ಅಪರೇಷನ್ ಮಾಡುತ್ತಾರೆ. ಜೊತೆಗೆ " ನೋಡು, ಇದು ಸೂಕ್ಷ್ಮವಾದ ಶಸ್ತ್ರ ಚಿಕಿತ್ಸೆ, ನೀನು ಎರಡುವಾರ ತಲೆಗೆ ನೀರನ್ನು ಸೋಂಕಿಸಬಾರದು. ನೀರು ಬಿದ್ದರೆ ಕಣ್ಣು ಕೆಟ್ಟುಹೋಗುವ ಅಪಾಯ ಇದೆ. ಇದನ್ನು ಸರಿಯಾಗಿ ನೆನಪಿಟ್ಟುಕೋ."[೨] ಎಂಬ ಎಚ್ಚರಿಕೆಯನ್ನು ಕೊಡುತ್ತಾರೆ. ಬಸವಲಿಂಗನಿಗೆ ಡಾಕ್ಟರ್ ಮೇಲೆ ವಿಚಿತ್ರವಾದ ಪ್ರೀತಿ ಬೆಳೆದಿರುತ್ತದೆ. ಬಸಲಿಂಗನು ಮನೆಗೆ ಹೋಗುತ್ತಾನೆ. ಹೆಂಡತಿ ಸಿದ್ಲಿಂಗಿ ಡಾಕ್ಟರ್ ತಿಮ್ಮಪ್ಪ ಹೊಲೆಯನೆಂದು ತಿಳಿದು ದೊಡ್ಡ ರಾದ್ಧಾಂತವನ್ನು ಮಾಡುತ್ತಾಳೆ. ಬಸಲಿಂಗನಿಗೂ ಕೂಡ ತಿಮ್ಮಪ್ಪ ಹೊಲೆಯನೆಂದು ತಿಳಿದಾಗ ತನ್ನ ನೋವಿಗಿಂತ ಹೆಚ್ಚಾಗಿ ಅವನ ಜಾತಿಯ ಬಗ್ಗೆ ವ್ಯಥೆಯಾಗುತ್ತದೆ. ಒಂದು ಕ್ಷಣ ಆ ರೀತಿಯಲ್ಲಿ ಯೋಚಿಸುವುದು ತಪ್ಪು ಎನಿಸುತ್ತದೆ. ಆದರೂ 'ಮೈಲಿಗೆ ' ಎಂಬ ಕಾರಣಕ್ಕಾಗಿ ಡಾಕ್ಟರ್‌ನ ಎಚ್ಚರಿಕೆಯನ್ನು ಕಡೆಗಣಿಸಿ ಬಿಸಿನೀರಿನಲ್ಲಿ ಸಿದ್ಲಿಂಗಿಯು ಬಸಲಿಂಗನಿಗೆ ಸ್ನಾನ ಮಾಡಿಸುತ್ತಾಳೆ.

ಬಸಲಿಂಗನ ಮನಸ್ಸು ಹಗುರವಾದರೂ ಪುನಃ ಕಣ್ಣಿನ ನೋವು ಉಲ್ಬಣಿಸುತ್ತದೆ. ಬಸಲಿಂಗನು ಆಗ ಹೊಲೆಯನೆಂಬ ಕಾರಣಕ್ಕಾಗಿ ತಿಮ್ಮಪ್ಪನನ್ನು ಬಿಟ್ಟು ಉಳಿದೆಲ್ಲಾ ಡಾಕ್ಟರ್ ಬಳಿ ಹೋಗುತ್ತಾನೆ. ಯಾವ ಪ್ರಯೋಜನವೂ ಆಗುವುದಿಲ್ಲ. ಪುನಃ ತಿಮ್ಮಪ್ಪನ ಬಳಿಯೇ ಹೋಗುತ್ತಾನೆ. ಆಗ ತಿಮ್ಮಪ್ಪನು ಔಷಧಿಯನ್ನು ಕೊಡುತ್ತಾನೆ. ಇದರಿಂದ ಬಸಲಿಂಗನಿಗೆ ಸಿಟ್ಟು ಬರುತ್ತದೆ. "ತನ್ನ ಜಾತಿಯನ್ನು ಕೆಡಿಸಿದ ತಿಮ್ಮಪ್ಪನು ತನ್ನ ಕಣ್ಣು ಹೋಗಲು ಅದ್ಯಾವುದೋ ರೀತಿಯಲ್ಲಿ ಕಾರಣ" ಎನ್ನುವ ಹಾಗೆ ಯೋಚಿಸುತ್ತಾನೆ. ಬಲ್ಲವರ ಜೊತೆ ಹೇಳಿಕೊಂಡು ತಿಮ್ಮಪ್ಪನನ್ನು ಟೀಕಿಸುತ್ತಾನೆ. ಸುಳ್ಳನ್ನೆ ಸತ್ಯವಾಗಿಸಿ ಮಾತನಾಡುತ್ತಾನೆ.

ಪ್ರತಿಯೊಂದು ಜಾತಿಯ ವ್ಯಕ್ತಿಗಳು ವೃತ್ತಿ ಮತ್ತು ಮಾನವೀಯತೆಯಿಂದ ಮಾಡುವ ಕೆಲಸಗಳು ಫಲವನ್ನು ನೀಡಿದರೆ ಸಮಾಜ ಸ್ವಲ್ಪಕಾಲ ಸ್ಮರಿಸಿ ಮರೆಯುತ್ತದೆ. ಒಂದು ವೇಳೆ ಆ ಕೆಲಸದ ಫಲ ದೊರೆಯದಿದ್ದರೆ ಜಾತಿಯನ್ನು, ಅವರ ವೃತ್ತಿಯನ್ನು ಹಿಡಿದು ಜರಿಯುತ್ತದೆ. ಬಸಲಿಂಗನು ಕೂಡ ಇದರಿಂದ ಹೊರತಾಗಲಿಲ್ಲ. ಅಮಾಯಕನಾಗಿ ಕಂಡುಬಂದರೂ ತನಗೆ ಕಣ್ಣಿನ ನೋವು ವಾಸಿಯಾಗದ ಕಾರಣಕ್ಕಾಗಿ ತಿಮ್ಮಪ್ಪನ ವೃತ್ತಿಯನ್ನು ಆತನ ಜಾತಿಯನ್ನು ಹಿಡಿದು ಜರಿಯುತ್ತಾನೆ. ದುರಾದೃಷ್ಟವಶಾತ್ ಬಸಲಿಂಗನಿಗೆ ಬಲಗಣ್ಣಿನ

ನೋವು ಪ್ರಾರಂಭವಾಗುತ್ತದೆ. ಪುನಃ ಬಸಲಿಂಗನು ತಿಮ್ಮಪ್ಪನ ಬಳಿ ಹೋಗುವ ಅನಿವಾರ್ಯತೆ ಬರುತ್ತದೆ. ಆಗ ತಿಮ್ಮಪ್ಪ "ಬಸಲಿಂಗಪ್ಪ, ನಾನು ನಿನ್ನನ್ನು ಮುಟ್ಟಿದ್ದು ಡಾಕ್ಟರಾಗಿ; ಆದರೆ ನಿನ್ನಂಥ ಮುಗ್ಧ ಮನುಷ್ಯನಲ್ಲಿ ಕೂಡ ಈ ಮುಟ್ಟುವಿಕೆ ನಾನು ಊಹಿಸದೆ ಇದ್ದದ್ದನ್ನು ಮಾಡಿದೆ. ಅದು ನಿನ್ನ ತಪ್ಪಲ್ಲ. ಇದಕ್ಕಾಗಿ ನಾನು ಯಾರನ್ನೂ ಬೈಯುವುದಿಲ್ಲ. ನೀನು ಈ ಸಲ ಒಂದು ಕೆಲಸ ಮಾಡು. ನನ್ನ ಹೆಸರನ್ನು ಹೇಳಿ ಡಾಕ್ಟರ್ ಚಂದ್ರಪ್ಪನವರನ್ನು ನೋಡು. ಅವರು ನನ್ನಷ್ಟೇ ಒಳ್ಳೆಯ ಡಾಕ್ಟರು. ಏನೂ ತಪ್ಪು ತಿಳಿಯಬೇಡ."[೨೫] ಅಂದರು. ಡಾಕ್ಟರ್ ತಿಮ್ಮಪ್ಪನವರು ವೃತ್ತಿಯ ಮೂಲಕ ವ್ಯಕ್ತಿಯನ್ನು ನೋಡಿದರೆ ಬಸಲಿಂಗನು ಜಾತಿಯ ಮೂಲಕ ವ್ಯಕ್ತಿಯನ್ನು ನೋಡಲು ಹೋಗುವುದೇ ಸಮಸ್ಯೆಯಾಗಿ ಕಾಣುತ್ತದೆ. ಬಸಲಿಂಗನಿಗೆ ತಿಮ್ಮಪ್ಪನ ಬಗ್ಗೆ ದ್ವೇಷ ಕಡಿಮೆಯೇ ಆಗುತ್ತದೆ. ಡಾಕ್ಟರ್ ಚಂದ್ರಪ್ಪನನ್ನು ಭೇಟಿ ಮಾಡಲು ಹೋದಾಗ ಚಂದ್ರಪ್ಪನವರು ತಿಮ್ಮಪ್ಪನವರು ವೃತ್ತಿಯ ಮಹತ್ವವನ್ನು ತಿಳಿಸುತ್ತಾರೆ. "ವೈದ್ಯಲೋಕದ ಪ್ರತಿಭಾವಂತ ಡಾಕ್ಟರ್ ತಿಮ್ಮಪ್ಪನವರು" ಎಂದು ಹೇಳುತ್ತಾರೆ. ಅಂತಿಮವಾಗಿ ಬಸಲಿಂಗನು ತಿಮ್ಮಪ್ಪನವರ ಬಳಿಯೇ ಬಲಗಣ್ಣಿನ ನೋವಿಗೆ ಚಿಕಿತ್ಸೆ ಪಡೆಯುತ್ತಾನೆ. ಮಾನಸಿಕವಾದ ಜಾತಿಯ ರೋಗದಿಂದಲೂ ಮುಕ್ತನಾಗುತ್ತಾನೆ. ಲಂಕೇಶ್‌ರವರು ಮನುಷ್ಯನ ದೃಷ್ಟಿಯಲ್ಲಿ ಜಾತಿಯ ಬಗ್ಗೆ ಇರುವ ಅಜ್ಞಾನ ಮತ್ತು ಅಂಧಾಭಿಮಾನ ಬಗ್ಗೆ ವಿಶ್ಲೇಷಣಾತ್ಮಕವಾಗಿ ಮತ್ತು ವೈಜ್ಞಾನಿಕವಾಗಿ ಬಸಲಿಂಗನ ಮತ್ತು ತಿಮ್ಮಪ್ಪನ ವಿಚಾರವಾಗಿ ಉತ್ತರ ನೀಡುತ್ತಾರೆ. ಜಾತಿಯನ್ನು ವೃತ್ತಿಯ ಹಿನ್ನೆಲೆಯಲ್ಲಿ ನೋಡಿದಾಗ ಆಗುವ ಅನಾಹುತಗಳ ಬಗ್ಗೆ ಸಮಾಜಕ್ಕೆ ಒಂದು ಎಚ್ಚರಿಕೆಯ ಗಂಟೆಯನ್ನು ಲಂಕೇಶರವರು ನೀಡಿದ್ದಾರೆ.

ಅನೇಕ ಬಾರಿ ಜಾತಿ ಹಿನ್ನೆಲೆಯಲ್ಲಿ ನಡೆಯುವ ಸಂಘರ್ಷಗಳಿಗೆ ಅರ್ಥ ಇರುವುದಿಲ್ಲ. ಮೇಲ್ವರ್ಗದ ಜನಕ್ಕೆ ದುಡಿಮೆಯಲ್ಲಿ ಬಹುಪಾಲು ಆಸರೆಯಾಗುವವರು ದುರ್ಬಲ ವರ್ಗದವರು. ಆದರೆ ಅದನ್ನು ಮರೆತು ತಮ್ಮ ಅಜ್ಞಾನವನ್ನು ಪ್ರದರ್ಶನ ಮಾಡುತ್ತಾರೆ. ದೇವಸ್ಥಾನದ ವಿಗ್ರಹ ಕೆತ್ತುವವನು ಕೆಳಜಾತಿಯವನಾದರೆ, ಕೆತ್ತಿದ ವಿಗ್ರಹವನ್ನು ಒಳಗೊಂಡ ದೇವಸ್ಥಾನವನ್ನು ಕಟ್ಟುವವನು ಕೆಳಜಾತಿಯವನಾದರೆ, ಆ ದೇವಸ್ಥಾನದಲ್ಲಿ ಪೂಜೆ ಮಾಡುವವನು ಮೇಲ್ವರ್ಗದವನಾಗಿರುತ್ತಾನೆ. ಅಂತಹ ದೇವಸ್ಥಾನಕ್ಕೆ ಕೆಳವರ್ಗಕ್ಕೆ ಪ್ರವೇಶ ನೀಡದಿರುವುದು ಮೇಲ್ವರ್ಗದ ಅಜ್ಞಾನವನ್ನು ಪ್ರತಿನಿಧಿಸುತ್ತದೆ. ಅಂಥ ವಿಪರ್ಯಾಸ ಸಂದರ್ಭಗಳು ದೂರವಾಗದ ಹೊರತು ಉತ್ತಮ ಸಮಾಜದ ನಿರ್ಮಾಣ ಅಸಾಧ್ಯ.

ವ್ಯಕ್ತಿಗಳಲ್ಲಿ ಅಡಕವಾಗಿರುವ ಜಾತಿಯ ಸ್ವಪ್ರತಿಷ್ಠೆಗಳು ಹೆಚ್ಚಾದಂತೆ ಅವರಲ್ಲಿ ತನ್ನ ಸುತ್ತಮುತ್ತಲಿನ ಘಟನೆಗಳ ಬಗ್ಗೆ ಅರಿವು ಕಡಿಮೆಯಾಗುತ್ತದೆ. ಅದರಲ್ಲೂ ಶ್ರೀಮಂತಿಕೆಯಿಂದ ಕೂಡಿದ ವ್ಯಕ್ತಿಗಳಲ್ಲಿ ಜಾತಿಯ ಮೇಲಿನ ಅಹಂಗಳು ಹೆಚ್ಚಾದಷ್ಟು ಅವರ ಸುತ್ತಮುತ್ತಲಿನ

ಸಮಾಜ ಅನಾರೋಗ್ಯದಿಂದ ಬಳಲುತ್ತದೆ. ಅದಕ್ಕೆ ತಿಳಿದ ವ್ಯಕ್ತಿಗಳು ಮುಲಾಮು ಹಚ್ಚುವವರೆಗೂ ಅದರ ಬೆಳವಣಿಗೆ ಹೆಚ್ಚಾಗುತ್ತಾ ಹೋಗುತ್ತದೆ. ಲಂಕೇಶರ ಕಥೆಗಳ ವಿಶೇಷತೆಯೆಂದರೆ ಆಯಾ ಕಥೆಗಳಲ್ಲಿಯೇ ಜಾತಿ ವಿಚಾರಕ್ಕೆ ನಡೆಯುವ ಸಂಘರ್ಷಕ್ಕೆ ಪರಿಹಾರವನ್ನು ಸೂಚಿಸುವುದು. ಈ ನಿಟ್ಟಿನಲ್ಲಿ 'ಸಹಪಾಠಿ' ಕಥೆ ಮುಖ್ಯವೆನಿಸುತ್ತದೆ.

ಗ್ರಾಮೀಣ ಭಾಗದಲ್ಲಿ ಯಜಮಾನಿಕೆಯ ನಡೆಸುವ ಕುಟುಂಬಗಳು ತಮ್ಮದೇ ಆದ ವರ್ಗ ಸಾಮ್ರಾಜ್ಯವನ್ನು ನಿರ್ಮಿಸಿಕೊಂಡಿರುತ್ತವೆ. ಅವರ ಜಾತಿಯ ಕುಟುಂಬಗಳ ಜೊತೆಗೆ ದುಡಿಯುವ ವರ್ಗ ಇರಲೇಬೇಕಾದ ಕಾರಣ ಇನ್ನಿತರ ಜಾತಿಗಳು ಸಹಜವಾಗಿ ಇರುತ್ತವೆ. ಆ ಗ್ರಾಮದ ಯಜಮಾನಿಕೆಯ ವ್ಯಕ್ತಿಯ ಮಾತುಗಳು ಅಘೋಷಿತ ಕಾನೂನುಗಳು. ಅವನ್ನು ಮೀರಿದರೆ ಶಿಕ್ಷೆ ಎನ್ನುವುದು ಸರ್ವೇಸಾಮಾನ್ಯವಾಗಿರುತ್ತದೆ. ಅವರು ನಡೆಸುವ ಅನಾಚಾರಗಳು, ಅತ್ಯಚಾರಗಳನ್ನು ಯಾರು ಪ್ರಶ್ನಿಸುವಂತಿಲ್ಲ. ಸಹಜವಾದ ನಿರುಂಕುಶ ಪ್ರಭುಗಳು ತಾವು ಮಾಡಿದ ಅನ್ಯಾಯಗಳಿಗೆ ದೈಹಿಕ ಮತ್ತು ಮಾನಸಿಕವಾಗಿ ನರಳುತ್ತಾರೆ. ಅಂತಹ ವ್ಯಕ್ತಿಗಳಿಗೆ ಅವರು ತಿರಸ್ಕರಿಸಿದ ಸಮಾಜದ ವ್ಯಕ್ತಿಗಳೆ ಪರಿಹಾರವನ್ನು ನೀಡುವ ವಿಚಾರವನ್ನು ಲಂಕೇಶ್‌ರವರು 'ಸಹಪಾಠಿ'ಕಥೆಯಲ್ಲಿ ತರುತ್ತಾರೆ.

'ಸಹಪಾಠಿ'ಕಥೆಯು ಕಿರುಮಲ್ಲಿಗೆಯ ಕುರುಬ ಜಾತಿಯ ಬಸವೇಗೌಡನನ್ನು ಕೇಂದ್ರೀಕರಿಸಿ ರಚನೆಗೊಂಡಿದೆ. ಬಸವೇಗೌಡನ ಊರಿನ ದ್ಯಾಮಪ್ಪ ವಿಲೇಜ್ ಅಕೌಂಟೆಡ್ ಆಗಿರುತ್ತಾನೆ. ಆತನು ಕೂಡ ಕುರುಬ ಜಾತಿಯವನಾಗಿರುತ್ತಾನೆ. ಬಸವೇಗೌಡನ ಕಾಯಿಲೆಯ ವಿಚಾರವಾಗಿ ಭಗವಾನ್ ನೆಂಬ ಬಸವೇಗೌಡನ ಸ್ನೇಹಿತನಿಗೆ ಪತ್ರವನ್ನು ಬರೆದು ಅವರನ್ನು ಕಾಣುವ ತವಕವಿದೆ ಎಂದು ಪತ್ರದಲ್ಲಿ ಉಲ್ಲೇಖಿಸಿರುತ್ತಾನೆ. ಆ ಕಾರಣಕ್ಕಾಗಿ ಭಗಾವಾನ್‌ನು ಕಿರುಮಲ್ಲಿಗೆ ಬರುತ್ತಾನೆ. ಆ ಸಂದರ್ಭದಲ್ಲಿ ಬಸವೇಗೌಡನ ಬಗ್ಗೆ ದ್ಯಾಮಪ್ಪನು ದರಬಾರನ್ನು ಹೇಳುತ್ತಾನೆ. " ಕಿರುಮಲ್ಲಿಗೆ, ತರದೂರು, ಮನವಳ್ಳಿ, ಮೂರ್ಜಿ ಈ ನಾಲ್ಕು ಗ್ರಾಮಕ್ಕೆ ದೊರೆ ಬಸವೇಗೌಡ್ರು, ಪಟೇಲ್‌ಗಿರಿ ಹೋದದ್ದೇ ಊರವರಿಗೆ ಗೊತ್ತಿಲ್ಲ. ದೂರದ ನೆಂಟನಾದ ನಾನೇ ಗ್ರಾಮಲೆಕ್ಕಿಗನಾಗಿ ಹೋದ ಮೇಲೆ ಅಮಲ್ದಾರ, ಶೇಖ್‌ದಾರ, ಸಬ್‌ಇನ್ಸಪೆಕ್ಟರ್ ಯಾರೂ ನಮ್ಮೂರುಗಳಿಗೆ ಕಾಲಿಟ್ಟಿದ್ದೇ ಇಲ್ಲ. ಬಸವೇಗೌಡ್ರು ಹೆಚ್ಚಿಗೆ ಮಾತಾಡೋರಲ್ಲ. ಅವರು ತಲೆದೂಗಿದರೆ ಆಯಿತು, ಅದೇ ಮಾತು. ನಾಲ್ಕೂ ಊರಲ್ಲಿ ಬ್ಯಾಡರ, ಕುರುಬರ ಏಳನೂರು ಮನೆ ಇವೆ. ಲಿಂಗಾಯುತ ಹತ್ತು ಕುಟುಂಬ, ಹರಿಜನರ ನೂರು ಕುಟುಂಬ, ಹಬ್ಬ ಹರಿದಿನ ಎಲ್ಲ ಗೌಡರ ಉಸ್ತುವಾರಿಯಲ್ಲೆ. ಯಾರಾದರು ಭಾಷಣ ಮಾಡಬೇಕೆಂದರೆ ಬಸವೇಗೌಡ್ರ ಜೊತೆಗೇ ಬರಬೇಕು. ಒಂದ್ಸಲ ಏನಾಯ್ತು ಅಂತೀರಾ, ಬೆಂಗಳೂರಿನ ಒಬ್ಬ ಹುಡುಗ ದಾರಿತಪ್ಪಿ ನಮ್ಮ ಗುಡ್ಡಗಳ ನಡುವೆ ಬಂದ; ತಾನೊಬ್ಬ ಕಮ್ಯುನಿಷ್ಟ್ ಅಂತಾನು ಈ ಮನವಳ್ಳಿಯಲ್ಲಿ ಅಕ್ಷರತೆಯೇ ಇಲ್ಲದ್ದು ವಿಷಾದಕರ ಅಂತಾನೂ ಯಾವನೋ

ಈ ಬಸವೇಗೌಡ ಅಂತಾನೂ ತಲೆ ಕೆಟ್ಟು ಮಾತಾಡತೊಡಗಿದ. ಆತನ ಮಾತು ಕೇಳುತ್ತಿದ್ದವರು ನಾಲ್ಕೇ ಜನ ಅನ್ನಿ, ಹೇಗೋ ಜನಕ್ಕೆ ಗೊತ್ತಾಗಿ ಅಲ್ಲಿಗೆ ಬಂದು ನಾಕು ಬಿಗಿದು ಓಡಿಸಿದರು."[೩೦] ಎನ್ನುವ ಅವನ ಮಾತುಗಳು ಗೌಡನ ಹಿಡಿತವನ್ನು ತೋರಿಸುತ್ತದೆ. ಎಲ್ಲವೂ ಆತನ ಉಸ್ತುವಾರಿಯಲ್ಲೆ ನಡೆಯಬೇಕೆನ್ನುವ ಆ ಊರುಗಳ ಸ್ವಾತಂತ್ರ್ಯ ರಹಿತ ಗುಲಾಮಿ ಬದುಕು ಅಲ್ಲಿನ ಇತರೆ ವರ್ಗಗಳ ಅಸಹಾಯಕತೆಯನ್ನು ತಿಳಿಸುತ್ತದೆ. ಶಿಕ್ಷಣವು ಆಧುನಿಕ ಚಿಂತನೆಗೆ ಅವಕಾಶ ಮಾಡಿಕೊಡುತ್ತದೆ. ಅಂಥ ವಿಚಾರವನ್ನು ಹೇಳಲು ಬಂದ ಹುಡುಗನಿಗೆ ಅಲ್ಲಿನ ಜನರು ಹೊಡೆದು ಓಡಿಸಿದರು ಎನ್ನುವ ದ್ಯಾಮಪ್ಪನ ಹೆಮ್ಮೆಯ ಮಾತುಗಳು ಗುಲಾಮಿ ಸಂಕೇತವಾಗಿ ಕಾಣುತ್ತವೆ.

ಶಿಕ್ಷಣದ ಬಗ್ಗೆ ಸರ್ಕಾರದ ನಿಲುವು ಅಥವಾ ಬಸವೇಗೌಡನ ನಿಲುವೋ ಊರಿಗೆ ಒಂದು ಸ್ಕೂಲು ಬರುತ್ತದೆ. ಆ ವಿಚಾರವಾಗಿ ನಾಲ್ಕು ಊರಿನ ಎಲ್ಲಾ ಜನತೆ 'ಸ್ಕೂಲು ಬೇಡ' ಎನ್ನುವ ಮಾತು ಅವರ ಅಜ್ಞಾನವನ್ನು ತೋರಿಸುತ್ತದೆ. ಆದರೂ ಸ್ಕೂಲು ಊರಿಗೆ ಬರುತ್ತದೆ. ಅದಕ್ಕೆ ಶಿಕ್ಷಕನಾಗಿ ಹೊಲೆಯರ ಶಿವಪ್ಪ ಅಂತವನು ಬರುತ್ತಾನೆ. ಆರಂಭದಲ್ಲಿ ಹೊಂದಾಣಿಕೆ ಇರುತ್ತದೆ. ಕಾಲಕ್ರಮೇಣ ಶಿವಪ್ಪನ ರೀತಿ–ನೀತಿಗಳಿಗೂ ಬಸವೇಗೌಡನ ರೀತಿ–ನೀತಿಗಳಿಗೂ ಸಂಘರ್ಷವೇರ್ಪಡುತ್ತದೆ. ಶೈಕ್ಷಣಿಕವಾಗಿ ಬೆಳವಣಿಗೆ ಹೊಂದಿದ್ದಂತೆ ಹೊಸ ಆಲೋಚನೆಗಳು ಬರಲಾರಂಭಿಸುತ್ತವೆ. ಸಮಾಜದ ಚಿಂತನೆಗೆ ಅವಕಾಶ ಉಂಟಾಗುತ್ತದೆ. ಅದು ಬಸವೇಗೌಡನಂತಹ ಯಜಮಾನಿಕೆಯ ವ್ಯಕ್ತಿಗಳಿಗೆ ಒಪ್ಪಿತವಾಗಿರುವುದಿಲ್ಲ. ನೆಪ ಮಾತ್ರಕ್ಕೆ ಊರಿಗೆ ಸ್ಕೂಲು ಇರಲಿ ಎಂಬುವ ಗೌಡ ಬದಲಾವಣೆಯನ್ನು ಬಯಸುವುದಿಲ್ಲ. ಬಸವೇಗೌಡನು ಶಿವಪ್ಪನ ಮೇಲೆ ಹಗೆ ಸಾಧಿಸುತ್ತಾನೆ. ಅಧೀನದಲ್ಲಿರಬೇಕೆಂದು ತನ್ನ ದರ್ಪವನ್ನು ತೋರುತ್ತಾನೆ. ಊರಿನಲ್ಲಿ ಯಾವುದೇ ಅನಾಹುತವಾದರೂ ಅದಕ್ಕೆಲ್ಲಾ ಶಿವಪ್ಪನು ಹೊಣೆಗಾರನೆಂದು ಊರಲ್ಲಿ ನಂಬುವಂತೆ ಮಾಡುತ್ತಾನೆ. ಕೊನೆಗೆ ಪಂಚಾಯ್ತಿಯಲ್ಲಿ ಬಸವೇಗೌಡನ ಮಾತುಗಳಿಗೆ ಶಿವಪ್ಪನು ಪ್ರತ್ಯುತ್ತರ ಹೇಳುತ್ತಾನೆ. ಇದೇ ಸಂದರ್ಭದಲ್ಲಿ "ಏನೋ ತಿಕ ಕೊಬ್ಬಿದೆಯೇನೋ ನಿಂಗೆ" ಎಂದು ಗೌಡನ ಶಿಷ್ಯನೊಬ್ಬ ಹೇಳುತ್ತಾನೆ. ಶಿವಪ್ಪನೂ ಕೂಡ ಅಷ್ಟೇ ತೀಕ್ಷ್ಣವಾಗಿ ಪ್ರತಿಕ್ರಿಯೆ ನೀಡುತ್ತಾನೆ. "ನಿಮ್ಮ ಯಜಮಾನ್ರಿಗೆ ಕೊಬ್ಬಿದೆಯೇನು ಕೇಳು" ಎನ್ನುತ್ತಾನೆ. ಶಿವಪ್ಪನ ಮಾತುಗಳು ನಾಲ್ಕೂರಿನ ಕುರುಬರಿಗೆ ತಿಳಿಯುತ್ತದೆ. ಅವರೆಲ್ಲಾ ಬಂದು "ಶಿವಪ್ಪನಿಗೆ ಹೊಡೆದು ಆತನ ಹೆಂಡತಿಯ ಸೀರೆಯನ್ನು ಬಿಚ್ಚಿ ಮೆರವಣಿಗೆ" ಮಾಡುತ್ತಾರೆ. ವರ್ಗ ಕ್ರೌರ್ಯದ ಪರಕಾಷ್ಠತೆಗೆ ಸಮಾಜ ಹೋಗುತ್ತದೆ. ಶಿವಪ್ಪನನ್ನು ಊರಿನಲ್ಲಿಯೇ ಬಂಧಿಸಿ ಅಟ್ಟಹಾಸ ಮೆರೆಯುತ್ತಾರೆ. ನಾಗರಿಕ ಸಮಾಜದ ಅಮಾನವೀಯ ಘಟನೆಗಳು ಕಥೆಯಾಗಿ ಕಂಡರೂ ಭಾರತದಂತಹ ದೇಶದಲ್ಲಿ ಇಂದಿಗೂ ಅಂತಹ ಘಟನೆಗಳು ನಡೆಯುತ್ತಿರುವುದು

ಅಸಹನೀಯವಾಗಿದೆ. "ಪ್ರಬಲ ಜಾತಿಗಳ ಎದುರು ದುರ್ಬಲ ಜಾತಿಗಳು ತಮ್ಮ ಅಸ್ತಿತ್ವಕ್ಕಾಗಿ ಹೋರಾಟ ಮಾಡುತ್ತಲೇ ಬಂದಿದ್ದಾರೆ." ಗೆಲುವಿಗಿಂತ ಸೋಲುಗಳು ಹೆಚ್ಚಾಗಿವೆ. ಪ್ರಶ್ನೆ ಮಾಡುವಂತಿಲ್ಲ. ಅನಾಗರಿಕ ಜಗತ್ತಿನ ಕೈಗೆ ಸಿಕ್ಕ ಅದೆಷ್ಟು ಕುಟುಂಬಗಳು ನಾಶವಾಗುತ್ತಲೇ ಇವೆ. ಇಂತಹ ಅನಿಷ್ಟ ಪದ್ಧತಿಗಳು ನಾಶವಾಗದ ಹೊರತು ಉತ್ತಮ ಸಮಾಜ ನಿರ್ಮಾಣ ಅಸಾಧ್ಯ.

ಬಸವೇಗೌಡನು ತನ್ನ ದುರಾಕ್ರಮಣ ಮತ್ತು ಅನಾಚಾರಗಳಿಂದ ಇಡೀ ಸಮಾಜವನ್ನು ನಾಶ ಪಡಿಸುತ್ತಾ, ಮಾನಸಿಕ ಕಾಯಿಲೆಯಿಂದ ಬಳಲುತ್ತಾನೆ. ಭಗಾವಾನ್‌ನೆಂಬ ವಿಚಾರವಾದಿ ಅವನ ಕಾಯಿಲೆಗಳಿಗೆ ಕಾರಣ ಮತ್ತು ಪರಿಹಾರವನ್ನು ಹುಡುಕುವ ಪ್ರಯತ್ನ ಮಾಡುತ್ತಾನೆ. "ಮನೆಯ ಕೆಲಸ ಮಾಡುತ್ತಿದ್ದ ಆಳು, ಜೋನಿಯನ್ನು ಕರೆದು ಅವನಿಗೆ ಪಾದ ಪೂಜೆ ಮಾಡುವಂತೆ ಬಸವೇಗೌಡನಿಗೆ ಹೇಳುತ್ತಾನೆ." ಬಸವೇಗೌಡನು ಪಾದ ಪೂಜೆ ಮಾಡಿದರು ಕಾಯಿಲೆಯಿಂದ ಮುಕ್ತನಾಗುವುದಿಲ್ಲ. ಜೋನಿಯ ಹೆಂಡತಿಯನ್ನು ಕೆಡಿಸಲು ಪ್ರಯತ್ನ ಮಾಡುತ್ತಾನೆ. ಮತ್ತೊಂದು ದಿವಸ "ಶಿವಪ್ಪನ ಕಾಲನ್ನು ತೊಳೆದು ಪೂಜೆ ಮಾಡುವಂತೆ" ಭಗಾವಾನ್ ಹೇಳಿ ಬಸವೇಗೌಡನ ಕೈಯಲ್ಲಿ ಪುನಃ ಪಾದ ಪೂಜೆ ಮಾಡಿಸಿ ಅವನಲ್ಲಿರುವ ಅಹಂಕಾರವನ್ನು ಹೋಗಲಾಡಿಸಲು ಯತ್ನಿಸುತ್ತಾನೆ. ಭಗಾವಾನ್‌ನ ಈ ರೀತಿಯ ತೀರ್ಮಾನಗಳಿಂದ ಬಸವೇಗೌಡನ ಮಾನಸಿಕ ಕಾಯಿಲೆ ಮುಕ್ತವಾಗುತ್ತದೆ. ರೋಗಿಷ್ಟ ಸಮಾಜಕ್ಕೆ ಇಂತಹ ವಿಭಿನ್ನವಾದ ಮದ್ದುಗಳು ಕಾಯಿಲೆ ವಾಸಿಯಾಗಲು ಕಾರಣವಾಗುತ್ತವೆ ಎಂಬುದು ಲಂಕೇಶರ ನಿಲುವಾಗಿದೆ.

ಭಾರತ ದೇಶದಲ್ಲಿ ಬೇರೂರಿರುವ ಜಾತಿಯಾಧಾರಿತ ಮತ್ತು ದುಡಿಮೆಯಾದರಿತ ವರ್ಗ ಸಂಘರ್ಷಗಳನ್ನು ಹತ್ತಿಕ್ಕಲು ಸಾಧ್ಯವಿಲ್ಲ. ಅವುಗಳು ಒಂದಲ್ಲಾ ಒಂದು ರೀತಿಯಲ್ಲಿ ಸಮಾಜದ ಮಧ್ಯೆಯೇ ನೆಲೆ ನಿಲ್ಲುತ್ತವೆ. ಅವುಗಳನ್ನು ಶಾಶ್ವತವಾಗಿ ಕೊನೆಗಾಣಿಸಿದೆ ಎಂದು ಯಾರು ಹೇಳಲು ತಯಾರಿಲ್ಲ. ಅದನ್ನು ಹೋಗಲಾಡಿಸಲು ಬಂದರೆ ಪುನಃ ಮತ್ತೊಂದು ರೂಪದಲ್ಲಿ ವ್ಯಕ್ತಿಯನ್ನು ಬಂಧಿಯಾಗಿಸುತ್ತವೆ. ಆಧುನಿಕ ಬಂಡವಾಳಶಾಹಿ ಭಾರತದಲ್ಲಿ ಇದರ ಇರುವಿಕೆಯನ್ನು ನೋಡಬಹುದು. ಲಂಕೇಶರ "ಕಲ್ಲು ಕರಗುವ ಸಮಯ" ಅಮೃತಾಂಬುಧಿಯ ಊರಿನ ಸುತ್ತಾ ನಡೆಯುವ ಘಟನೆಗಳೇ ಕಥೆಯ ವಸ್ತುಗಳಾಗಿವೆ.

ಕಥೆಯ ಆರಂಭದಲ್ಲಿಯೇ ಕಥೆಗಾರರು ಅಮೃತಾಂಬುಧಿಯ ಊರಿನ ಕ್ರೌರ್ಯವನ್ನು ಪರಿಚಯ ಮಾಡುತ್ತಾರೆ. ಕೊಟ್ಟ ಹಣವನ್ನು ಹಿಂದಿರುಗಿಸದೆ ಇದ್ದರೆ ಕಂಬಕ್ಕೆ ಕಟ್ಟಿ ಹೊಡೆದು ಜೀತ ಮಾಡಿಸುವುದು ಸಂಪ್ರದಾಯ ಕುಟುಂಬಗಳ ಜಿದ್ದು ಹಾಗೆಯೇ. ಎರಡರಲ್ಲಿ ಒಂದು ಕುಟುಂಬ ದಫನ್ ಅಗುತ್ತಿತ್ತು. ಅಲ್ಲಿನ ಪಂಚಾಯತಿಯ ತೀರ್ಪುಗಳು

ತಪ್ಪು ಮಾಡಿದವರನ್ನು ಬೆಂಕಿಗೆ ಹಾಕುವ ಸಂದರ್ಭಗಳು ಹೆಚ್ಚು ಇರುತ್ತಿದ್ದವು. ಜೀತ ಪದ್ಧತಿಯ ಅಮಾನುಷ ಸ್ಥಿತಿಯನ್ನು ಕಥೆಗಾರ ನೀಡುತ್ತಾನೆ. ಹಳ್ಳಿಗಳಲ್ಲಿ ಇದು ಸಾಮಾನ್ಯವಾಗಿರುತ್ತಿತ್ತು. ಊರಿನ ಗೌಡನು ಜೀತಪದ್ಧತಿಯಲ್ಲಿ ಹಿಂಸೆಯನ್ನು ನೀಡುವ ಕೆಲಸಕ್ಕೆ ಮುಂದಾಗುತ್ತಿದ್ದನು. ಅದನ್ನು ಪ್ರಶ್ನಿಸುವವರು ಯಾರು ಇರುತ್ತಿರಲಿಲ್ಲ. ಒಂದು ವೇಳೆ ಪ್ರಶ್ನಿಸಿದರೆ ಅವರ ಅಸ್ಥಿತ್ವವೇ ಇಲ್ಲವಾಗುತ್ತಿತ್ತು.

ಊರಿನಲ್ಲಿರುವ ಜಾತಿ ಪದ್ಧತಿ ಮತ್ತು ಜೀತಪದ್ಧತಿಯನ್ನು ಹೋಗಲಾಡಿಸಲು 'ಕ್ರಾಂತಿವೇದಿಕೆ' ಜನ್ಮ ತಾಳಿರುತ್ತದೆ. ಆ ವೇದಿಕೆ ಅರಸೀಕೆರೆ, ತರೀಕೆರೆ, ಅಜ್ಜಂಪುರ ಮುಂತಾದ ಕಡೆಯೆಲ್ಲ ಅನೇಕ ವರ್ಷಗಳಿಂದ ಇರುತ್ತದೆ. ಆ ಊರುಗಳಲ್ಲಿ "ಹರಿಜನರು, ಬೇಡರು, ಕುರುಬರ ಮೇಲೆ, ನಡೆಯುವ ಹಲ್ಲೆ, ಅತ್ಯಾಚಾರ ಮುಂತಾದುವಗಳ ವಿರುದ್ಧ ಧರಣಿ, ಸಭೆ, ಮೆರವಣಿಗೆ ನಡೆಸಿತ್ತು. ಒಂದು ಜೀತವಿಮುಕ್ತಿಯ ಪ್ರಕರಣದಲ್ಲಿ ದೊಡ್ಡ ಗಲಾಟೆಯೇ ಆಗಿತ್ತು. ಕಡತೂರು ಎಂಬ ಹಳ್ಳಿಯಲ್ಲಿ ಹತ್ತಾರು ಜನ ಜೀತದಾಳುಗಳಿದ್ದು ಕ್ರಾಂತಿವೇದಿಕೆಯ ರುಕ್ಕೇಶಿ ತನ್ನ ಗೆಳೆಯರೊಂದಿಗೆ ಅಲ್ಲಿಗೆ ಹೋಗಿ ವಿಷಯ ಎತ್ತಿದಾಗ ಜೀತಕ್ಕಿದ್ದವರೂ ಅವರ ಯಜಮಾನರೂ ಸೇರಿಕೊಂಡು ರುಕ್ಕೇಶಿಯ ಗುಂಪಿಗೆ ಇಕ್ಕಿ ಓಡಿಸಿದ್ದರು."[೩೧]

ಜಾತಿ ಮತ್ತು ಜೀತ ವಿಮುಕ್ತಿ ಕೇವಲ ಒಂದೆರಡು ದಿನಗಳಲ್ಲಿ ಬಗೆ ಹರಿಯುವ ಸಮಸ್ಯೆಗಳಲ್ಲ. ಆ ನಿಟ್ಟಿನಲ್ಲಿ ರುಕ್ಕೇಶಿಯ ಪ್ರಯತ್ನ ಉತ್ತಮವಾಗಿ ಕಂಡರೂ ಸರಿಯಾದ ಸಿದ್ಧತೆಯನ್ನು ನಡೆಸದೆ ಸೋಲುತ್ತಾನೆ. ಆದರೂ ಅವನ ಪ್ರಯತ್ನ ಮುಂದುವರೆಯುತ್ತದೆ. ಜೀತ ವಿಮುಕ್ತಿಯ ವಿಚಾರದಲ್ಲಿ ಯಜಮಾನರ ಜೊತೆ ಸೇರಿದ ಜೀತದ ವ್ಯಕ್ತಿಗಳು ಕ್ರಾಂತಿವೇದಿಕೆಯ ಸದಸ್ಯರನ್ನು ಹೊಡೆಯಲು ಬರುವುದು ಅವರ ಅಜ್ಞಾನ ಮತ್ತು ಅನಿವಾರ್ಯತೆಯ ಬದುಕನ್ನು ತೋರಿಸುತ್ತದೆ. ತಮಗೆ ಆಗುತ್ತಿರುವ ಅನ್ಯಾಯಕ್ಕಾಗಿ ಹೋರಾಟ ಮಾಡುವ ಮೂಲಕ ನ್ಯಾಯ ಸಿಗುತ್ತದೆ ಎಂದು ಯೋಚಿಸಲಾರರು. ಹಾಗೆಯೇ ಒಂದು ವೇಳೆ ಆ ರೀತಿ ಹೋರಾಟಕ್ಕೆ ನಿಂತರೆ ಬದುಕಿನ ನಿರ್ವಹಣೆಗಾಗಿ ದುಡಿಯಲು ಯಾರನ್ನು ಆಶ್ರಯಿಸುವುದು ಎಂಬ ಪ್ರಶ್ನೆ ಅವರ ಅಸಹಾಯಕತೆಗೆ ಕಾರಣವಾಗುತ್ತದೆ. ಹೋರಾಟಗಳು ಕೇವಲ ಭಾಷಣಗಳಿಗೆ ಸೀಮಿತವಾದರೆ ಕುಟುಂಬದ ನಿರ್ವಹಣೆಯ ಹೊಣೆಯನ್ನು ಯಾರು ಹೊರಲು ಸಾಧ್ಯವಾಗುತ್ತದೆ? ಎಂಬ ಪ್ರಶ್ನೆ ಅನಾದಿಕಾಲದಿಂದಲೂ ದುಡಿಯುವ ವರ್ಗಕ್ಕೆ ಕಾಡುತ್ತಲೇ ಬಂದಿದೆ. ಅಂಥ ಸಂದರ್ಭಗಳನ್ನು ಯಜಮಾನಿಕೆ ಮತ್ತು ಬಂಡವಾಳ ಶಾಹಿ ವರ್ಗ ಲಾಭವನ್ನಾಗಿ ಮಾಡಿಕೊಂಡು ಬರುತ್ತಿದೆ.

ಇನ್ನೂ ಹಳ್ಳಿಗಳಲ್ಲಿ ಹೆಣ್ಣು-ಗಂಡುಗಳಲ್ಲಿ ಉದಯಿಸುವ ಪ್ರೀತಿ-ಪ್ರೇಮದ ವಿಚಾರಗಳು ಜಾತಿಯಲ್ಲಿ ತಳುಕು ಹಾಕಿಕೊಂಡರೆ ಹೆಣ್ಣು ಅಥವಾ ಗಂಡಿನ ಕುಟುಂಬಗಳು ತೊಂದರೆಗೆ

ಸಿಲುಕಿಕೊಳ್ಳುತ್ತವೆ. ಮರ್ಯಾದೆ ಹತ್ಯೆ, ಕೊಲೆಗಳ ರೂಪದಲ್ಲಿ ಹೆಣ್ಣು-ಗಂಡುಗಳ ಸಾವು ಉಂಟಾಗಲು ಕಾರಣ ಸಮಾಜದಲ್ಲಿ ಬೆಳೆದಿರುವ ಜಾತಿಯೆಂಬ ಅನಿಷ್ಟ ಪದ್ಧತಿ. ಆ ಕಾರಣಕ್ಕಾಗಿ ಸಾಕಷ್ಟು ಕುಟುಂಬಗಳು, ಹಳ್ಳಿಗಳು ಬೆಂಕಿಗೆ ಆಹುತಿಯಾಗುತ್ತಿವೆ. ಕಥೆಯಲ್ಲಿನ ಲಿಂಗಾಯುತ ಜಾತಿಯ ಮಲ್ಲಯ್ಯನ ಮಗಳು ಶ್ಯಾಮಲ ಮತ್ತು ಬೇಡರ ಜಾತಿಯ ತಿಪ್ಪಣ್ಣ ಪ್ರೀತಿಸಿ ಮದುವೆಯಾಗಬೇಕೆಂದು ಕೊಂಡವರು. ಈ ಹಿಂದೆ ಜಾತಿಯ ಕಾರಣಕ್ಕಾಗಿ ಮಲ್ಲಯ್ಯನು ನಾದಿನಿಯನ್ನು ಮತ್ತು ಆಕೆಯ ಪ್ರಿಯಕರನನ್ನು ಕೊಲೆ ಮಾಡಿ ಅದನ್ನು ಬೇರೆ ರೀತಿಯಲ್ಲಿ ತಿರುಗಿಸಿರುತ್ತಾನೆ. ಅಂತಹ ಸಂದರ್ಭದಲ್ಲಿ ತಿಪ್ಪಣ್ಣನ ಮಗಳು ಬೇಡರ ಹುಡುಗನನ್ನು ಪ್ರೀತಿಸುತ್ತಿರುವ ವಿಷಯ ತಿಳಿದು ಕೋಪಗೊಳ್ಳುತ್ತಾನೆ. ಮಲ್ಲಯ್ಯನು ತಿಪ್ಪಣ್ಣನನ್ನು ಕೊಲ್ಲಲು ರಿವಾಲ್ವರ್ ತಂದಿರುತ್ತಾನೆ. ತಿಪ್ಪಣ್ಣನ ರೀತಿನೀತಿಯನ್ನು ನೋಡಿ ಸುಮ್ಮನಾಗುತ್ತಾನೆ. ಕಥೆಯ ಅಂತಿಮದಲ್ಲಿ ಶ್ಯಾಮಲ ಮತ್ತು ತಿಪ್ಪಣ್ಣ ಮದುವೆಯಾಗುತ್ತಾರೆ. ಮಲ್ಲಯ್ಯ ಸಾಯುತ್ತಾನೆ. ಸಮಸ್ಯೆಗೆ ಪರಿಹಾರ ಕಥೆಯಲ್ಲಿ ಕಂಡುಬರುತ್ತದೆ.

ಗ್ರಾಮೀಣ ಪ್ರದೇಶದ ಗಂಡ ಬಿಟ್ಟ ಹೆಂಗಸರು, ವಿಧವೆ ಹೆಂಗಸರು ದುಡಿಮೆಯ ಹೆಸರಿನಲ್ಲಿ ಊರಿನ ಶ್ರೀಮಂತರ ವಕ್ರದೃಷ್ಟಿಗೆ ಬೀಳುತ್ತಾರೆ. ಕೆಲವು ಹೆಂಗಸರು ಗಂಡನಿದ್ದರೂ ಕೂಡ 'ತಮ್ಮ ದೇಹ ಒಡೆಯನಿಗೆ ಅರ್ಪಿತ'ವೆಂದು ಭಾವಿಸುತ್ತಾರೆ. ಇನ್ನೂ ಕೆಲವರು ಬದುಕಿನ ಅನಿವಾರ್ಯತೆಗಾಗಿ ಉಳ್ಳವರ ಕಾಮಕ್ಕೆ ಬಲಿಯಾಗುತ್ತಾರೆ. ವಿಶೇಷವೆಂದರೆ ಕೆಲವು ಗಂಡ ಬಿಟ್ಟ, ವಿಧವೆಯಾದ ಹೆಂಗಸರು ಊರಿನ ಯಜಮಾನರನ್ನು ತಮ್ಮ ಹಿಡಿತಕ್ಕೆ ತೆಗೆದುಕೊಳ್ಳುತ್ತಾರೆ. ಸಹಾಯದ ಹಸ್ತವೆಂದು ಯಜಮಾನ್ಯವುಳ್ಳ ಪುರುಷರು ಆ ಹೆಣ್ಣುಗಳ ಜೊತೆ ದೇಹ ಸಲುಗೆಯನ್ನು ಬೆಳೆಸಿಕೊಳ್ಳುತ್ತಾರೆ. ಅಂಥ ಪುರುಷರಿಗೆ ಯಾವುದೇ ಗೌರವವಿಲ್ಲದೆ ತಿರಸ್ಕೃತವಾಗಿ ಆ ಹೆಂಗಸರು ನೋಡುತ್ತಾರೆ.

ಲಂಕೇಶರ 'ಉರಿದ ಊರಿನವರು' ಕಥೆಯ ಚೆಲುವಮ್ಮ, ಹಾಗೆಯೇ 'ಉಮಾಪತಿಯ ಸ್ಕಾಲರ್ ಶಿಪ್ ಯಾತ್ರೆ ' ಕಥೆಯ ಈರವ್ವ, ಇಬ್ಬರು ಹೆಂಗಸರು ಗಂಡ ಇಲ್ಲದವರು. ಚೆಲುವಮ್ಮನ ಜೊತೆ ಸ್ಕೂಲ್ ಮಾಸ್ತರ್ ಭೈರಪ್ಪನು ಸಂಬಂಧ ಹೊಂದಿರುತ್ತಾನೆ. ಅವಳ ಅಸ್ತಿತ್ವದ ವಿಚಾರದಲ್ಲಿ ಭೈರಪ್ಪನ ರೀತಿನೀತಿಗಳನ್ನು ಕಂಡು ಕೋಪಗೊಳ್ಳುತ್ತಾಳೆ. ಜೊತೆಗೆ ಊರಿನ ವಿಚಾರಕ್ಕೆ ಆಕೆಯ ಪರವಾಗಿ ನಿಲ್ಲದಿದ್ದರೆ ಅವನಿಗೆ ಕಂಪ್ಲೇಂಟ್ ಕೊಡುತ್ತೇನೆಂದು ಬೆದರಿಸುತ್ತಾಳೆ. ಹಾಗೆಯೇ ಈರವ್ವಳು ನಿಂಗೇಗೌಡ, ಶೇಖರಪ್ಪ ಮತ್ತು ಹುಸೇನಿಯ ವಿಚಾರಕ್ಕೆ ಸಂಬಂಧಿಸಿದಂತೆ 'ಮಗನ ಸ್ಕಾಲರ್ ಶಿಪ್ ಕೇಳಲು ಬಂದ ಸಂದರ್ಭದಲ್ಲಿ' ನಡೆದ ಘಟನೆಗಳಿಂದ ಆ ಮೂವರು ಗಂಡಸರ ಯೋಗ್ಯತೆಯ ಬಗ್ಗೆ ತನಗೆ ಗೊತ್ತಿದೆ ಎಂದು ಅವರನ್ನು ಹೀಯಾಳಿಸುತ್ತಾಳೆ. ಹೆಣ್ಣಿನ ಆಕ್ರೋಶವಿರುವುದು ತನ್ನ ದೇಹದ

ಮೇಲೆ ಅಧಿಕಾರ ಚಲಾಯಿಸಲು ಬಂದ ಉಳ್ಳವರ ಬಗ್ಗೆ. ಅದಕ್ಕಾಗಿ ಅವರ ಮರ್ಯಾದೆಗಳನ್ನು ತೆಗೆಯಲು ಹಿಂದು ಮುಂದು ನೋಡುವುದಿಲ್ಲ. ಅವರು ಕೂಡ ಮರ್ಯಾದೆ ಹೀನರಾಗಿಯೇ ಇರುತ್ತಾರೆ. ಹೆಣ್ಣಿಗಾಗಿ ತಮ್ಮ ಗೌರವವನ್ನು ಕಳೆದುಕೊಳ್ಳುವ ಪ್ರಜ್ಞೆಯನ್ನು ಮರೆಯುತ್ತಾರೆ. ಲಂಕೇಶರು ಈ ಎರಡು ಕಥೆಗಳನ್ನು ಆ ನಿಟ್ಟಿನಲ್ಲಿ ರಚಿಸಿದ್ದಾರೆ.

ಸಮಾಜವಾದಿ ಚಿಂತನೆಗಳನ್ನು ಕೇವಲ ತಮ್ಮ ಸ್ವಾರ್ಥಕ್ಕೋಸ್ಕರ ಬಳಸಿಕೊಂಡರೆ ಅದರಿಂದ ಆಗುವ ಅಪಾಯಗಳು ಅತಿರೇಕವಾಗಿರುತ್ತವೆ. ಕುಟುಂಬಗಳು ನಾಶವಾಗುತ್ತವೆ. ನಿರ್ದಿಷ್ಟ ಯೋಚನೆಗಳಿಂದ ಕೂಡಿದ ಗುರಿಗಳು ಇಲ್ಲದಿದ್ದರೆ ಅವಮಾನಕ್ಕೆ ಒಳಗಾಗುವ ಸಂದರ್ಭಗಳು ಹೆಚ್ಚಾಗಿರುತ್ತವೆ. ಲಂಕೇಶರ 'ಜೊತೆಗಾರ' ಕಥೆಯಲ್ಲಿನ ಸೋಷಯಲಿಸ್ಟ್ ಸಿದ್ಧಾಂತದ ವಿಚಾರಗಳು ಸೋಲಾಗುತ್ತವೆ ಎಂದು ಕತೆಗಳನ್ನು ಬರೆಯುತ್ತಿದ್ದ ಲೇಖಕ ಮತ್ತು ಅರವತ್ತು ವರ್ಷಗಳ ವಯಸ್ಸಾಗಿರುವ ರಂಗಪ್ಪ 'ಸೋಷಿಯಲಿಸ್ಟ್ ಬೆನಕನ' ದುರಂತ ಕಥೆಯನ್ನು ಬರೆಯುತ್ತಾನೆ. ವಾಸ್ತವದಲ್ಲಿ ಸ್ಟೀಫನ್‌ನಿಗೆ ಬೈಯುತ್ತಾನೆ. ಕೋವಿಯ ಬೊಡ್ಡೆಯಿಂದ ಹೊಡೆಯುತ್ತಾನೆ. "ಇನ್ನು ಹಾಗೆ ಮಾಡಾಕಿಲ್ಲ ನನ್ನೊಡೆಯಾ– ಇದೊಂದ್ ಸಲ ಬಿಟ್ಟುಬಿಡಿ" ಎಂದು ಹೇಳಿದರೂ ಆ ಸ್ಟೀಫನ್‌ನಿಗೆ ಹೊಡೆಯುತ್ತಲೇ ಇರುತ್ತಾನೆ. ರಂಗಪ್ಪನ ಅಸ್ತಿತ್ವಕ್ಕೆ ಸ್ಟೀಫನ್‌ನು ಧಕ್ಕೆ ತರುತ್ತಾನೆ ಎಂಬ ಭಯ ಕಾಡುತ್ತಿರುತ್ತದೆ. ಆ ಕಾರಣಕ್ಕಾಗಿ ಅವನನ್ನು ಹೊಡೆಯುತ್ತಾನೆ. ಅವರೆ ಹೇಳುವಂತೆ "ಅವನ್ಹೆಸರು ಸಿವ್ಯ ಅಂತ– ನಿಜವಾದ ಹೆಸರು ಸ್ಟೀಫನ್. ಲೋಫರ್ ಸೂಳೆಮಗ ಹುಟ್ಟಿದ್ದು ಕಳ್ಳಭಟ್ಟಿ ಕೊಲವ್ಯಾಗೆ– ಫೈಟಿನ ಹತ್ರ. ಈಗ ನೋಡಿ– ಜಾತಿಬುದ್ಧಿ ಶುರುಮಾಡಿದಾನೆ–ಜನಕ್ಕೆ ಬಾಸಣ ಕೊಡ್ತಾನೆ – ನಾಯಕ ಮಾತು ಕೇಳಬ್ಯಾಡಿ, ಅಂತ; ನಾನು ಆ ಹೊಲೇರನ್ನೆಲ್ಲ ಗುಡಿಗೆ ಬಿಟ್ಟದ್ದು ಹೊಲೇರಿಗೆ ನಾ ಮಾಡ್ತಿರೋ ಮೋಸವಂತೆ! ಎಲ್ರೂ ನನ್ನ ವಿರುದ್ಧ ದಂಗೆ ಏಳ್ಬಕಂತೆ! ಕ್ರಾಂತಿ ಬೇಕಂತೆ ಕ್ರಾಂತಿ? ನನಗೆ ಕ್ರಾಂತಿ ಕಲಿಸಾಕ್ಕೆ ಬರ್ತಿದಾನೆ!."[೨] ಎಂಬ ರಂಗಪ್ಪನ ಮಾತುಗಳು ಕ್ರಾಂತಿ, ಸಮಾಜವಾದಿ ಚಿಂತನೆಗಳನ್ನು ವಾಸ್ತವದಲ್ಲಿ ಒಪ್ಪಿಕೊಳ್ಳಲು ಇಷ್ಟ ಪಡುವುದಿಲ್ಲ. ಅವನು ಬರೆಯುವ ಲೇಖನದಲ್ಲಿ ಮಾತ್ರ ಆತನ ಆದರ್ಶ ಸಮಾಜವಾದಿ ಚಿಂತನೆಗಳಾಗಿ ಕಂಡುಬರುತ್ತವೆ. ಸ್ಟೀಫನ್ ಮನೆಯ ಸಮಾಜವಾದಿ ಜೋಸಿಯ ಜೊತೆ ರಂಗಪ್ಪನು ಸಂಬಂಧವನ್ನು ಹೊಂದಿರುತ್ತಾನೆ. ಆ ಬಗ್ಗೆ ಆತನಿಗೆ ಹೆಮ್ಮೆ ಎನಿಸುತ್ತದೆ. ಆದರೆ ರಂಗಪ್ಪನ ಸಂಸಾರ ದಿಕ್ಕು ತಪ್ಪುತ್ತದೆ. ಜೋಸಿಯ ಸಹವಾಸದಿಂದ ಆತನ ಘನತೆ ಕುಂದುತ್ತದೆ. ರಂಗಪ್ಪನ ಮನೆಯ ಆಳು ಭಜ್ಯನು ಹೇಳುವಂತೆ "ಜೋಸಿಯ ಸಹವಾಸದಿಂದ ಮನೆ ಹಾಳಾಯ್ತು" ಎನ್ನುತ್ತಾನೆ.

ಉಳ್ಳವರು ದುರ್ಬಲ ವರ್ಗವನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಳ್ಳಲು ಪ್ರಯತ್ನಿಸುತ್ತಾರೆ. ದುಡಿಮೆಯ ದುರ್ಬಲ ವರ್ಗದ ಹೆಣ್ಣು ತನ್ನ ಅಸ್ತಿತ್ವವನ್ನು ಸಾಬೀತು ಪಡಿಸಲು

ಹೋರಾಟ ಮಾಡಿದರೆ, ಅಂಥವರ ಸಹವಾಸ ಮಾಡುವ ಉಳ್ಳವರು ತಮ್ಮ ಅಹಂಕಾರದ ದರ್ಪವನ್ನು ಪ್ರದರ್ಶಿಸುತ್ತಾ ಪರಸ್ತ್ರೀಯರ ವಿಚಾರದಲ್ಲಿ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾರೆ. ಪುರುಷ ದುರ್ಬಲ ವರ್ಗದವರು ಮಾತ್ರ ತಮ್ಮ ಅಸ್ತಿತ್ವಕ್ಕಾಗಿ ಹುಡುಕಾಟ ನಡೆಸುತ್ತಾ, ಹೋರಾಡುವುದು ಲಂಕೇಶರ 'ವರ್ಗ ಸಂಘರ್ಷ'ಕ್ಕೆ ಸಂಬಂಧಿಸಿದ ಕಥೆಗಳಲ್ಲಿ ಸ್ಪಷ್ಟವಾಗುತ್ತದೆ. ಹಾಗೆಯೇ ಜಾತಿಯ ವಿಚಾರಕ್ಕೆ ಸಂಬಂಧಿಸಿದಂತೆ ಲಂಕೇಶರು ತಮ್ಮದೇ ಆದ ವಿಶ್ಲೇಷಣೆ ನೀಡಿ ಆಯಾಯ ಕಥೆಗಳಲ್ಲಿ ವೈಚಾರಿಕವಾಗಿ ಪರಿಹಾರವನ್ನು ಹುಡುಕುವ ಪ್ರಯತ್ನ ಮಾಡಿದ್ದಾರೆ.

ಲಂಕೇಶರಂತೆ, ತೇಜಸ್ವಿಯವರಂತೆ ಅನಂತಮೂರ್ತಿಯವರು ತಮ್ಮ ವರ್ಗ ಸಂಘರ್ಷದ ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ. ದುಡಿಯುವ ವ್ಯಕ್ತಿಗಳು ಹೋರಾಟದಲ್ಲಿ ತೋರುವ ಅಸಹಾಯಕತೆಗಳು, ಅವಮಾನಗಳು, ಮೇಲ್ವರ್ಗದವರ ಅಡಿಯಲ್ಲಿ ಬದುಕಿನುದ್ದಕ್ಕೂ ಸಂಘರ್ಷದ ಹೆಜ್ಜೆಗಳನ್ನು ಹಾಕುವ ವ್ಯಕ್ತಿಗಳಿಂದ ಕೂಡಿದ ಪಾತ್ರಗಳನ್ನು ತಮ್ಮ ಕಥೆಗಳಲ್ಲಿ ತಂದಿದ್ದಾರೆ.

ಬಂಡವಾಳ ಶಾಹಿ ಜಗತ್ತಿನಲ್ಲಿ ಪ್ರತಿಯೊಂದು ಸಂಬಂಧಗಳು ವ್ಯಾವಹಾರಿಕವಾಗುತ್ತವೆ. ಬಂಡವಾಳಶಾಹಿಗಳಿಗೆ ಲಾಭವು ಪ್ರಧಾನವಾಗಿರುತ್ತದೆ. ತಮ್ಮ ಬಂಡವಾಳವನ್ನು ಉತ್ಪಾದನೆಯಲ್ಲಿ ತೊಡಗಿಸಿ ವಸ್ತುಗಳನ್ನು ಉತ್ಪಾದಿಸಲು ಬೇಕಾಗಿರುವುದು ಶ್ರಮಿಕ ವರ್ಗ. ಸಾಧ್ಯವಾದಷ್ಟು ಕಡಿಮೆ ಬಂಡವಾಳದಲ್ಲಿ ಗರಿಷ್ಠ ಲಾಭದ ಚಿಂತನೆ ಇರುತ್ತದೆ. ಇಲ್ಲಿ ಶ್ರಮಿಕ ವರ್ಗವೂ ವ್ಯಾಪಾರವಾಗಿರುತ್ತದೆ. ಅವರ ವ್ಯಾಪಾರಕ್ಕೆ ಕಡಿಮೆ ಬೆಲೆಯಲ್ಲಿ ಹೆಚ್ಚಿನ ಲಾಭವನ್ನು ನೀಡುವವರ ಜೊತೆ 'ಶ್ರಮಿಕ ಒಪ್ಪಂದ'ವಾಗುತ್ತದೆ. ಬಂಡವಾಳಶಾಹಿಯ ಅಡಿಯಲ್ಲಿ ಶ್ರಮಿಕನು ತನ್ನ ಅಸ್ತಿತ್ವಕ್ಕಾಗಿ ಹೋರಾಟ ನಡೆಸುತ್ತಾನೆ. ಸಾಧ್ಯವಾದರೆ ಹೋರಾಟಕ್ಕೆ ಇಳಿಯುತ್ತಾನೆ. ಅವನು ಸಹಜವಾಗಿ ದುರ್ಬಲ ಶಕ್ತಿಯವನು. ಪ್ರಸ್ತುತ ಬಂಡವಾಳಶಾಹಿ ಚಿಂತನೆ ಮೊದಲಿಗೆ ಒಡೆದು ಆಳುವ ನೀತಿಯನ್ನು ಯೋಚಿಸುತ್ತದೆ. ಅಂತಹ ಸಂದರ್ಭದಲ್ಲಿ ಹೋರಾಟಗಾರನು ಸೋಲನ್ನು ಅನುಭವಿಸುವ ಸಂಭವ ಹೆಚ್ಚಾಗಿರುತ್ತದೆ. ಅದು ಯಜಮಾನಿಕೆಯ ಗ್ರಾಮಗಳಿಂದ ರೂಪುಗೊಂಡ ಉಳ್ಳವರ ಇಲ್ಲದವರ ನಡುವಿನ ಹೋರಾಟಗಳು ಆಕರ್ಷಕ ರೂಪದಲ್ಲಿ ನಗರದಲ್ಲಿ ಕಂಡುಬರುತ್ತದೆ. ಆದರೆ ತನ್ನ ಮೂಲ ಸಿದ್ಧಾಂತವನ್ನು ಬಿಡುವುದಿಲ್ಲ.

ಅನಂತಮೂರ್ತಿಯವರ 'ಹುಲಿಯ ಹೆಂಗರುಳು' ಕಥೆಯಲ್ಲಿ ಸಿದ್ದನು ಕಲ್ಲು ಹೊಡೆಯುವ ಕೆಲಸದವನು. ಆತನ ಹೆಂಡತಿ ಬಜಾರಿಯಾಗಿದ್ದು, ಸೇರೆಗಾರ ಸೀನಶೆಟ್ಟಿಯ ಜೊತೆ ಸಂಬಂಧವನ್ನು ಹೊಂದಿರುತ್ತಾಳೆ. ಅವನಿಗೆ ಹೆಂಡತಿಯ ಸಂಬಂಧದ ವಿಚಾರವನ್ನು ಕೇಳಿ ಬೇಸರ ಮತ್ತು ಕೋಪ ಬರುತ್ತದೆ. ಹೆಂಡತಿಯನ್ನು ಪ್ರಶ್ನಿಸಲು 'ಇದು ನನ್ನ ಇಷ್ಟ

ನೀನು ಬೇಕಾದರೆ ಮನೆ ಬಿಟ್ಟು ಹೋಗು' ಎನ್ನುತ್ತಾಳೆ. ಕೋಪದಿಂದ ಆ ಹೆಂಡತಿಯನ್ನು ಕತ್ತಿಯಿಂದ ಕೊಲ್ಲುತ್ತಾನೆ. ತನ್ನ ಸಾಂಸರಿಕ ಬದುಕನ್ನು ಹಾಳು ಮಾಡಿದ ಸೇರೆಗಾರನ ಮೆಲೆ ಸೇಡನ್ನು ತೀರಿಸಿಕೊಳ್ಳಲು ಅಸಹಾಯಕನಾಗುತ್ತಾನೆ. ಯಜಮಾನ್ಯ ಸಂಸ್ಕೃತಿಯಲ್ಲಿ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ವರ್ಗವು ದುರ್ಬಲ ವರ್ಗವನ್ನು ಸಾಧ್ಯವಾದಷ್ಟು ನಾಶ ಗೊಳಿಸುತ್ತದೆ. ಆರ್ಥಿಕವಾಗಿ, ಸಾಮಾಜಿಕವಾಗಿ, ಅವರನ್ನು ಮತ್ತಷ್ಟು ಶಕ್ತಿಹೀನರನ್ನಾಗಿ ಮಾಡುತ್ತದೆ. ತನ್ನ ಸಂಸಾರವನ್ನು ಹಾಳು ಮಾಡಿದ ಸೇರೆಗಾರನನ್ನು ಪ್ರವಾಹದ ಸಂದರ್ಭದಲ್ಲಿ ದೋಣಿಯ ಮೂಲಕ ರಕ್ಷಣೆ ಮಾಡುವುದು ವಿಚಿತ್ರವಾದರೂ ಸತ್ಯವೆನಿಸುವ ಸಂಗತಿಯಾಗುತ್ತದೆ. ಕಥೆಯ ಶೀರ್ಷಿಕೆ 'ಹುಲಿ' ಭೌತಿಕವಾಗಿ ಕಾಣದಿದ್ದರೂ ಸಿದ್ದನು ಹುಲಿಯಂತೆ, ಅವನ ಮನಸ್ಸು 'ಹೆಂಗರುಳು' ರೀತಿಯಲ್ಲಿ ನಡೆದುಕೊಳ್ಳುವ ವಿಪರ್ಯಾಸ ಕಥೆಯಲ್ಲಿದೆ. ಸಿದ್ದನಂತೆ ಯೋಚಿಸುವ ವ್ಯಕ್ತಿಗಳು ಹೆಚ್ಚಾಗಿರುವುದರಿಂದ ಯಜಮಾನಿಕೆಯ ವ್ಯಕ್ತಿಗಳು ಆಗಾಗ್ಗೆ ರಕ್ಷಣೆಗೆ ಒಳಗಾಗುತ್ತಾರೆ. ಪುನಃ ಯಜಮಾನಿಕೆಯ ವ್ಯಕ್ತಿಗಳ ಜಗತ್ತು ವಿಸ್ತರಿಸುತ್ತಾ ಹೋಗುತ್ತದೆ.

ಯಜಮಾನಿಕೆಯ ವ್ಯಕ್ತಿಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೋರಾಡುತ್ತಲೇ ಇರುತ್ತಾರೆ. ತಮ್ಮದೇ ಆದ ಅಘೋಷಿತ ಸಾಮ್ರಾಜ್ಯವನ್ನು ನಿರ್ಮಿಸಿಕೊಂಡು ಪ್ರಶ್ನಾತೀತ ವ್ಯಕ್ತಿಗಳಾಗಿ ಬೆಳೆಯಲು ಹವಣಿಸುತ್ತಿರುತ್ತಾರೆ. ಸಾಧ್ಯವಾದರೂ ಸಿಕ್ಕಷ್ಟು ಸವಲತ್ತುಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುವ ಜೊತೆಗೆ ಮತ್ತಷ್ಟು ಸವಲತ್ತುಗಳ ಕಡೆ ಗಮನ ಹರಿಸುತ್ತಲೇ ಇರುತ್ತಾರೆ. ತಮ್ಮ ಇರುವಿಕೆಗಾಗಿ ಯೋಚಿಸುವ ವ್ಯಕ್ತಿಗಳು ಅಧೀನದಲ್ಲಿರುವ ವ್ಯಕ್ತಿಗಳ ಬಗ್ಗೆ ಕಾಳಜಿಯನ್ನು ವಹಿಸಲು ಮುಂದಾದರೂ ಅದು ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ಮಾತ್ರ ಎಂಬ ಸತ್ಯವನ್ನು ಮರೆಯಬಾರದು. ಅನಂತಮೂರ್ತಿಯವರ ಮತ್ತೊಂದು 'ಪ್ರಶ್ನೆ' ಕಥೆಯಲ್ಲಿ ಶಂಕರಯ್ಯ ಕುರುಡನಾಗಿರುತ್ತಾನೆ. ಸಂಸ್ಕಾರ, ಸಂಸ್ಕೃತಿಯನ್ನು ಹೇಳುವ ವ್ಯಕ್ತಿಯಾಗಿ ಮದುವೆಯಾಗಿರುವುದಿಲ್ಲ. ಶಂಕರಯ್ಯನ ಅಧೀನದಲ್ಲಿ ಒಕ್ಕಲುತನ ಮಾಡುವ ಲಚ್ಚಿಯ ತಾಯಿ ಮಾಲೇರ ಪುಟ್ಟಿಯ ಜೊತೆ ಸಂಬಂಧವನ್ನು ಹೊಂದಿರುತ್ತಾನೆ.

ಒಕ್ಕಲುತನದ ಶ್ರಮಿಕರು ಉಳ್ಳವರ ತೋಟಗದ್ದೆಗಳಲ್ಲಿ ದುಡಿಯುವ ವ್ಯಕ್ತಿಗಳಾಗಿರುತ್ತಾರೆ. ಅವರ ಬದುಕಿನ ನಿರ್ವಹಣೆಯ ಬಗ್ಗೆ ಮೇಲ್ವರ್ಗದವರು ಯೋಚಿಸುವ ಮನಸ್ಸನ್ನು ಹೊಂದಿರುವುದಿಲ್ಲ. ಕೊರಗನು ಶಂಕರಯ್ಯನ ಬಳಿ ಬಂದು "ಒಡೇರೇ ನೀವೇ ಕಾಪಾಡಬೇಕು. ನನ್ನ ಮಗಳು ನಂಜಿ ಸಿದ್ದನ ಜೊತೆ ಓಡಿಹೋದಳು. ಐವತ್ತು ರೂಪಾಯಿ ತೆರನಾದರೂ ಕೊಡು ಎಂದೆ. ಸಿದ್ಧ ಕೋವಿ ತೋರಿಸಿ ಹೋಗು ಸೂಳೇಮಗನೇ ಎಂದ, ಬೈರ ಐವತ್ತು ರೂಪಾಯಿ ತೆರಕೊಟ್ಟು ಮದುವೆಯಾಗುತ್ತೇನೆ ಎಂದಿದ್ದ. ನಂಜಿ ನಾನು ಸಿದ್ದನನ್ನೆ ಆಗುವುದು ಎಂದು ಅವನನ್ನ ಕಟ್ಟಿಕೊಂಡು ಓಡಿಬಿಟ್ಟಳು. ಎಂದು ಕೊರಗ

ಕಣ್ಣೀರು ಸುರಿಸಿದ. 'ನಾನೇನು ಮಾಡಲೋ ಅದಕ್ಕೆ, ತೆರದ ಆಸೆ ಬಿಟ್ಟುಬಿಡು ಅಪ್ಪ.' ಎಂದರು ಶಂಕರಯ್ಯ. 'ಇದ್ದ ಒಬ್ಬಳೇ ಮಗಳು ಹೀಗೆ ಕೈಕೊಟ್ಟಳಲ್ಲಯ್ಯ. ಹೆತ್ತ ಹೊಟ್ಟೆಗೆ ಹೇಗಾಗಬೇಕು ಹೇಳಿ. ಆ ಸಿದ್ದ ನರಸಪ್ಪನ ಕಡೆ ಆಳು. ಆ ಒಡೇರಿಗೆ ಹೇಳಿಸಿ ತೆರ ಕೊಡಿಸಿಯಯ್ಯ ಎಂದ."[೩೩] ಕೊರಗನ ದೈನ್ಯತೆಯ ಬೇಡಿಕೆಯನ್ನು, ಶಂಕರಯ್ಯನು ಗದರುವಿಕೆಯ ಮೂಲಕ ಹತ್ತಿಕ್ಕುವ ಪ್ರಯತ್ನ ಮಾಡುತ್ತಾನೆ. ಯಜಮಾನಿಕೆ ಶಂಕರಯ್ಯನು ಒಕ್ಕಲುತನದ ಕೊರಗನ ಬದುಕಿನ ದುರಂತವು 'ತನಗೆ ಸಂಬಂಧ ಪಟ್ಟ ವಿಚಾರವಲ್ಲ' ಎಂಬಂತೆ ವರ್ತಿಸುತ್ತಾನೆ. ಆತನಿಗೆ ಕೊರಗನ ಸಾಮಾಜಿಕ ಸಮಸ್ಯೆಗಿಂತ "ತೋಟದಲ್ಲಿ ಅಡಿಕೆ ಗಿಡಗಳನ್ನು ನೀಡುವುದು ಪ್ರಮುಖವಾಗಿ" ಕಾಣುತ್ತದೆ. ಕೊರಗನ ಸಂಸಾರದ ಅಸ್ತಿತ್ವದ ಪ್ರಶ್ನೆಗಿಂತ ಯಜಮಾನಿಕೆಯವನ ತೋಟ ಪ್ರಧಾನವಾಗಿ ಕಾಣುತ್ತದೆ.

ಊಳಿಗಮಾನ್ಯ ಪದ್ದತಿಯನ್ನು ಸೃಷ್ಟಿಸುವ ಯಜಮಾನಿಕೆಯ ಬಂಡವಾಳ ಶಾಹಿ ಜಗತ್ತು ಆತಾರ್ಕಿಕವಾಗಿಯೆ ತನ್ನ ಸುತ್ತಮುತ್ತಲಿನ ಸಮಾಜವನ್ನು ನೋಡುತ್ತದೆ. ಬಂಡವಾಳವಿಲ್ಲದ ಜಗತ್ತಿಲ್ಲ. ಯಜಮಾನಿಕೆಯಿಲ್ಲದ ದುಡಿಮೆಯಿಲ್ಲ. ಆದರೆ ಇದೆಲ್ಲವೂ ಸಮಾಜದ ಒಳಗಿನ ಚಕ್ರದಂತೆ. ಒಂದನ್ನು ಬಿಟ್ಟು ಇನ್ನೊಂದು ಇರಲಾರದು. ಪ್ರತಿಯೊಂದು ಅನಿವಾರ್ಯ, ಮತ್ತು ಅವಶ್ಯಕ. ಆದರೂ ಯಜಮಾನಿಕೆಯು ಇದನ್ನು ಹೊರತಾಗಿ ಯೋಚಿಸುವುದು ಅಪಾಯಕಾರಿಯಾಗಿದೆ. ಇದಕ್ಕೆ ಕಮ್ಯೂನಿಸಂ ಯೋಚನೆಯು ಪರ್ಯಾಯ ಮಾರ್ಗವೆಂದು ಹೇಳುವುದು ಸೂಕ್ತವಲ್ಲ. ದುಡಿಮೆ ವರ್ಗವು ಪ್ರಧಾನವೆಂಬುದೂ ಭಾರತದಂತಹ ದೇಶಕ್ಕೆ ಪರ್ಯಾಯ ಕ್ರಮವಲ್ಲ. ಭಾರತದ ಪ್ರಜಾತಂತ್ರ ರಾಷ್ಟ್ರಕ್ಕೆ ಸಮಾಜವಾದಿ ಚಿಂತನೆಯ ಬಂಡವಾಳ ಹೂಡಿಕೆಗಳು ಆರ್ಥಿಕ ಬೆಳವಣಿಗೆಗೆ ಉತ್ತಮ ಮಾರ್ಗವಾಗಿರುತ್ತವೆ. ಯು. ಅರುಣಾಚಲರವರು 'ಅನಂತಮೂರ್ತಿರವರ ರಾಜಕೀಯ ಹಾಗೂ ಸಾಮಾಜಿಕ ಒಲವುಗಳು' ಎಂಬ ಲೇಖನದಲ್ಲಿ "ಸಾರ್ತ್ರನ ಅಸ್ತಿತ್ವವಾದ, ಲಿಬರಲಿಸಂ ಕುರಿತಾಗಿ ಗಂಭೀರ ಚಿಂತನೆ ನಡೆಸಿದರೂ, ಅವರ ಸಂದೇಶದಲ್ಲಿ ಅಡಕವಾಗಿರುವುದು ಲೋಹಿಯಾ ಮತ್ತು ಗಾಂಧೀಜಿಯವರ ತತ್ವಗಳೇ. ರಷ್ಯಾ ಕ್ರಾಂತಿಯ ನಂತರ ಲೆನಿನ್ ಮತ್ತು ಸ್ಟಾಲಿನ್‌ನಿಂದಾಗಿ ಅಲ್ಲಿನ ಕೇಂದ್ರೀಕೃತ ರಾಜ್ಯ ವ್ಯವಸ್ಥೆ ಅಪಾಯಕಾರಿಯಾದ ಬಗೆ ಅವರಲ್ಲಿ ದಿಗಿಲು ಹುಟ್ಟಿಸಿತು. ರಷ್ಯಾ ಭೇಟಿಯ ಸಮಯದಲ್ಲಿ ಅವರು ಕಂಡಿದ್ದು 'ಗಗನಚುಂಬಿ ಕಟ್ಟಡದ ಷಾಂಡಿಲಿಯರ್ಸ್ ದೀಪಗಳ ಕೆಳಗೆ ತುಣುಕು ಬ್ರೆಡ್ಡಿಗಾಗಿ ಕಾದು ನಿಂತ ಹಸಿದ ಜನರನ್ನು.' ಮಾವೋ ಚಿಂತನೆಯನ್ನೂ ಇವರು ಬೇರೆಯಾಗಿ ಕಂಡಿಲ್ಲ. ಹಾಲು ಡಬ್ಬಕ್ಕಾಗಿ ದಿನಗಟ್ಟಲೆ ಕಾಯಬೇಕಿದ್ದ ಚೀನಾದಲ್ಲಿ. ಪ್ರಜಾಪ್ರಭುತ್ವಕ್ಕೆ ಒತ್ತಾಯಿಸಿ ಚಳುವಳಿ ನಿರತರಾದ ಸಹಸ್ರಾರು ಎಳೆಯರನ್ನು ಅಂತಃಕರಣ ವಿಲ್ಲದೇ ಹೊಸಕಿಹಾಕಿ ಆ ದೇಶ ಸಾಧಿಸಿದ್ದು ಅಮೇರಿಕಾದ ಆಧುನಿಕತೆಯನ್ನಷ್ಟೇ ಅಲ್ಲವೇ?"[೩೪]

ಭಾರತದಂತಹ ದೇಶಕ್ಕೆ ಅತಿರೇಕದ ಬಂಡವಾಳ ಶಾಹಿ, ಚೈನಾ ಕಮ್ಯೂನಿಷ್ಟ್ ಚಿಂತನೆಗಳು ಅಪ್ಯಾಯಮಾನವಾಗಿ ಕಾಣುತ್ತಿವೆ. ದೂರದೃಷ್ಟಿಯಲ್ಲಿ ಅವು ಸೃಷ್ಟಿಸುವ ಅವಾಂತರಗಳು ದೇಶದ ಪ್ರಜಾಪ್ರಭುತ್ವವನ್ನು ಅಪಾಯದ ಮಟ್ಟಕ್ಕೆ ತೆಗೆದುಕೊಂಡು ಹೋಗುತ್ತವೆ. ಭಾರತಕ್ಕೆ ಬೇಕಾಗಿರುವುದು ಸರ್ಕಾರಿ ಸಹಭಾಗಿತ್ವದ ಬಂಡವಾಳ ಪ್ರಕ್ರಿಯೆ. ದೇಶದ ಭ್ರಷ್ಟಚಾರವನ್ನು ನಿಯಂತ್ರಿಸದ ಹೊರತು ದೇಶಕ್ಕೆ ಮತ್ತೊಂದು ಆರ್ಥಿಕ ಚಿಂತನೆಗಳು, ಹೋರಾಟಗಳು ಸೂಕ್ತವಾಗಿರಲಾರವು. ಅನಂತಮೂರ್ತಿಯವರ "ರೂತ್ ಮತ್ತು ರಸುಲ್" ಕಥೆಯಲ್ಲಿ ಚೀನಾದ ಕ್ರಾಂತಿಯ ಚಿಂತನೆಯನ್ನು ತರುವಮೂಲಕ ಹೋರಾಟಕ್ಕೆ ಭಾರತವು ಸೂಕ್ತವೆಂದು ಕಮ್ಯುನಿಷ್ಟ ಚಿಂತನೆಯ ರೂತ್‌ಳು ಯೋಚಿಸುತ್ತಾಳೆ. ಪಂಜಾಬ್ ಮೂಲದ ಜಮೀನ್ದಾರಿ ಕುಟುಂಬದ ದಿನೇಶ್‌ನನ್ನು ಪ್ರೀತಿಸುತ್ತಾಳೆ. ಇಬ್ಬರು ಇರುವುದು ಇಂಗ್ಲೆಂಡ್‌ನಲ್ಲಿ. ರೂತ್‌ಳು ಚೀನಾ ಕ್ರಾಂತಿಯ ಹಿನ್ನೆಲೆಯ ಪುಸ್ತಕಗಳನ್ನು ಓದಿ ಭಾರತದಲ್ಲಿ ಹೋರಾಟವನ್ನು ನಡೆಸಬೇಕೆನ್ನುವ ಚಿಂತನೆಯು ಹಾಸ್ಯಾಸ್ಪದದಿಂದ ಕೂಡಿದೆ. ದಿನೇಶ್‌ನು ಡಾಕ್ಟರ್ ಆಗಲು ಇಂಗ್ಲೆಂಡಿನಲ್ಲಿ ಓದುತ್ತಿರುವವನು. ಆತನು ಇಂಗ್ಲೆಂಡಿನಲ್ಲಿ ಮದುವೆಯಾಗಲು ಒಪ್ಪುತ್ತಾನೆ. ಆತನಿಗೆ ಭಾರತದಲ್ಲಿ ಮದುವೆಯಾಗಿ ಜೀವನ ನಡೆಸುವ ವಿಚಾರಕ್ಕೆ ಹಿಂಜರಿಕೆಯಾಗುತ್ತದೆ. ಇಂಗ್ಲೆಂಡಿನ ಜರ್ಮನ್ ಇಲಾಖೆಯಲ್ಲಿ ಸೆಕ್ರಟರಿಯಾಗಿದ್ದವಳು. ಭಾರತಕ್ಕೆ ಬಂದು ದೆಹಲಿ ಶಾಲೆಯಲ್ಲಿ ಶಿಕ್ಷಕಿಯಾಗಬೇಕೆಂದು, ಚೀನಾದ ಚಿಂತನೆಯನ್ನು ಭಾರತದಲ್ಲಿ ಸೇರಿಸಬೇಕೆಂದು ಅದಕ್ಕಾಗಿ ಹೋರಾಟ ಮಾಡಬೇಕೆಂದವಳು. ಬಹುಪಾಲು ಚಿಂತಕರು ಪುಸ್ತಕಗಳನ್ನು ಓದಿ ಅನ್ಯ ದೇಶಗಳ ಬಗ್ಗೆ ತಮ್ಮದೇ ಚಿಂತನೆಯನ್ನು ಬೆಳೆಸಿಕೊಳ್ಳಲು ಮುಂದಾಗುತ್ತಾರೆ. ವಾಸ್ತವದಲ್ಲಿ ಆ ದೇಶಗಳು ಸಂಪೂರ್ಣವಾಗಿ ಪುಸ್ತಕ ರೂಪದ ಚಿಂತನೆಗಳಿಗಷ್ಟೇ ಪ್ರಾಶಸ್ತ್ಯ ಪೂರಕವಾಗಿರುವುದಿಲ್ಲ. ನಾಗತಿಹಳ್ಳಿ ಚಂದ್ರಶೇಖರ್‌ರವರು ತಮ್ಮ 'ಚೀನಾದ ಇನ್ನೊಂದು ಮುಖ' ಲೇಖನದಲ್ಲಿ "ನಕಲು ಪರಿಣತಿಯಿಂದಲೇ ಜಗತ್ತಿನ ಏಕಾನಮಿಗೆ ಭಯ ಹುಟ್ಟಿಸಿರುವ ಚೀನಾ ವಿಚಿತ್ರ ರೀತಿಯಲ್ಲಿ ಈಗ ಬಲಶಾಲಿ ದೇಶ. ಸದಾ ಅರಕ್ಷಿತ ಪ್ರಜ್ಞೆಯಲ್ಲಿ ಬದುಕುವ ಅಲ್ಲಿನ ಶ್ರೀಸಾಮಾನ್ಯ ಕತ್ತು ಬಗ್ಗಿಸಿಕೊಂಡು ಪ್ರಶ್ನೆಗಳನ್ನು ಪಕ್ಕಕ್ಕಿಟ್ಟು ದುಡಿಯುತ್ತಾನೆ. ಅವನಿಗೆ ಗೊತ್ತಿರುವುದು ಅದೊಂದೇ. ಪ್ರಜಾಪ್ರಭುತ್ವ ಇದ್ದ ಕಡೆ ಮಾತ್ರ ಪ್ರಶ್ನೆಗಳಿರುತ್ತವೆ. ಚೀನಾದ ಸಾರ್ವಜನಿಕ ಬದುಕಿನಲ್ಲಿ ಪ್ರಭುತ್ವವನ್ನು ಪ್ರಶ್ನಿಸಿದರೆ ಉಳಿಗಾಲವಿಲ್ಲ. ಭಾರತದಲ್ಲಾದರೋ ಬರಿಯ ಪ್ರಶ್ನೆಗಳೇ. ಪ್ರಶ್ನೆಗಳಿರುವ ಸಮಾಜ ಎಚ್ಚರದ ಸಮಾಜ– ನಿಜ. ಆದರೆ ನಾನೇಕೆ ದುಡಿಯಲಿ? ನಾನೇಕೆ ತೆರಿಗೆ ನೀಡಲಿ? ನಾನೇಕೆ ಮತದಾನ ಮಾಡಲಿ? ನಾನು ಬಹುಸಂಖ್ಯಾತನಾದ್ದರಿಂದ ಉಳಿದವರು ಇಲ್ಲೇಕಿರಬೇಕು? ಇಂಥ ಪ್ರಶ್ನೆಗಳು ಅಪಾಯಕಾರಿ. ಇದು ಚೀನಾದ ಪ್ರಶ್ನಾತೀತ ಸ್ಥಿತಿಯಷ್ಟೇ ಅಪಾಯಕಾರಿ. ರಚನಾತ್ಮಕ ಪ್ರಶ್ನೆಗಳಿದ್ದಾಗ ಮಾತ್ರ ಪ್ರಜಾಪ್ರಭುತ್ವಕ್ಕೆ ಉಳಿವು."[೨೫] ಎನ್ನುತ್ತಾರೆ.

ರೂತ್‌ಳ ಜೈನಾ ಚಿಂತನೆಗೂ, ದಿನೇಶ್‌ನ ಜಮೀನ್ದಾರಿ ಪದ್ಧತಿಯ ವ್ಯವಸ್ಥೆಯಲ್ಲಿ ಬದುಕುತ್ತಿರುವವನ ಚಿಂತನೆಗೂ ಸಾಕಷ್ಟು ವ್ಯತ್ಯಾಸವಾಗುತ್ತದೆ. ರೂತ್‌ಳು ಇಂಗ್ಲೆಂಡ್‌ನಂತಹ ದೇಶದಲ್ಲಿ ಮುಕ್ತವಾಗಿ ಬೆಳೆದಿರುವವಳು. ಆಕೆ ಭಾರತದಲ್ಲಿ ಹಾಗೆಯೇ ಬದುಕಬಹುದು, ಯೋಚಿಸಬಹುದು, ಹೋರಾಟ ಮಾಡಬಹುದು ಎಂಬುದು ವಿಚಿತ್ರ ಯೋಚನೆಗಳಾಗಿವೆ.

ಭಾರತ ದೇಶದಲ್ಲಿ ಜಾತಿಯ ವ್ಯವಸ್ಥೆಯೇ ಜೀವಂತ ಪ್ರತೀಕ. ಕಾಲಕಳೆದರೂ ಜಾತಿಯ ಸ್ವರೂಪ ಬದಲಾಗುತ್ತಿದ್ದರೂ ತನ್ನ ಮೂಲ ಎಳೆಯನ್ನು ಕಳೆದುಕೊಂಡಿಲ್ಲ. ಇನ್ನೊಂದು ವಿಚಿತ್ರವೆಂದರೆ ಜಾತಿಯೊಳಗಿನ ವ್ಯಕ್ತಿಗಳು ತಮ್ಮ ಜಾತಿಯ ವ್ಯಕ್ತಿಗಳನ್ನು ಶೋಷಣೆ ಮಾಡುವುದು, ಅವರ ವಿರುದ್ಧ ಸಂಘರ್ಷಕ್ಕೆ ಇಳಿಯುವುದು 'ಯಜಮಾನಿಕೆ'ಯ ಹಿಡಿತ ಎಲ್ಲಾ ವರ್ಗಗಳಲ್ಲೂ ಇರುವುದು ಕಂಡುಬರುತ್ತದೆ. ಅನಂತಮೂರ್ತಿಯವರ 'ಮೂಲ' ಕಥೆ ಶೀರ್ಷಿಕೆಯೆ ಜಾತಿಯ ಮೂಲವನ್ನು ಹುಡುಕುವುದು, ಸಂಘರ್ಷಕ್ಕೆ ಇಳಿಯುವುದಾಗಿದೆ.

ಉಗುಳುಸ್ವಾಮಿಯ ಆರ್ಶೀವಾದ ಪಡೆದು ನಾರಾಯಣನು ಚಿದಂಬರಸ್ವಾಮಿಯಾಗಿ ಬದಲಾಗುತ್ತಾನೆ. 'ಗುರುಪುರದ ದಲಿತ ಸೇವಾಶ್ರಮ' ಕಟ್ಟಿ ಅಲ್ಲಿ ಶಾಲಾಕಾಲೇಜುಗಳನ್ನು ಸ್ಥಾಪಿಸುತ್ತಾನೆ. ವಿದ್ಯಾರ್ಥಿಗಳು, ಹೆಂಗಸರಿಗೆ ಆಶ್ರಮ ಆಶ್ರಯವಾಗುತ್ತದೆ. ಅಲ್ಲಿಯೇ ಅಂಗಡಿಯನ್ನು ತೆರೆದು ಅಲ್ಲಿನ ಆಶ್ರಮವಾಸಿಗಳು ಬೇಕಾದ ಸಾಮಾಗ್ರಿಗಳನ್ನು ಅಲ್ಲಿಯೇ ಖರೀದಿಸಬೇಕೆಂಬ ನಿಯಮವಿರುತ್ತದೆ. ಅಲ್ಲಿನ ಉಪನ್ಯಾಸಕರು ಆಶ್ರಮಕ್ಕೆ ಡೋನೇಷನ್ ಕೊಡುವ ಪದ್ಧತಿ ಇರುತ್ತದೆ. ಆ ಕಾಲೇಜಿನಲ್ಲಿ ಗುರುಲಿಂಗಪ್ಪನನ್ನು ಡೊನೇಷನ್ ಕೊಡಲಿಲ್ಲವೆಂಬ ಕಾರಣಕ್ಕಾಗಿ ತೆಗೆದು ಹಾಕಿರುತ್ತಾರೆ. ಮಠಗಳು ಸೃಷ್ಟಿಸುವ ಬಂಡವಾಳಶಾಹಿ ಯಜಮಾನಿಕೆಗೆ ದುಡಿಯುವ ವರ್ಗ ಶೋಷಣೆಗೆ ಒಳಗಾಗುವುದು ಸಾಮಾನ್ಯವಾಗುತ್ತದೆ. ಅವರ ಜಾತಿಯಲ್ಲಿಯೇ ಶೋಷಣೆಗೆ ಒಳಗಾದ ಗುರುಲಿಂಗಪ್ಪನು ಲಿಂಗಾಯಿತರ ಮಠದ ಕಾಲೇಜೊಂದರಲ್ಲಿ ಕೆಲಸ ಮಾಡುತ್ತಿರುತ್ತಾನೆ. ಸಾಧ್ಯವಾದಾಗಲೆಲ್ಲಾ ಚಂದ್ರಸ್ವಾಮಿಯ ವಿರುದ್ಧ ಹೋರಾಟಕ್ಕೆ ನಿಲ್ಲುತ್ತಾನೆ. ಅವನ ಹೋರಾಟವು ಅವನ ಅಸ್ತಿತ್ವದ ಸುತ್ತಾ ನಿಲ್ಲುತ್ತದೆ. ಚಂದ್ರಸ್ವಾಮಿಗೆ ರಾಜಕಾರಣಿ, ಸರ್ಕಾರದ ಬೆಂಬಲವಿರುತ್ತದೆ. ಗುರುಲಿಂಗಪ್ಪನ ಅಸ್ತಿತ್ವದ ಪ್ರಶ್ನೆ ಕಥೆಯ ಉದ್ದಕ್ಕೂ ನಡೆಯುತ್ತದೆ. ಪೂರ್ವ ಸಿದ್ಧತೆ ಇಲ್ಲದ ಗುರುಲಿಂಗಪ್ಪನ ಚಿಂತನೆಗಳು ಸಂಘಟನೆಯಾಗಿ ಪರಿವರ್ತಿತವಾಗದೆ ಸಂಘರ್ಷವು ತಾರ್ಕಿಕವಾಗಿ ಕೊನೆಗೊಳ್ಳುವುದಿಲ್ಲ.

ಜಾತಿಗಳ ಹೆಸರಿನಲ್ಲಿ ಸ್ಥಾಪಿಸುವಾಗುವ ಆಶ್ರಮಗಳು, ಮಠಗಳು ಸೇವೆಯ ಹೆಸರಿನಲ್ಲಿ ವರ್ಗವನ್ನು ಸೃಷ್ಟಿ ಮಾಡುವ ಕೇಂದ್ರಗಳಾಗುತ್ತವೆ. ಅಂಥ ಆಶ್ರಮಗಳಲ್ಲೂ ಕೂಡ ಸೇವೆಯೆಂಬ ಹೆಸರಿನಲ್ಲಿ ದುಡಿಯುವ ವರ್ಗ ವ್ಯವಸ್ಥಿತವಾಗಿ ಶೋಷಣೆಗೆ ಒಳಗಾಗುತ್ತದೆ.

ಭಾರತದ ದೇಶದಲ್ಲಿ ಬಂಡವಾಳ ಶಾಹಿಯ ಶ್ರೀಮಂತಿಕೆಯವರ ಅಡಿಯಲ್ಲಿ ದುಡಿಯುವ ವರ್ಗಗಳು ಯಾವ ಕಾರಣಕ್ಕೆ ಸಂಘರ್ಷಗಳಲ್ಲಿ ಸೋಲನ್ನು ಅನುಭವಿಸುತ್ತವೆ ಎಂಬುದನ್ನು ಅನಂತಮೂರ್ತಿಯವರು "ಆಕಾಶ ಮತ್ತು ಬೆಕ್ಕು" ಕಥೆಯಲ್ಲಿ 'ಗೋವಿಂದನ್ ನಾಯರ್' ಪಾತ್ರದ ಮೂಲಕ ತಿಳಿಸುತ್ತಾರೆ. ದೇಶದಲ್ಲಿ ಕಮ್ಯೂನಿಷ್ಟ್ ಚಿಂತನೆಗಳನ್ನು ಅಳವಡಿಸಿಕೊಂಡು ಸ್ವಲ್ಪ ಮಟ್ಟಿಗೆ ಪ್ರಬಲವಾಗಿರುವ ರಾಜ್ಯಗಳೆಂದರೆ ಪಶ್ಚಿಮಬಂಗಾಳ ಮತ್ತು ಕೇರಳ. ಅನಂತಮೂರ್ತಿಯವರ ಕಥೆಯ ಗೋವಿಂದನ್ ನಾಯರ್ ಕೇರಳದಿಂದ ಬಂದ ಕಮ್ಯೂನಿಷ್ಟ್ ವ್ಯಕ್ತಿ. ಆತನು ಆಚಾರ್ಯ ಸ್ನೇಹಿತನ ಮಗನಾದ ಕೃಷ್ಣಮೂರ್ತಿಯು ಖಾಸಗಿ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿರುವ ವ್ಯಕ್ತಿಗೆ ಪತ್ರವೊಂದನ್ನು ಬರೆಯುತ್ತಾನೆ. "ಶ್ರೀಮಂತರಿಂದ ಅವರ ಹಿತಕ್ಕಾಗಿ ಮಾತ್ರ ನಿಯಂತ್ರಿತವಾದ ಈ ಸಮಾಜವನ್ನು ನಾನು ಅತ್ಯಂತ ತೀವ್ರವಾಗಿ ದ್ವೇಷಿಸುತ್ತೇನೆ. ಒಂದು ಪ್ರಣಯ ಪ್ರಸಂಗದಿಂದ ಜಾಗೃತನಾಗಿ, ಮಾರ್ಕ್ಸ್ ಹೇಳುವ 'ಗ್ರಾಮೀಣ ಬದುಕಿನ ಈಡಿಯಸಿ'ಯಿಂದ ತಪ್ಪಿಸಿಕೊಳ್ಳಲೆಂದು ನಲವತ್ತು ವರ್ಷಗಳ ಹಿಂದೆ ದೆಹಲಿಗೆ ಹೋಗಿದ್ದ ನಿನ್ನ ಅಪ್ಪನ ಜೀವನದ ಸಂಭ್ರಮವನ್ನೆಲ್ಲ ನಾಶಮಾಡಿದ್ದುಈ ಶ್ರೀಮಂತರ ಚಾಕರಿ ಅಲ್ಲವೆ? ನಮ್ಮ ಧರ್ಮ, ನಮ್ಮ ಸಂಸ್ಕೃತಿ, ನಮ್ಮ ಪ್ರೀತಿಯ ಸಂಬಂಧಗಳು – ಈ ಎಲ್ಲವನ್ನೂ ಬಂಡವಾಳಶಾಹಿ ಪದ್ಧತಿಯ ಮೂಲವಿಗ್ರಹವಾದ ಹಣ ನಾಶ ಮಾಡುತ್ತದೆ. ನನ್ನಂಥವರ ಹೋರಾಟದಿಂದ ಮಾತ್ರ ಮಾರ್ಕ್ಸ್ ಕಂಡ ಮಾರ್ಗದಲ್ಲಿ ಮನುಷ್ಯ ಮತ್ತೆ ತನ್ನ ನೈಜ ಮನುಷ್ಯತ್ವವನ್ನು ಪಡೆದಾನು. ನನ್ನ ಜೀವನವೇ ಒಂದು ವಿಚಾರವಾಗಲೆಂದು ನಾನು ಮಾಡುತ್ತಿರುವ ಕ್ರಿಯೆಗಳು ನಿನಗೆ ಬರಿಯ ನಾಟಕವಾಗಿ ಕಂಡಲ್ಲಿ ಅದಕ್ಕಿಂತ ಉತ್ತಮವಾದದ್ದನ್ನು ತಿಳಿಸು. ಅದನ್ನೇ ನಾನು ಅನುಸರಿಸುತ್ತೇನೆ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಕೊಬ್ಬಿದ ಹಂದಿಗಳನ್ನು ನನಗೆ ಕೊಲ್ಲಬೇಕೆನ್ನಿಸುವುದೇನೂ ಖಂಡಿತ ನಾಟಕವಲ್ಲ. ನಿನ್ನ ತಂದೆಯ ಜೀವನದಂತೆಯೂ ನಿನ್ನದೂ ವ್ಯರ್ಥ ಆಗಬಾರದೆಂದು ಆಶಿಸುತ್ತೇನೆ. ಸಾಯುವಾಗ ಬರುವ ಅರಿವಿಗೆ ನಾನು ಮಹತ್ವ ಕೊಡುವುದಿಲ್ಲ– ಬದುಕಿರುವಾಗಿನ ಪ್ರತಿಕ್ಷಣದ ಪರಿಣಾಮ ಸಮುದಾಯದ ಮೇಲೆ ಏನಾಗುತ್ತದೆ ನನಗೆ ಮುಖ್ಯ. ಕ್ರಾಂತಿಗೆ ಜಯವಾಗಲಿ."[೩೬] ಎಂಬ ಒಕ್ಕಣಿಯ ಪತ್ರದಲ್ಲಿ ನಾಯರ್‌ನ ಹೋರಾಟ ಸಮುದಾಯಕ್ಕೆ ಒಳಿತಾಗಲಿ ಎಂಬುದೇ ಆಗಿರುತ್ತದೆ. ಅದರ ಮನವರಿಕೆಯನ್ನು ಆತನ ಸ್ನೇಹಿತನ ಮಗನಾದ ಕೃಷ್ಣಮೂರ್ತಿಗೆ ತಿಳಿಸುತ್ತಾನೆ. ನಾಯರ್ ಬದುಕಿನುದ್ದಕ್ಕೂ ಹೋರಾಟ ಮಾಡುತ್ತಾ ಬಂದವನಾಗಿರುತ್ತಾನೆ. ಸತ್ತ ನಂತರದ ಪರಿಣಾಮಕ್ಕಿಂತ ಹೆಚ್ಚಾಗಿ ಬದುಕಿರುವಾಗ ಅದರ ಅರ್ಥ ಹೆಚ್ಚಾಗಿರಬೇಕೆಂದು ಬಯುಸುತ್ತಾನೆ. ನಾಯರ್ ಕೂಡ ಏಕವ್ಯಕ್ತಿಯಾಗಿ ಹೋರಾಡುತ್ತಾನೆ.

ಕಾಫಿ ತೋಟದ ಕೆಲಸಗಾರರ ಬೋನಸ್ ವಿಚಾರದಲ್ಲಿ ಆಗುತ್ತಿರುವ ಅನ್ಯಾಯದ ಬಗ್ಗೆ ಮಾತನಾಡಲು ಮಂತ್ರಿಯ ಬಳಿ ಹೋದಾಗ ಮಾತಿನ ಸಂಘರ್ಷ ಹೊಡೆದಾಟಕ್ಕೆ

ಕಾರಣವಾಗುತ್ತದೆ. ನಾಯರ್ ಮಂತ್ರಿಗೆ ಹೊಡೆಯುತ್ತಾನೆ. ಅದರ ಪರಿಣಾಮದಿಂದ ಐದು ವರ್ಷ ಜೈಲು ಶಿಕ್ಷೆಯನ್ನು ಅನುಭವಿಸುತ್ತಾನೆ. ಆದರೂ ಆತನು "ಭ್ರಷ್ಟಚಾರದ ಜನವೈರಿಗಳನ್ನು ಕೊಲ್ಲುವುದೇ ತನ್ನ ಮುಂದಿನ ಯೋಜನೆ" ಎಂಬ ಹೇಳಿಕೆಯನ್ನು ನೀಡುತ್ತಾನೆ. ನಾಯರ್‌ನ ಏಕ ವ್ಯಕ್ತಿ ಹೋರಾಟ ಜೈಲಿಗೆ ಹೋಗುವಂತೆ ಮಾಡುತ್ತದೆ. ಆದರೂ ಮಾರ್ಕ್ಸ್ ಚಿಂತನೆಗೆ ಒಳಗಾಗಿದ್ದ ನಾಯರ್ "ದೇಶದ ಸ್ವಾತಂತ್ರ್ಯ ಬಂದ ನಂತರದಲ್ಲಿ ಸ್ಟ್ರೈಕ್‌ನಲ್ಲಿ ಭಾಗವಹಿಸಿ ಕೆಲಸ ಕಳೆದುಕೊಳ್ಳುತ್ತಾನೆ." "ರಷ್ಯಾದ ಮಾತು ಕೇಳಿ ದೇಶದ್ರೋಹಿ ಕಾಂಗ್ರೆಸ್ ಜೊತೆ ಕೇರಳದಲ್ಲಿನ ಕಮ್ಯೂನಿಸ್ಟ್ ಸೇರಿತೆಂದು ರಾಜಿನಾಮೆ ಕೊಟ್ಟು ಏಕಾಂಗಿಯಾದ" "ಆದರೆ ಕಮ್ಯೂನಿಸ್ಟ್ ಆಗಿಯೇ ಮುಂದುವರೆದ." ಮತ್ತು ಕೇರಳದ ಬಡಜನರಿಗೆ ತನ್ನಿಂದ ಆದ ಸಹಾಯ ಮಾಡಲು ಮುಂದಾಗುತ್ತಾನೆ. ಆಡಂಬರವಿಲ್ಲದ ಅವನ ಬದುಕಿನ ಎಲ್ಲ ಅಂಶಗಳು ಒಬ್ಬ ನಿಜವಾದ ಕಮ್ಯುನಿಸ್ಟ್ ವ್ಯಕ್ತಿ ಯೋಚಿಸುವ ರೀತಿಯಾಗಿದೆ. ನಾಯರ್ ಒಬ್ಬ ಹೋರಾಟಗಾರನ ನೆಲೆಯಲ್ಲಿ ಇದ್ದು ಮಾನವೀಯತೆಯನ್ನು ಮೈಗೂಡಿಸಿಕೊಳ್ಳುವ ವ್ಯಕ್ತಿಯಾಗಿ ಕಂಡುಬರುತ್ತಾನೆ. ಸಂಬಂಧಗಳಿಗೆ ಗಂಟು ಬೀಳುವುದಿಲ್ಲ. ವ್ಯಾಮೋಹಕ್ಕೆ ಒಳಗಾಗಿ ಬಂಡವಾಳ ಶಾಹಿ ನೆರಳಿನಲ್ಲಿ ಬದುಕಲಿಲ್ಲ. ಶೋಷಿತ ಜನರ ಪರವಾಗಿ ನಿಂತು "ಜನರ ಶತ್ರುಗಳಿಗೆ ಮೆಟ್ಟಿನಲ್ಲಿ ಅನೇಕ ಸಲ ಹೊಡೆಯುತ್ತಾನೆ. ಅದರಲ್ಲಿ ಮಂತ್ರಿಯೂ ಸೇರಿದ್ದನೆಂಬುದು ದೊಡ್ಡ ಸುದ್ದಿಯಾಗುತ್ತದೆ." ಅಷ್ಟೊಂದು ಹೋರಾಟ ಮಾಡಿದ ನಾಯರ್ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುವಲ್ಲಿ ಹೋರಾಟ ನಡೆಸುವ ಒಬ್ಬ ವ್ಯಕ್ತಿಯಾಗುತ್ತಾನೆ. ಕೃಷ್ಣಮೂರ್ತಿಗೆ ಕೌಟುಂಬಿಕ ಸಂಬಂಧದ ಬೆಲೆಯನ್ನು ಹೇಳುತ್ತಾನೆ. ಬಂಡವಾಳ ಶಾಹಿಯ ದುಷ್ಟತನವನ್ನು ಮನವರಿಕೆ ಮಾಡಿಕೊಡುವ ಪ್ರಯತ್ನ ಮಾಡುತ್ತಾನೆ. ಅಂತಿಮವಾಗಿ ನಾಯರ್ ಸ್ನೇಹಿತನಾದ ಜಯತೀರ್ಥ ಆಚಾರ್ಯನ ಅಂತಿಮ ದಿನಗಳ ಸಂದರ್ಭದಲ್ಲಿ ಅವನ ಜೊತೆ ನಿಲ್ಲುತ್ತಾನೆ. ಸ್ನೇಹ ಸಂಬಂಧಕ್ಕೆ ಬೆಲೆ ಕೊಡುತ್ತಾನೆ.

ಅನಂತಮೂರ್ತಿಯವರ 'ಕಾಮರೂಪಿ' ಕಥೆಯಲ್ಲಿ ಶಂಕರ್‌ಬಾಬು ರಾಜಕೀಯವಾಗಿ ಅಸ್ತಿತ್ವವನ್ನು ಸ್ಥಾಪಿಸಲು ತನ್ನ ಜಾತಿಯನ್ನು ಅಸ್ತ್ರವಾಗಿ ಬಳಸಿಕೊಳ್ಳುತ್ತಾನೆ.

ಶಂಕರ್‌ಬಾಬುವಿನ ತಂದೆಯ ಜಾತಿಯ ಕಸುಬು ಮನೆ ಕಟ್ಟುವುದು. ತಾಯಿಯ ಜೊತೆ ಅವನ ದುಡಿಮೆ. ತಂದೆಯು ದುಡಿದ ಹಣವನ್ನೆಲ್ಲಾ ಕುಡಿತಕ್ಕೆ ನೀಡುತ್ತಿದ್ದ. ಆತನ ತಾಯಿಯೇ ಮಕ್ಕಳನ್ನು ಸಾಕುತ್ತಿದ್ದಳು. ಅಕ್ಕ ಸರೋಜ, ಮತ್ತು ತಂಗಿ ಗೀತ ಇದ್ದಳು.

ಸರೋಜಳು ಮಂತ್ರಿಯ ಆಪ್ತ ಕಾರ್ಯದರ್ಶಿಯ ಜೊತೆ ಮದುವೆಯಾಗಿ ಕಾಲನಂತರದಲ್ಲಿ ಸೂಸೈಡ್ ಮಾಡಿಕೊಳ್ಳುತ್ತಾಳೆ. ತಂಗಿ ಗೀತ ಮತ್ತು ತಾಯಿ ಇಬ್ಬರು ನಕ್ಸಲೇಟ್‌ಗೆ ಸಹಾಯಕವಾಗಿ ನಿಲ್ಲುತ್ತಾರೆಂದು ಶಂಕರ್ ಬಾಬುವಿನ ಅರೋಪವಾಗಿರುತ್ತದೆ.

ಜಾತಿಯ ಹಿನ್ನೆಲೆಯಲ್ಲಿ ಬೆಳೆಯ ಬೇಕೆನ್ನುವ ಮನಸ್ಸು ಶಂಕರ್ ಬಾಬುವಿನದು. ಅದಕ್ಕಾಗಿ ಆತನು ಯೂತ್ ಕಾಂಗ್ರೆಸ್ ಲೀಡರ್. ಹಾಗೂ ಆಲ್ ಇಂಡಿಯಾ ಬ್ಯಾಕ್‌ವರ್ಡ್ ಸೆಲ್‌ಗೆ ಇನ್‌ವೈಟೀ ಆಗಿ ಮಂತ್ರಿಯಿಂದ ನಾಮಿನೇಟ್ ಆಗಿರುತ್ತಾನೆ. ಮುಂದೆ ಪಬ್ಲಿಕ್ ಸರ್ವಿಸ್ ಕಮಿಷನ್ನಿಗೆ ಛೇರ್ಮನ್ನೇ ಅಗುವ ಕನಸು ಹೊತ್ತಿರುತ್ತಾನೆ.

ಶಂಕರ್ ಬಾಬುವಿನ ತಂಗಿ ಗೀತಾಳಿಗೆ "ಸಾರಾಯಿ ಅಂಗಡಿಗಳನ್ನು ಮುಚ್ಚಿಸಿ ಕ್ರಾಂತಿ ಮಾಡೋದು ಅವನಿಗೆ ಇಷ್ಟವಿಲ್ಲ." ಆತನು ರಾಜಕೀಯವಾಗಿ ಬೆಳೆಯಬೇಕೆಂಬ ಕಾರಣಕ್ಕಾಗಿ ಗೀತಾ ಮತ್ತು ತಾಯಿ ನಕ್ಸಲೈಟರಾಗುವುದು ಒಪ್ಪಿತವಿಲ್ಲ. ಜೊತೆಗೆ ಕ್ರಾಂತಿಯ ಮನಸ್ಸನ್ನು ಬಿಡಬೇಕು. ಈ ಮೊದಲು ಅಕ್ಕ ಮದುವೆ ಮಾಡಿಕೊಂಡಿದ್ದ ವ್ಯಕ್ತಿಯ ಜೊತೆ ಗೀತಾಳು ಪುನಃ ಮದುವೆ ಮಾಡಿಕೊಳ್ಳಬೇಕು. ರಾಜಕೀಯವಾಗಿ ಎತ್ತರಕ್ಕೆ ಬೆಳೆಯಬೇಕೆನ್ನುವ ಶಂಕರ್ ಬಾಬುವಿನಂತಹ ವ್ಯಕ್ತಿಗಳು, ತುಳಿತಕ್ಕೆ ಒಳಗಾದ ವರ್ಗಗಳ ಹೋರಾಟವನ್ನು ಹತ್ತಿಕ್ಕುವ ಕೆಲಸ ಮಾಡುತ್ತಾರೆ. ಇಂತಹ ಕಾರಣಗಳಿಂದಲೂ ಸಂಘರ್ಷಗಳು ಗುರಿಯನ್ನು ತಲುಪಲು ವಿಫಲವಾಗುತ್ತವೆ.

ತುಳಿತಕ್ಕೆ ಒಳಗಾದ ಒಂದು ಕುಟುಂಬದಲ್ಲಿ ಎರಡು ವಿಭಿನ್ನ ಯೋಚನೆಗಳನ್ನು ಮಾಡುವ ವ್ಯಕ್ತಿಗಳು ಸಂಘರ್ಷವನ್ನು ತಾರ್ಕಿಕವಾಗಿ ಅಂತ್ಯಗೊಳಿಸುವಲ್ಲಿ ವಿಫಲವಾಗುತ್ತವೆಂಬುದನ್ನು ಈ ಕಥೆ ನಿರೂಪಿಸುತ್ತದೆ.

ಅನಂತಮೂರ್ತಿಯವರ ಕಥೆಗಳಲ್ಲೂ ಜಾತಿಯ, ದುಡಿಮೆಯ ಹಿನ್ನೆಲೆಯಲ್ಲಿ ನಡೆಯುವ ಹೋರಾಟಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ಪ್ರಯತ್ನಗಳಾಗಿರುತ್ತವೆಯೇ ಹೊರತು ರಚನಾತ್ಮಕವಾಗಿ ಸಂಘಟನೆಯ ರೂಪದಲ್ಲಿ, ಪೂರ್ವ ಸಿದ್ದತೆಗಳನ್ನು ಮಾಡಿಕೊಂಡು ಹೋರಾಟ ನಡೆಸುವುದಿಲ್ಲ. ಅಂಥ ಎಲ್ಲಾ ಹೋರಾಟಗಳು ಬಂಡವಾಳ ಸೃಷ್ಟಿಸುವ ಮೇಲ್ವರ್ಗಗಳ ಹಿತಾಸಕ್ತಿಗಳ ಮುಂದೆ ಸೋಲಾಗುತ್ತವೆ ಎಂಬುದನ್ನು ಅನಂತಮೂರ್ತಿ ಯವರ ಕಥೆಗಳು ಕಟ್ಟಿ ಕೊಡುತ್ತವೆ.

ತೇಜಸ್ವಿಯವರ ಕಥೆಗಳಲ್ಲಿ ವರ್ಗ ಸಂಘರ್ಷಗಳಿಗಿಂತ ಹೆಚ್ಚು ಪ್ರಾಶಸ್ತ್ಯ ಇರುವುದು ವರ್ಗ ಸಂಬಂಧಗಳಲ್ಲಿ ಕಂಡು ಬಂದರೆ, ಲಂಕೇಶರ ಕಥೆಗಳಲ್ಲಿ ವರ್ಗ ಸಂಘರ್ಷಗಳು ಪ್ರಧಾನವಾಗಿವೆ. ಅನಂತಮೂರ್ತಿಯವರಲ್ಲಿ ಆಧುನಿಕ ನಗರದಲ್ಲಿ ಸೃಷ್ಟಿಸುವ ವರ್ಗ ಸಂಘರ್ಷಗಳು ಪ್ರಮುಖವಾಗಿ ಕಂಡುಬರುತ್ತವೆ. ನವ್ಯ ಸಾಹಿತ್ಯದ ಪ್ರಮುಖರಾದ ಈ ಮೂವರು ಕಥೆಗಾರರು ಸಾಮಾಜಿಕ ಕಳಕಳಿಯ ವಿಚಾರಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ.

## ಕೊನೆ ಟಿಪ್ಪಣಿ

೧. ಮೊಗಳ್ಳಿ ಗಣೇಶ್, (ಸಂ), ಮತೀಯ ಭಯಾವತಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಪುಟ-೫೫, ೨೦೦೯.

೨. ಪೂರ್ಣಚಂದ್ರ ತೇಜಸ್ವಿ ಕೆ.ಪಿ., ವಿಮರ್ಶೆಯ ವಿಮರ್ಶೆ, ಪುಸ್ತಕ ಪ್ರಕಾಶನ, ಮೈಸೂರು, ಪುಟ-೧೧೦, ೨೦೧೩.

೩. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೧೯, ೨೦೧೬.

೪. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೩೮, ೨೦೧೬.

೫. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೬೫, ೨೦೧೬.

೬ ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೧೦೪, ೨೦೧೫.

೭ ಪೂರ್ಣಚಂದ್ರ ತೇಜಸ್ವಿ, ಕಿರಗೂರಿನ ಗಯ್ಯಾಳಿಗಳು,(ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೧೦೪, ೨೦೦೫

೮. ಲಂಕೇಶ್ ಪಿ. ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೧೭,೧೮. ೨೦೦೭.

೯. ಲಂಕೇಶ್ ಪಿ. ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೩೧, ೨೦೦೭.

೧೦. ಲಂಕೇಶ್ ಪಿ. ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೬೩, ೨೦೦೭.

೧೧. ಲಂಕೇಶ್ ಪಿ. ಕಲ್ಲು ಕರಗುವ ಸಮಯ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೨೬, ೨೦೧೫.

೧೨. ಲಂಕೇಶ್ ಪಿ. ಉಲ್ಲಂಘನೆ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೩, ೨೦೧೩.

೧೩. ಲಂಕೇಶ್ ಪಿ. ಉಲ್ಲಂಘನೆ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೧೦, ೨೦೧೩.

೧೪. ಲಂಕೇಶ್ ಪಿ. ಉಲ್ಲಂಘನೆ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೧೯, ೨೦೧೩.

೧೫. ಲಂಕೇಶ್ ಪಿ. ಉಲ್ಲಂಘನೆ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೨೧, ೨೦೧೩.

೧೬. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೧೪,೧೧೫, ೨೦೦೧.

೧೭. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೧೪, ೨೦೦೧.

೧೮. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೨೪೯, ೨೦೦೧.

೧೯. ಪೂರ್ಣಚಂದ್ರ ತೇಜಸ್ವಿ ಕೆ.ಪಿ., ವಿಮರ್ಶೆಯ ವಿಮರ್ಶೆ, ಪುಸ್ತಕ ಪ್ರಕಾಶನ, ಮೈಸೂರು, ಪುಟ-೧೦೯, ೨೦೧೩.

೨೦. ನಾಗರಾಜ್ ಡಿ.ಅರ್. ಅಮೃತ ಮತ್ತು ಗರುಡ, ಅಕ್ಷರ ಪ್ರಕಾಶನ, ಪುಟ-೩೨, ೨೦೦೯.
೨೧. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೨೧, ೨೦೧೬.
೨೨. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೫೯, ೨೦೧೬.
೨೩. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೪೭, ೨೦೧೫.
೨೪. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೪೮, ೨೦೧೫.
೨೫. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೬೦, ೨೦೧೫.
೨೬. ಪೂರ್ಣಚಂದ್ರ ತೇಜಸ್ವಿ, ಕಿರಗೂರಿನ ಗಯ್ಯಾಳಿಗಳು,(ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೮೧, ೨೦೦೫.
೨೭. ಪೂರ್ಣಚಂದ್ರ ತೇಜಸ್ವಿ, ಪಾಕಕ್ರಾಂತಿ,(ಕಥಾ ಸಂಕಲನ), ಪುಸ್ತಕ ಪ್ರಕಾಶನ, ಪುಟ-೧೦೧, ೨೦೧೬.
೨೮. ಲಂಕೇಶ್ ಪಿ. ಕಲ್ಲು ಕರಗುವ ಸಮಯ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೪೪, ೨೦೧೫.
೨೯. ಲಂಕೇಶ್ ಪಿ. ಕಲ್ಲು ಕರಗುವ ಸಮಯ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೪೬, ೨೦೧೫.
೩೦. ಲಂಕೇಶ್ ಪಿ. ಕಲ್ಲು ಕರಗುವ ಸಮಯ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೫೦,೫೧, ೨೦೧೫.
೩೧. ಲಂಕೇಶ್ ಪಿ. ಕಲ್ಲು ಕರಗುವ ಸಮಯ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೯೭, ೨೦೧೫.
೩೨. ಲಂಕೇಶ್ ಪಿ. ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ, (ಕಥಾ ಸಂಕಲನ), ಲಂಕೇಶ್ ಪ್ರಕಾಶನ, ಪುಟ-೨೫, ೨೦೦೭.
೩೩. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೧೨೪, ೨೦೦೧.
೩೪. ಊರು ಕಂಡಂತೆ ಅನಂತ....ಮೂರ್ತಿ., ಸೂರ್ಯ ಕುದುರೆ ಪ್ರಕಾಶನ, ಪುಟ-೬೬, ೨೦೧೬.
೩೫. ನಾಗತಿಹಳ್ಳಿ ಚಂದ್ರಶೇಖರ್, ರೆಕ್ಕೆ ಬೇರು, ಅಭಿವ್ಯಕ್ತಿ ಸಾಂಸ್ಕೃತಿಕ ವೇದಿಕೆ, ಪುಟ-೧೬, ೨೦೧೪.
೩೬. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು,(ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಪುಟ-೩೬೭, ೨೦೦೧.

* * * * * *

ಅಧ್ಯಾಯ–೬

## ಸಮಾರೋಪ

---

ಅಧ್ಯಯನದ ಫಲಿತಗಳು.

ಅನುಬಂಧ ೧ : ಆಕರಗಳು.

ಅನುಬಂಧ ೨ : ಪರಾಮರ್ಶನ ಗ್ರಂಥಗಳು.

## ಅಧ್ಯಾಯ-೬

## ಸಮಾರೋಪ

ಸಾಹಿತ್ಯ ಪರಂಪರೆಯಲ್ಲಿ ಕಥಾ ಪ್ರಕಾರ ಅತಿ ಹೆಚ್ಚಿನ ಓದುಗರನ್ನು ಹೊಂದಿದೆ. ಅದರ ಫಲಿತ ಇತರೆ ಪ್ರಕಾರಗಳಂತೆ ದೀರ್ಘವಾಗಿರದೆ ಚಿಕ್ಕದಾಗಿದ್ದು, ಓದುಗನಿಗೆ ಫಲಿತಾಂಶವನ್ನು ನೀಡುತ್ತದೆ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಕಾದಂಬರಿಯ ನಂತರ ಕಥಾ ಪ್ರಕಾರ ಹೆಚ್ಚಿನ ಪ್ರಸಿದ್ದಿಯನ್ನು ಪಡೆದುಕೊಂಡಿದೆ. ಸಾಮಾಜಿಕ ಕಳಕಳಿಯನ್ನು ಹೊಂದಿದ ಕಥೆಗಳು ಓದುಗರಿಗೆ ಹೆಚ್ಚಿನ ಪ್ರಭಾವ ಬೀರಿ ಓದುಗನನ್ನು ಚಿಂತನೆಗೆ ಒಳಪಡಿಸಿದುವುಗಳಾಗಿವೆ.

ಆಧುನಿಕ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಪೂರ್ಣಚಂದ್ರ ತೇಜಸ್ವಿ, ಪಿ.ಲಂಕೇಶ್, ಯು.ಆರ್.ಅನಂತಮೂರ್ತಿಯವರು ಸಮಕಾಲೀನ ಕಥೆಗಾರರಾಗಿದ್ದಾರೆ. ತೇಜಸ್ವಿಯವರ ವ್ಯಕ್ತಿಯ ಸಮಷ್ಠಿ ಚಿಂತನೆಗಳು, ಲಂಕೇಶರ ತಿರಸ್ಕೃತ ಸಮಾಜ ಮತ್ತು ಅನಂತಮೂರ್ತಿಯವರ ಅಸ್ತಿತ್ವದ ಹುಡುಕಾಟ ಅವರ ಸಾಮಾಜಿಕ ಕಳಕಳಿಯ ಕಥೆಗಳಲ್ಲಿ ಕಂಡುಬರುತ್ತವೆ.

ತೇಜಸ್ವಿಯವರು ನಗರ ಪ್ರದೇಶದಿಂದ ದೂರವಾಗಿ ಗ್ರಾಮೀಣ ಭಾಗದಲ್ಲಿ ತಮ್ಮ ಬದುಕನ್ನು ಕಟ್ಟಿಕೊಂಡವರು. ಬಹುಮುಖ ಪ್ರತಿಭೆಯುಳ್ಳವರು, ಗ್ರಾಮೀಣ ಸಮಾಜದ ಬದುಕನ್ನು ಹತ್ತಿರದಿಂದ ಬಲ್ಲವರು. ಅವರ ಬರಹಗಳಲ್ಲಿ ವ್ಯಕ್ತಿಗೆ ಸಂಬಂಧಿಸಿದ ಬದುಕಿನ ತುಡಿತವಿದೆ. ಸಾಮಾಜಿಕ ಕಳಕಳಿಯಿದೆ. ಚಿಂತನೆಗಳನ್ನು ಅಳವಡಿಸಿಕೊಳ್ಳುವ ಮೂಲಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

ಲಂಕೇಶ್‌ರವರು ಬೋಧಕರಾಗಿದ್ದವರು, ಬರಹಗಾರ, ಸಾಹಿತ್ಯ, ಸಿನಿಮಾ, ನಾಟಕ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಪ್ರತಿಭಾವಂತ ವ್ಯಕ್ತಿ. ತಿರಸ್ಕೃತ ಸಮಾಜದಲ್ಲಿ ಬದುಕಿನ ಮೌಲ್ಯಗಳ ಅನಾವರಣವನ್ನು ತಮ್ಮ ಬರಹಗಳ ಮೂಲಕ ತಂದಿದ್ದಾರೆ. ಜಾತಿಯಂಥ ಅನಿಷ್ಟ ಪದ್ದತಿಗೆ ವೈಜ್ಞಾನಿಕ ಪರಿಹಾರವನ್ನು ತಮ್ಮ ಕಥೆಗಳಲ್ಲಿ ಓದುಗನಿಗೆ ನೀಡಿದ್ದಾರೆ.

ಕನ್ನಡ ಸಾಹಿತ್ಯ ಪರಂಪರೆಯನ್ನು ಶ್ರೀಮಂತಗೊಳಿಸಿದ ಬರಹಗಾರರಲ್ಲಿ ಅನಂತಮೂರ್ತಿಯವರು ಒಬ್ಬರು. ದೇಶಿಯ ಚಿಂತನೆಗಳನ್ನು ವಿದೇಶಿ ನೆಲೆಗಟ್ಟಿನಲ್ಲಿ

ನಿಂತು ನೋಡಿದವರು. ಸಮಾಜವಾದಿ ಚಿಂತನೆಯ ವ್ಯಕ್ತಿ. ಜೀವನದ ಅಸ್ತಿತ್ವದ ಹುಡುಗಾಟವನ್ನು, ಅನುಭವಗಳನ್ನು, ತಮ್ಮ ಕಥೆಗಳ ಮೂಲಕ ಕಟ್ಟಿಕೊಟ್ಟಿದ್ದಾರೆ.

ಈ ಮೂರು ಜನ ಕಥೆಗಾರರ ಕಥೆಗಳನ್ನು ಅನುಲಕ್ಷಿಸಿ, "ಕನ್ನಡ ಕಥಾ ಸಾಹಿತ್ಯದಲ್ಲಿ ಸಮಾಜದ ಸ್ವರೂಪ" ಕುರಿತ ಅಧ್ಯಯನ ಮಾಡಲಾಗಿದೆ.

ಮಹಾಪ್ರಬಂಧದಲ್ಲಿ ಒಟ್ಟು ಆರು ಅಧ್ಯಾಯಗಳಿವೆ. ಮೊದಲ ಅಧ್ಯಾಯದಲ್ಲಿ "ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿಯ ಅಡಿಯಲ್ಲಿ ಪ್ರಸ್ತಾವನೆ, ಅರ್ಥ, ಉದ್ದೇಶ, ಮಹತ್ವ, ವ್ಯಾಪ್ತಿ, ವೈಧಾನಿಕತೆ, ಮಹಾಪ್ರಬಂಧಕ್ಕೆ ಸಂಬಂಧಿಸಿದಂತೆ ಸಂಶೋಧನೆಯ, ಲೇಖನಗಳ ಸಮೀಕ್ಷೆಯನ್ನು ಮಾಡಲಾಗಿದೆ.

ಎರಡನೆಯ ಅಧ್ಯಾಯವು "ಸ್ತ್ರೀ–ಪುರುಷರ ಸಂಬಂಧಗಳು" ಎಂಬ ಶೀರ್ಷಿಕೆಯಡಿಯಲ್ಲಿ ಗ್ರಾಮೀಣ ಮತ್ತು ನಗರದ ಸಾಂಸರಿಕ ಜೀವನದ ಸಹಬಾಳ್ವೆಯ ಸಾರ್ಥಕತೆಗೆ ಕುಟುಂಬಗಳ ಕೊಡುಗೆಗಳು, ವಿಭಕ್ತ ಕುಟುಂಬಗಳ ಅನಾಹುತಗಳು ಹೆಣ್ಣುಗಂಡುಗಳ ವಿವಾಹ–ವಿವಾಹೇತರ ಪ್ರಕೃತಿದತ್ತ ದೈಹಿಕ ಸಂಬಂಧಗಳು, ಅಸಹಾಯಕ ಹೆಣ್ಣಿನ ಮೆಲಿನ ಲಿಂಗಧಾರಿತ ಶೋಷಣೆಯ ಮುಖಗಳ ಬಗ್ಗೆ ವಿಶ್ಲೇಷಿಸಲಾಗಿದೆ.

"ಜಾತಿ–ಧರ್ಮಾಧಾರಿತ ಸಮುದಾಯದ ಪರಿಕಲ್ಪನೆ" ಎಂಬ ಮೂರನೇ ಅಧ್ಯಾಯವು ದುಡಿಮೆಯ ಅನಿವಾರ್ಯತೆ, ಸಮಾಜದ ನಂಬಿಕೆಗಳು–ಆಚರಣೆಗಳು, ಹಾಗೂ ವೈಚಾರಿಕತೆಯ ಸವಾಲುಗಳ ಬಗ್ಗೆ ಚರ್ಚಿಸಲಾಗಿದೆ.

"ವಿಭಿನ್ನ ನೆಲೆಗಟ್ಟುಗಳ ಜೀವನ ಸ್ವರೂಪ" ಎಂಬ ನಾಲ್ಕನೇ ಅಧ್ಯಾಯವು ಗ್ರಾಮೀಣ ಹಾಗೂ ನಗರ ಪ್ರದೇಶ ಮತ್ತು ಭಾರತೀಯ, ಪಾಶ್ಚಿಮಾತ್ಯ ಜನ ಜೀವನದ ಕ್ರಮಗಳು, ಸಾಂಸ್ಕೃತಿಕ ಸನ್ನಿವೇಶಗಳ ಅಧ್ಯಯನ ಮಾಡಿ, ಅವುಗಳನ್ನು ಗುರುತಿಸಲಾಗಿದೆ.

ಅಧ್ಯಾಯ ಐದರಲ್ಲಿ "ವರ್ಗಾಧಾರಿತ ಸಮಾಜ"ದಲ್ಲಿ ಅನಿವಾರ್ಯವಾಗುವ ವರ್ಗಸಂಬಂಧಗಳು, ನಿರಂತರವಾಗಿ ನಡೆಯುತ್ತಿರುವ ವರ್ಗಸಂಘರ್ಷಗಳನ್ನು ಜಾತಿಯಾಧಾರಿತ ಸಮಾಜ, ದುಡಿಮೆಯ ಆಧಾರಿತ ಸಮಾಜಗಳು ಶೋಷಣೆಗೆ ಒಳಗಾಗುವ ರೀತಿಗಳನ್ನು, ಹೋರಾಟ ಮಾಡಲು ಅಸಹಾಯಕರಾಗುವ ಸನ್ನಿವೇಶಗಳನ್ನು ವಿಶ್ಲೇಷಿಸಲಾಗಿದೆ.

ಅಧ್ಯಾಯ ಆರರಲ್ಲಿ ಒಟ್ಟು ಅಧ್ಯಯನದ ಫಲಿತಗಳನ್ನು ವಿವರಿಸಲಾಗಿದೆ.

## ಅಧ್ಯಯನದ ಫಲಿತಗಳು

ಪ್ರಸ್ತುತ ಸಂಶೋಧನ ಅಧ್ಯಯನಕ್ಕೆ ಒಳಪಡಿಸಿದ ತೇಜಸ್ವಿ, ಲಂಕೇಶ್, ಮತ್ತು ಅನಂತಮೂರ್ತಿಯವರ ಕಥೆಗಳಲ್ಲಿ ಸಮಾಜ ಸ್ವರೂಪ ಸ್ತ್ರೀ-ಪುರುಷರ ಸಂಬಂಧಗಳು, ಜಾತಿ ಧರ್ಮಾಧಾರಿತ ಸಮುದಾಯದ ಪರಿಕಲ್ಪನೆಗಳು, ವಿಭಿನ್ನ ನೆಲೆಗಟ್ಟುಗಳ ಜೀವನ ಸ್ವರೂಪ ಹಾಗೂ ಸಮಾಜದ ವರ್ಗಾಧಾರಿತ ಸಂಬಂಧಗಳ ಹಿನ್ನೆಲೆಯಲ್ಲಿ ಸಮಗ್ರವಾಗಿ ಅಧ್ಯಯನ ಮಾಡಲಾಗಿದ್ದು, ಅವುಗಳ ಫಲಿತಗಳನ್ನು ಒಟ್ಟಂದದಲ್ಲಿ ಈ ರೀತಿ ದಾಖಲಿಸಲಾಗಿದೆ.

- ಮಾನವ ನಿರ್ಮಿತ ಸಮಾಜದಲ್ಲಿ ಕುಟುಂಬಗಳು ತಮ್ಮ ಅಸ್ತಿತ್ವಕ್ಕಾಗಿ ಹೋರಾಡುತ್ತಲೇ ಇರುತ್ತವೆ. ಅವುಗಳು ತಮ್ಮ ನೆಲೆಗಳನ್ನು ಗಟ್ಟಿಗೊಳಿಸಿಕೊಳ್ಳಲು ಪ್ರಯತ್ನಿಸುತ್ತಿರುತ್ತವೆ. ನಗರಗಳು ಆಕರ್ಷಣೀಯವಾಗಿ ಕಂಡರೂ ಆರ್ಥಿಕವಾಗಿ ಸದೃಢವಲ್ಲದ ಸಂಸಾರಗಳು ದುರ್ಬಲವಾಗಿ ಕಾಣುತ್ತವೆ ಹಾಗೂ ಆ ಸಂಸಾರದಲ್ಲಿನ ಗಂಡ-ಹೆಂಡತಿಯ ಸಂಬಂಧಗಳು ಅನುಮಾನಗಳ ಸುಳಿಯಲ್ಲಿ ಸಿಲುಕಿ ಏರಿಳಿತಗಳನ್ನು ಕಂಡು, ಅಂತಿಮವಾಗಿ ಅದರಿಂದ ಹೊರಬರಲು ಹವಣಿಸುತ್ತಿರುತ್ತವೆ. ಮತ್ತೊಂದು ಕಡೆ ಗ್ರಾಮೀಣ ಕುಟುಂಬಗಳು ಮೂಲಭೂತ ಸೌಕರ್ಯಗಳಿಂದ ವಂಚಿತವಾಗಿರುತ್ತವೆ. ಸಾಮಾಜಿಕವಾಗಿ ಸಶಕ್ತಗೊಳ್ಳಲು ಹವಣಿಸುತ್ತಿರುತ್ತವೆ. ಆ ಕುಟುಂಬಗಳಿಗೆ ಆರ್ಥಿಕವಾಗಿ ಪ್ರಬಲವಾಗುವಂತಹ ದುಡಿಮೆಗಳು ದೊರಕಬೇಕು. ಅದರ ಪರಿಣಾಮ ಗ್ರಾಮೀಣ ಕುಟುಂಬಗಳು ನಗರ ಪ್ರದೇಶಗಳ ಆಕರ್ಷಣೆಯಿಂದ ದೂರವಾಗುತ್ತವೆ. ಹಾಗೆಯೇ ನಗರದಲ್ಲಿ ದೊರಕುವ ಆಧುನಿಕತೆಯ ಅಂಶಗಳು ಪೂರ್ಣ ಪ್ರಮಾಣದ ಸಿದ್ದತೆಗಳೊಂದಿಗೆ ಗ್ರಾಮೀಣ ಭಾಗಕ್ಕೆ ಹಂಚಿಕೆಯಾದರೆ ಅದು ಆರೋಗ್ಯ ಪೂರ್ಣ ಸಮಾಜದ ಸೃಷ್ಟಿಗೆ ಅವಕಾಶ ಮಾಡಿಕೊಡುತ್ತದೆ. ಒಂದು ವೇಳೆ ಆಧುನಿಕತೆಯ ಜ್ಞಾನವು ಹಂತಹಂತವಾಗಿ ಗ್ರಾಮೀಣ ಭಾಗದ ಜನತೆಗೆ ದೊರಕದೆ ಏಕಾಏಕಿ ದಾಳಿಯಾದರೆ ಕುಟುಂಬದ ಮೇಲೆ ಬೀರುವ ಪರಿಣಾಮ ಹಾಗೂ ಅದರಿಂದ ತಲ್ಲಣಗಳು ಉಂಟಾಗಿ ಆಗುವ ಅನಾಹುತಗಳು ನಾಗರಿಕ ಸಮಾಜಕ್ಕೆ ಎಚ್ಚರಿಕೆಯನ್ನು ತಂದೊಡ್ಡುತ್ತವೆ ಎಂಬುದನ್ನು ಈ ಅಧ್ಯಯನದ ಕತೆಗಾರರು ತಮ್ಮ ಕಥೆಗಳಲ್ಲಿ ಕಟ್ಟಿಕೊಟ್ಟಿರುವುದನ್ನು ಕಾಣಬಹುದು.

• ಭಾರತೀಯ ಸಮಾಜದಲ್ಲಿ ವೈವಾಹಿಕ ಸಂಬಂಧ ಹೆಚ್ಚಿನ ಮಹತ್ವವನ್ನು ಹೊಂದಿದೆ. ಅದು ಗಂಡ-ಹೆಣ್ಣುಗಳ ನಡುವಿನ ಸಂಬಂಧದ ಸಂಸ್ಕಾರವಾಗಿದೆ. ಆದರೆ ವೈವಾಹಿಕ ನೆಲೆಯಿಂದ ನೋಡುವಾಗ ಲೈಂಗಿಕ ಕ್ರಿಯೆಗೆ ಸೀಮಿತವಾಗಿಲ್ಲ. ದೈಹಿಕ ಕಾಮನೆಗಳಿಗೆ ಗಂಡು ಹೆಣ್ಣು ಎಂಬ ವ್ಯತ್ಯಾಸವಿಲ್ಲ. ಗಂಡಿನಷ್ಟೆ ಹೆಣ್ಣು ಕೂಡ ದೈಹಿಕ ಕಾಮನೆಗಳನ್ನು ಪೂರೈಸಿಕೊಳ್ಳುವಲ್ಲಿ ಪ್ರಧಾನ ಪಾತ್ರವಹಿಸುತ್ತಾಳೆ. ಲೈಂಗಿಕತೆ ಹೆಣ್ಣಿಗೆ ಮಕ್ಕಳನ್ನು ಹೆರುವುದಕ್ಕೆ ಸೀಮಿತವಾಗಿಲ್ಲ. ಹಾಗೂ ವೈವಾಹಿಕ ಚೌಕಟ್ಟಿನಲ್ಲಿಯೇ ಇರಬೇಕೆಂಬ ನಿಯಮವಿಲ್ಲ. ಮಾನವ ವರ್ಗದ ಬದುಕಿನ ಒಂದು ಭಾಗವಾಗಿ ಲೈಂಗಿಕತೆ ಇರುತ್ತದೆ. ಸಮಾಜದಲ್ಲಿ ಸ್ತ್ರೀಯರು ಒಂದು ಭೋಗದ ವಸ್ತುವಲ್ಲ. ಪುರುಷನಷ್ಟೆ ಹೆಣ್ಣಿಗೆ ಕೂಡ ದೈಹಿಕ ಕಾಮನೆಗಳು ಅವಶ್ಯಕವಾಗಿರುತ್ತವೆ. ಆದರೆ ಪುರುಷರು ಸ್ತ್ರೀಯರಿಗಿಂತ ತಮ್ಮ ದೈಹಿಕ ಕಾಮನೆಗಳ ಈಡೇರಿಕೆಗಳಲ್ಲಿ ಮುಂದಿರುತ್ತಾರೆ. ಕಾಮದ ವಿಚಾರದಲ್ಲಿ ಕೆಲವರು ಸಮಾಜದ ಕಟ್ಟುಪಾಡುಗಳನ್ನು ಮೀರಿ ನಿಲ್ಲುತ್ತಾರೆ. ಇನ್ನೂ ಕೆಲವರು ಸಮಾಜಕ್ಕೆ ಹೆದರಿ ಎಚ್ಚರಿಕೆಯ ಹೆಜ್ಜೆ ಇಡುತ್ತಾರೆ. ಸಹಾಯ ರೂಪದಲ್ಲಿ, ಅಧಿಕಾರದ ಮೂಲಕ, ಸೇಡಿನ ರೂಪದಲ್ಲಿ ಹೆಣ್ಣಿನ ದೇಹದ ಮೇಲೆ ಯಜಮಾನಿಕೆಯ ದರ್ಪವನ್ನು ತೋರುತ್ತಾರೆ. ಅಂಥವರಲ್ಲಿ ವಿವಾಹ ಅರ್ಥಹೀನ ಪದವಾಗಿರುತ್ತದೆ. ಅದು ನಿತ್ಯ ಸಂಭೋಗಕ್ಕೆ ಸಿಕ್ಕ ಪರವಾನಗಿಯೆಂದಷ್ಟೆ ತಿಳಿದಿರುತ್ತಾರೆ. ಹಾಗೂ ಅಂತಹ ವ್ಯಕ್ತಿಯಲ್ಲಿ ಸಹಜವಾಗಿರುವ ದೈಹಿಕ ಕಾಮನೆಗಳು ಸಭ್ಯ ನಾಗರಿಕನಂತೆ ಮುಖವಾಡಗಳನ್ನು ಧರಿಸಿದರೂ ಅಸಹಜವಾದ ಬಯಕೆಗಳು ಅವನ ಅಧಃಪತನಕ್ಕೂ ಕಾರಣವಾಗುತ್ತವೆ ಎಂಬುದನ್ನು ಲಂಕೇಶರವರ 'ಸೆಪ್ಟಂಬರ್ ಪ್ರಥಮ ರಾತ್ರಿ', 'ಎ ಸೂಸೈಡ್ ನೋಟ್', 'ದಾಳಿ' ಕಥೆಗಳು ನಿರೂಪಿಸುತ್ತವೆ.

• ಅನಾದಿಕಾಲದಿಂದಲೂ ಪುರುಷರು ಹೆಣ್ಣಿನ ಮೇಲಿನ ಶೋಷಣೆ ಮಾಡುತ್ತಲೇ ಬಂದಿದ್ದಾರೆ. ಪುರುಷನ ದೃಷ್ಟಿಯಲ್ಲಿ ಆಕೆ ಭೋಗದ ವಸ್ತುವೆಂದು, ಅತನ ನೆರಳಲ್ಲಿ ಇರಬೇಕೆಂದು ಯೋಚಿಸುತ್ತಾನೆ. ಹೆಣ್ಣು ಸಮಾಜ ಮುಖಿಯಾಗಬಾರದು, ಒಂದು ವೇಳೆ ಆದರೆ ಅದನ್ನು ಹೇಗಾದರೂ ಮಾಡಿ ತಡೆಗಟ್ಟುವ ದುಸ್ಸಾಹಸಕ್ಕೆ ಪುರುಷ ಸಮಾಜ ನಿಲ್ಲುತ್ತದೆ. ಅವಳು ಪುರುಷ ಸಮಾಜವನ್ನು ಎದುರು ಹಾಕಿಕೊಂಡ ಕಾರಣಕ್ಕಾಗಿ ಸೋಲುತ್ತಾಳೆ. ಪುರುಷರಿಂದ ತನ್ನ ಕುಟುಂಬಕ್ಕೆ ಆದ ಅನ್ಯಾಯದ ವಿರುದ್ಧ ಹೋರಾಡಲು ಪುರುಷನನ್ನೆ ಆಶ್ರಯಿಸುವ ವ್ಯಂಗ್ಯ ಲಂಕೇಶರವರ 'ಉರಿದ ಊರಿನವರು', ಕಥೆಯಲ್ಲಿ ಕಂಡುಬರುತ್ತದೆ. ಸಂಸ್ಕೃತಿಯ ಹೆಸರಿನಲ್ಲಿ ಆಗುತ್ತಿರುವ ಅನ್ಯಾಯ ಅತಿ ಹೆಚ್ಚು ಮಹಿಳೆಯರ ಮೇಲೆ ಆಗಿದೆ. ಧರ್ಮದ ಹೆಸರಿನಲ್ಲಿ ಹೆಣ್ಣನ್ನು ಬಂಧಿಸುವುದು, ಸಂಸ್ಕೃತಿಯ, ಆಚಾರದ ಹೆಸರಿನಲ್ಲಿ ಆಕೆಯನ್ನು ಬಂಧಿಸುವುದು ಹಿಂದಿನಿಂದಲೂ ಬಂದಿದೆ. ಸ್ವಾತಂತ್ರ್ಯೋತ್ತರ ಕಾಲದವರಿಗೂ ಇದರ ಪ್ರಮಾಣ ಹೆಚ್ಚಾಗಿಯೇ ಇತ್ತು. ಚಿಕ್ಕ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡರೆ, ಹೆಣ್ಣು ಆಶ್ರಯವನ್ನು ಗಂಡನ ಮನೆಯಲ್ಲಿ ಅಥವಾ ತವರಿನಲ್ಲಿ ಜೀವನ

ಮುಗಿಯುವವರೆಗೂ ಕಳೆಯುವ ದುರಂತ ಸ್ಥಿತಿ ನಗರಕ್ಕಿಂತ ಹೆಚ್ಚಾಗಿ ಗ್ರಾಮೀಣ ಭಾಗದಲ್ಲಿ ಕಂಡುಬರುತ್ತದೆ. ಭಾರತೀಯ ಸಂಸ್ಕೃತಿಯ ದೃಷ್ಟಿಯಿಂದ ಅನಂತಮೂರ್ತಿಯವರ 'ಘಟಶ್ರಾದ್ಧ' ಹಾಗೂ ಇತರ ಕಥೆಗಳಲ್ಲಿ ಹೆಚ್ಚಿನ ಮಹತ್ವ ಪಡೆದಿವೆ.

- ಭೂಮಿ ವ್ಯವಸಾಯಕ್ಕೆ ಮಾತ್ರ ಸೀಮಿತವಾಗಿಲ್ಲ. ಮನಷ್ಯನ ಆರ್ಥಿಕ ಬಂಡವಾಳ ಹೂಡಿಕೆಯ ಕೇಂದ್ರವೂ ಆಗಿದೆ. ವ್ಯವಸಾಯ ಬದುಕಿನ ಅನಿವಾರ್ಯಕ್ಕಿಂತ ಕೆಲವರಿಗೆ ಹವ್ಯಾಸದ ರೂಪದಲ್ಲಿ ಬದಲಾವಣೆಯಾಗುತ್ತಿರುವುದು ಕೂಡ ಇದೆ. ಹಾಗೆಯೇ ಭೂ ರಹಿತವಾದ ವ್ಯಕ್ತಿಗಳು ಜೀವನೋಪಾಯಕ್ಕಾಗಿ ಕೂಲಿ, ವ್ಯಾಪಾರವನ್ನು ಮಾಡಿ ಜೀವನ ನಡೆಸುವ ಪರಿಯನ್ನು ನೋಡಬಹುದಾಗಿದೆ. ಇವುಗಳ ಜೊತೆಗೆ ಜಾತಿಯಾಧಾರಿತ ದುಡಿಮೆಗಳು ಕೂಡ ಪ್ರಧಾನವಾಗಿರುತ್ತವೆ. ಬಹುಪಾಲು ಸಂದರ್ಭಗಳಲ್ಲಿ ವಂಶಿಕವಾಗಿ ಬರುವ ದುಡಿಮೆಗಳನ್ನು ಸುಲಭವಾಗಿ ಬದಲಾಯಿಸಲು ಸಾಧ್ಯವಿಲ್ಲ. ಒಂದು ವೇಳೆ ಬದಲಾವಣೆಗಳನ್ನು ಮಾಡಿಕೊಳ್ಳಲು ಯೋಚಿಸಿದರೆ ಅದರ ಸಾಧಕ-ಬಾಧಕಗಳನ್ನು ಅನುಭವಿಸಿಯೇ ತೀರಬೇಕು. ಬಹುಪಾಲು ಭಾರತೀಯ ರೈತನು ತನ್ನ ದುಡಿಮೆಯನ್ನು ಪ್ರೀತಿಸಿ ಅಥವಾ ಅನಿವಾರ್ಯವಾಗಿ ಒಪ್ಪಿಕೊಂಡರೂ ತನ್ನ ಮುಂದಿನ ತಲೆಮಾರಿಗೆ ಬಳುವಳಿಯಾಗಿ ಬಿಟ್ಟುಕೊಡುವುದಿಲ್ಲ. ತಾನು ದುಡಿಮೆಯಲ್ಲಿ ಅನುಭವಿಸಿದ ಕಷ್ಟಗಳನ್ನು ಮುಂದಿನ ಜನಾಂಗಕ್ಕೆ ವರ್ಗಾಯಿಸುವ ಮನಸ್ಥಿತಿಯನ್ನು ಹೊಂದಿರುವುದಿಲ್ಲ. ರೈತರ ಬೆಳೆಗಳಿಗೆ ಇನ್ನೂ ಉತ್ತಮ ಮಾರುಕಟ್ಟೆ ಲಭ್ಯವಿಲ್ಲವೆಂಬುದು ರೈತ ಸಮುದಾಯಕ್ಕೆ ತಿಳಿದಿದ್ದರೂ, ಬೆಳೆಯುವ ಬೆಳೆಗಳ ವಿಷಯಕ್ಕೆ ಪೈಪೋಟಿ ಇರುತ್ತದೆ. ಎಲ್ಲರೂ ಕೆಲವೊಮ್ಮೆ ಏಕ ಮಾದರಿಯ ಬೆಳೆಯನ್ನು ಬೆಳೆದು ಲಾಭವನ್ನು ಮಾಡುವ ಯೋಚನೆ ಮಾಡುತ್ತಾರೆ. ಎಷ್ಟೋ ಬಾರಿ ಉತ್ತಮ ಧಾರಣೆ ಲಭಿಸದೆ ಸಾಲದ ಸುಳಿಯಲ್ಲಿ ಸಿಲುಕುತ್ತಾರೆ. ಸರ್ಕಾರಗಳು ಕೂಡ ರೈತರ ಬೆಳೆಗೆ ಲಾಭವನ್ನು ಕೊಡಿಸುವಲ್ಲಿ ವಿಫಲವಾಗುತ್ತಿವೆ. "ವ್ಯವಸಾಯ ಅದು ಉದ್ಯಮವಲ್ಲ. ಬದಲಿಗೆ ಬದುಕಿನ ಆಧಾರ. ರೈತನ ದುಡಿಮೆ ಒಂದು ವೇಳೆ ಯೋಗ್ಯವಾದ ರೀತಿಯಲ್ಲಿ ಬದುಕನ್ನು ರೂಪಿಸದಿದ್ದರೆ ವಿನಾಶ ಕಟ್ಟಿಟ್ಟಬುತ್ತಿ"ಯಾಗುತ್ತದೆ. ಅಧ್ಯಯನಕ್ಕೊಳಪಡಿಸಿದ ಕಥೆಗಳು ರುಜುವಾತುಪಡಿಸುತ್ತವೆ.

- ಮೌಢ್ಯತೆ ಮತ್ತು ವೈಜ್ಞಾನಿಕತೆ ಮುಖಾಮುಖಿಯಾದಾಗ ವೈಜ್ಞಾನಿಕತೆಗಿಂತ ಮೂಢ ನಂಬಿಕೆಯೇ ಪ್ರಧಾನವಾಗುತ್ತದೆ. ವಿಜ್ಞಾನ ಸತ್ಯಗಳನ್ನು ವೈಜ್ಞಾನಿಕವಾಗಿ ಹೊರಗೆಡವಿದರೂ ಜನತೆಯ ಅವೈಜ್ಞಾನಿಕ ನಂಬಿಕೆಗಳನ್ನು ಹೋಗಲಾಡಿಸಲು ಸಾಧ್ಯವಿಲ್ಲವೆಂಬ ವಿಚಾರವನ್ನು ತೇಜಸ್ವಿ 'ಕುಬಿ ಮತ್ತು ಇಯಾಲ' ಕಥೆಯಲ್ಲಿ ದಾಖಲಿಸಿದ್ದಾರೆ. ಹಾಗೆಯೇ ಮನುಷ್ಯನ ಬಹುಪಾಲು ಬದುಕು ನಂಬಿಕೆ ಮತ್ತು ಆಚರಣೆಗಳಿಂದ ಕೂಡಿದೆ. ಆತನ ಹುಟ್ಟು ದೈವಿಕ ಸ್ವರೂಪದ ಪ್ರತಿಫಲವೆಂದು ನಂಬುವ ಜನಾಂಗವಿದೆ. ಜೊತೆಗೆ "ಮನುಷ್ಯನು ಸದಾ ಅನುಕೂಲ ಸಿಂಧು." ತನ್ನ ಅನುಕೂಲಕ್ಕಾಗಿ ದೇವರು-ದೆವ್ವವನ್ನು ಸೃಷ್ಟಿಸುತ್ತಾನೆ.

ನಂಬುತ್ತಾನೆ, ನಂಬಿಸುತ್ತಾನೆ. ಕೊನೆಗೆ ಅವೆಲ್ಲಾ ಸುಳ್ಳು ಎಂಬ ವಿಚಾರವನ್ನು ಸಮಾಜಕ್ಕೆ ತಿಳಿಸುತ್ತಾನೆ. ಲಂಕೇಶ್‌ರವರ "ಮಾರಲಾಗದ ನೆಲ" ಕಥೆಯಲ್ಲಿ ದೆವ್ವ-ಭೂತಗಳಿವೆ ಎಂದು ಹಳ್ಳಿಯವರು ನಂಬುವ ವಿಚಾರಗಳನ್ನು ತಂದು ವ್ಯಕ್ತಿಗಳಿಗೆ ನಂಬಿಕೆಗಳು-ಆಚರಣೆಗಳಿಂದ ಆಗುವ ಲಾಭ-ನಷ್ಟಗಳ ವಿಚಾರಗಳನ್ನು ಗುರ್ತಿಸಲಾಗಿದೆ. ಹಾಗೆಯೇ ನಂಬಿಕೆ ಮತ್ತು ಆಚರಣೆಗಳ ನಡುವೆ ಸಿಲುಕಿ ನರಳುವ ಹೆಣ್ಣೊಬ್ಬಳ ಜೀವನವನ್ನು ಕುರಿತಂತೆ ಅನಂತಮೂರ್ತಿಯವರ 'ಘಟಶ್ರಾದ್ಧ' ಕಥೆ ಹೆಚ್ಚಿನ ಮಹತ್ವವನ್ನು ಪಡೆಯುತ್ತದೆ. ಹಾಗೆಯೇ 'ಅಕ್ಕಯ್ಯ' ಕಥೆಯಲ್ಲಿ ಶ್ರೀನಿವಾಸನು ವಿದೇಶದಲ್ಲಿ ನಿಂತು ಭಾರತದಲ್ಲಿರುವ ತನ್ನ ಅಕ್ಕಯ್ಯಳ ಬಗ್ಗೆ ಯೋಚಿಸುತ್ತಿರುವಾಗ, ಹಿಂದೂ ಸಂಸ್ಕೃತಿಯ ಗೊಡ್ಡು ನಂಬಿಕೆಗಳ ಬಗ್ಗೆ ನಿಷ್ಠುರವಾದ ವ್ಯಕ್ತಿಯಾಗಿ ಕಾಣುತ್ತಾನೆ.

• ಪ್ರೀತಿಯ ತುಡಿತಕ್ಕೆ ಒಳಗಾಗುವ ಹದಿಹರೆಯರ ಮನಸ್ಸು ಸದಾ ಚಂಚಲವಾಗಿರುತ್ತದೆ. ಅದು ಪ್ರೀತಿ-ಕಾಮದ ಆಕರ್ಷಣೀಯ ಕಾರಣಕ್ಕಾಗಬಹುದು ಅಥವಾ ವ್ಯವಸಾಯ ಮುಖಿಯ ದುಡಿಮೆಯಿಂದ ವಿಮುಖನಾಗ ಬಯಸುವ ಕಾರಣಕ್ಕೂ ಆಗಬಹುದು, ಅಥವಾ ಸಹಜವಾದ ನಗರದ ಆಕರ್ಷಣೀಯ ವಿಚಾರಕ್ಕೂ ಆಗಬಹುದು. ಒಟ್ಟಾರೆಯಾಗಿ ಯುವ ಮನಸ್ಸುಗಳು ಸದಾ ಇಂಥ ವಿಚಾರಗಳ ಕಡೆ ಗಮನ ಹರಿಸುತ್ತವೆ. ಅವುಗಳಲ್ಲಿ ಅಂತರ್ ಜಾತಿಯ ಪ್ರೇಮ ಪ್ರಕರಣಗಳು ನಗರ ಪ್ರದೇಶಗಳಿಗಿಂತ ಹೆಚ್ಚಾಗಿ ಗ್ರಾಮೀಣ ಭಾಗದಲ್ಲಿ ಹೆಚ್ಚಿನ ಮಹತ್ವವನ್ನು ಪಡೆದುಕೊಳ್ಳುತ್ತವೆ. ನಗರವಾಸಿ ವ್ಯಕ್ತಿಯೊಬ್ಬನು ಯೋಚಿಸುವ ರೀತಿ ಸದಾ ಸಂತೋಷ, ನೆಮ್ಮದಿಯಾಗಿರಬೇಕೆಂದು. ಅದು ಸುಲಭ ಸಾಧ್ಯವಿಲ್ಲ. ಗ್ರಾಮೀಣ ಭಾಗದಲ್ಲಿದ್ದಾಗ ನಗರ ಬದುಕು ಚೆಂದವೆಂದು, ನಗರದಲ್ಲಿದ್ದಾಗ ಗ್ರಾಮೀಣ ಬದುಕು ಅಂದವೆಂದು ದ್ವಂದ್ವವಾಗಿ ಯೋಚಿಸುವ ಮನಸ್ಥಿತಿಗಳು ಇರುತ್ತವೆ. ನಗರದ ಕೃತಕ ಬದುಕಿನಿಂದ ಹೊರಬಂದು ಹಳ್ಳಿಯ ಜೀವನ ಬಯಸುವವರನ್ನು ಗ್ರಾಮೀಣ ಭಾಗದಲ್ಲಿ ವಿಚಿತ್ರವಾಗಿ ನೋಡುವ, ಅಪಹಾಸ್ಯ ಮಾಡುವ ಜನತೆ ಸ್ಥಳೀಯ ಜೀವನವನ್ನು ಒಪ್ಪಿಕೊಳ್ಳಲಾರದೆ ಪರಿತಪಿಸುವುದನ್ನು ಇಲ್ಲಿನ ಅಧ್ಯಯನದ ಮೂಲಕ ಗುರುತಿಸಲಾಗಿದೆ.

• ಭಾರತೀಯ ಸಂಸ್ಕೃತಿಯ ಮಹತ್ವವನ್ನು ಕೇವಲ ಒಂದು ಧರ್ಮಕ್ಕೆ ಸೀಮಿತವಾಗಿ ಅಳವಡಿಸಬಾರದು. ಭಾರತೀಯ ಸಂಸ್ಕೃತಿಯಲ್ಲಿ ಧರ್ಮ ಸೌಹಾರ್ದತೆಗೆ ಅತಿ ಹೆಚ್ಚಿನ ಪ್ರಾಮುಖ್ಯತೆ ಇದೆ. ಅದು ಹಿಂದೂ ಧರ್ಮವಾಗಿರಬಹುದು, ಮುಸ್ಲಿಂ ಧರ್ಮವಾಗಿರಬಹುದು, ಕ್ರೈಸ್ತ, ಜೈನ, ಬೌದ್ಧ, ಸಿಖ್ ಹೀಗೆ ನಾನಾ ಬಗೆಯ ಧರ್ಮಗಳಾಗಿರಬಹುದು ಸಂವಿಧಾನದಡಿಯಲ್ಲಿ ಪ್ರತಿಯೊಂದು ಧರ್ಮದವರು ತಮ್ಮದೇ ಆದ ಸಂಸ್ಕೃತಿಯನ್ನು ಹೊಂದಿದ್ದು, ಒಟ್ಟಾರೆಯಾಗಿ ಭಾರತ ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಿದೆ. ಅಲ್ಪ ಮತೀಯ ವರ್ಗದಿಂದ ಇಂದು ಮತೀಯ ಸಂಘರ್ಷಗಳು ಆಗಾಗ್ಗೆ ಆಗುತ್ತಿರುವುದು

ಮಾತ್ರ ದುರಾದೃಷ್ಟಕರ. ತೇಜಸ್ವಿಯವರ ಕಥಾ ಸಾಹಿತ್ಯದಲ್ಲಿ ಕಾಣುವ ಅತಿ ದೊಡ್ಡ ಉಡುಗೊರೆಯೆಂದರೆ ಕೋಮು ಸೌಹಾರ್ದತೆಯ ಸಮಾಜ. ಅವರ ಕಥೆಗಳಲ್ಲಿ ಹಿಂದು-ಮುಸ್ಲಿಂ-ಕ್ರಿಶ್ಚಿಯನ್ ಪಾತ್ರಗಳು ಬರುತ್ತವೆ. ಆದರೆ ಅವೆಲ್ಲವೂ ಅಂತಿಮವಾಗಿ ಸೌಹಾರ್ದತೆಯ ಸಂಕೇತಗಳಾಗಿಯೇ ನಿಲ್ಲುತ್ತವೆ. ಗ್ರಾಮೀಣ ಭಾಗದ ಸಮಸ್ಯೆಗಳ ಕಡೆ ಗಮನ ಹರಿಸುತ್ತವೆಯೇ ಹೊರತು ಧರ್ಮದ ಹೆಸರಿನಲ್ಲಿ ಹೋರಾಟ ನಡೆಸುವ ಮಟ್ಟಕ್ಕೆ ಕಥೆಗಳು ರೂಪಿತವಾಗಿಲ್ಲ. ಅದು ಆರೋಗ್ಯ ಸಮಾಜದ ಲಕ್ಷಣವೂ ಅಲ್ಲ. ಅವರ 'ಅಬಚೂರಿನ ಪೋಸ್ಟಾಫೀಸು', 'ಡೇರ್ ಡೆವಿಲ್ ಮುಸ್ತಫಾ', 'ಕಿರಗೂರಿನ ಗಯ್ಯಾಳಿಗಳು', 'ಕೃಷ್ಣೇಗೌಡನ ಆನೆ', ಕಥೆಗಳಲ್ಲಿ ಬರುವ ಪಾತ್ರಗಳು ಭಾರತೀಯ ಸಮಾಜದ ಕೋಮು ಸೌಹಾರ್ದತೆಯನ್ನು ಪ್ರತಿಬಿಂಬಿಸುತ್ತವೆ. ಇಲ್ಲಿನ ಪಾತ್ರಗಳು ಸಾಮಾಜಿಕ ಚೌಕಟ್ಟಿನಲ್ಲಿ ಆರ್ಥಿಕ ಸ್ಥಿತಿಗತಿಗಳು ಮತ್ತು ಜೀವನ ಕ್ರಮವನ್ನು ಪ್ರತಿನಿಧಿಸುತ್ತವೆ. ಸ್ಥಳೀಯ ಮೂಲಭೂತ ಸಮಸ್ಯೆಗಳ ಮೇಲೆ ಬೆಳಕನ್ನು ಚೆಲ್ಲುತ್ತವೆಯೇ ಹೊರತು ಧಾರ್ಮಿಕ ಸಂಘರ್ಷವನ್ನು ಪ್ರತಿನಿಧಿಸುವುದಿಲ್ಲ.

● ಲಂಕೇಶರಿಗೆ ಗಾಂಧಿ ಚಿಂತನೆಯ ಬಗ್ಗೆ ಕಾಳಜಿ ಇತ್ತು. ಆ ಕಾರಣದಿಂದ ಗ್ರಾಮ ಸ್ವರಾಜ್ಯದ ಕಲ್ಪನೆಯನ್ನು ತಮ್ಮ ಕೃತಿಗಳಲ್ಲಿ ತಂದಿದ್ದಾರೆ. ಮತೀಯ ವಾದಿಗಳು ಸೃಷ್ಟಿಸುವ ಉಗ್ರ ಹಿಂದೂ ರಾಷ್ಟ್ರದ ನೀತಿಯನ್ನು ತಮ್ಮ ಕೃತಿಗಳಲ್ಲಿ ಬಹುಪಾಲು ಸಂದರ್ಭದಲ್ಲಿ ಖಂಡಿಸಿದ್ದಾರೆ. ಹಾಗೆಯೇ ಜಾತಿಯ ಪ್ರಧಾನ ಸಮಾಜವನ್ನು ತಿರಸ್ಕರಿಸಿದ್ದಾರೆ. "ಡಿಸೋಜಾನ 'ಊವಿನ' ವೃತ್ತಿ" ಕಥೆಯಲ್ಲಿ ಅವರ ನಿಲುವನ್ನು ಸ್ಪಷ್ಟ ಪಡಿಸಿರುವುದನ್ನು ಕಾಣುತ್ತೇವೆ.

● ಸಂಸ್ಕೃತಿಯ ಮತ್ತೊಂದು ಪ್ರತೀಕ 'ಭಾಷೆ.' ಭಾರತದಂತಹ ದೇಶದಲ್ಲಿ ಸ್ಥಳೀಯ ಭಾಷೆಗಳು ತಮ್ಮದೆ ಆದ ರೀತಿಯಲ್ಲಿ ಅಸ್ಥಿತ್ವವನ್ನು ಹೊಂದಿವೆ. ಜಾಗತೀಕರಣ ಅಥವಾ ದೇಶದ ಏಕ ಭಾಷೆಯ ಬಲವಂತದ ಒತ್ತಾಯ ಆಯ ಸ್ಥಳೀಯ ಭಾಷೆಯ ಮೇಲೆ ಹೇರಿಕೆಯಾದರೆ ಅದರ ದೂರಗಾಮಿ ಪರಿಣಾಮಗಳು ಯಾವಾಗಲು ದುಷ್ಪರಿಣಾಮಗಳನ್ನು ಬೀರುತ್ತವೆ. ಅಂಥ ವಿಚಾರಗಳನ್ನು ಲಂಕೇಶ್‌ರ 'ಆಕ್ಟೋಪಸ್' ಕಥೆಯಲ್ಲಿ ಬರುವ ಭಾಷಿಕ ವಿಚಾರಗಳಲ್ಲಿ ಓದುಗನಿಗೆ ಸ್ಥಳೀಯ ಭಾಷೆಗೆ ಆಗುತ್ತಿರುವ ಅಪಾಯಕಾರಿ ಸ್ಥಿತಿಗಳು ಮತ್ತು ಪರಿಹಾರಗಳನ್ನು ಸೂಚಿಸುತ್ತಾರೆ. ಮತ್ತೊಂದು ಕಡೆ ಅನಂತಮೂರ್ತಿಯವರ 'ಕ್ಲಿಪ್ ಜಾಯಿಂಟ್', 'ರೂತ್ ಮತ್ತು ರಸೂಲ್,' ಕಥೆಗಳು ವಿವಿಧ ದೇಶಗಳ ಸಾಂಸ್ಕೃತಿಕ ಮನಸ್ಥಿತಿಯನ್ನು ಕುರಿತ ವಿಚಾರಗಳನ್ನೊಳಗೊಂಡಿವೆ. 'ಕ್ಲಿಪ್ ಜಾಯಿಂಟ್' ಕಥೆಯಲ್ಲಿ ಎರಡು ವಿಭಿನ್ನ ದೇಶಗಳ, ವಿಭಿನ ಮನಸ್ಸಿನ ವ್ಯಕ್ತಿಗಳನ್ನು ಕಥೆಯ ಚೌಕಟ್ಟಿನಲ್ಲಿ ಕಟ್ಟಿಕೊಟ್ಟಿದ್ದಾರೆ. 'ರೂತ್ ಮತ್ತು ರಸುಲ್.' ಕಥೆಯಲ್ಲಿ ವಿದೇಶದಲ್ಲಿ ಬದುಕನ್ನು ಕಟ್ಟಿಕೊಂಡಿರುವ ಭಾರತೀಯ ಮನಸ್ಸುಗಳ ಬೇರುಗಳು ತಾವು ಬೆಳೆದ ದೇಶದಲ್ಲಿಯೇ ಜೀವಂತವಾಗಿವೆ ಎಂಬುದನ್ನು ತಿಳಿಸುತ್ತಾ ಹೋಗುತ್ತಾರೆ.

● ವರ್ಗ ಸಂಬಂಧಗಳ ಜೀವಂತಿಕೆಯನ್ನು ಗ್ರಾಮೀಣ ಭಾಗದ ಚೌಕಟ್ಟಿನಲ್ಲಿ ತರುವ ಮೂಲಕ ಜಾತಿಯು ಅವರ ಸಮಾಜದ ಕಾರಣಕ್ಕಾಗಿಯೇ ಹೊರತು ಇಡೀ ಸಮಾಜಕ್ಕೆ ಅದು ಪ್ರಧಾನವಾಗುವುದಿಲ್ಲ. ಜಾತಿಯಾಧಾರಿತ ಹಳ್ಳಿಗಳಲ್ಲಿ ತಮ್ಮದೇ ಆದ ಕಾಯಕಗಳನ್ನು ಮಾಡುತ್ತಿರುತ್ತಾರೆ. ಆದರೆ ಅವರ ಜಾತಿ ಮತ್ತು ಕಾಯಕಗಳನ್ನು ಇನ್ಯಾವುದೋ ಜಾತಿಯವರು ಹೀಯ್ಯಾಳಿಸುವುದು, ತಿರಸ್ಕರಿಸುವುದು ನಡೆದಾಗ ಸಮಸ್ಯೆಗಳು ತಲೆದೋರುತ್ತವೆ. ವರ್ಗ ಸಂಬಂಧಗಳ ಅನಿವಾರ್ಯತೆಯ ಎಚ್ಚರವನ್ನು ಓದುಗನಿಗೆ ನೀಡುತ್ತವೆ. ಜೊತೆಗೆ ವರ್ಗ ಸಂಬಂಧಗಳು ಹದಗೆಡುವಲ್ಲಿ ಮಾಲೀಕರ ಮತ್ತು ಕಾರ್ಮಿಕರ ನಡವಳಿಕೆಗಳು ಅತಿ ಮುಖ್ಯವಾಗಿರುತ್ತವೆ. ಅದರಲ್ಲೂ ಗಂಡು-ಹೆಣ್ಣು ದುಡಿಯುವ ವಾತಾವರಣವಂತೂ ಸೂಕ್ಷ್ಮದಿಂದ ಕೂಡಿರುತ್ತದೆ. ಅವರುಗಳ ನಡುವಿನ ಸಂಬಂಧ ಆರೋಗ್ಯಕರವಾಗಿದ್ದರೆ ಯಾವುದೇ ಅನಾಹುತಗಳು ಜರುಗಲಾರವು. ಅವು ಕೆಲವೊಮ್ಮೆ ದುಡಿಮೆಯ ಸಂಬಂಧ ತಪ್ಪಿದ್ದರೆ ವ್ಯಕ್ತಿಯ ವ್ಯಕ್ತಿತ್ವದ ಮೇಲೆ ಬರೆ ಎಳೆದಂತಾಗುತ್ತದೆ. ಅದು ಮಾಲೀಕನಿಗೆ ಆಗಬಹುದು ಅಥವಾ ಕಾರ್ಮಿಕನಿಗೆ ಆಗಬಹುದು ಸಮಸ್ಯೆಗಳಂತೂ ತಲೆದೋರುತ್ತವೆ. ವರ್ಗ ಸಂಬಂಧಗಳಲ್ಲಿ ಕಾಮವೂ ಕೂಡ ಒಂದು ವಿಚಾರವಾಗಿ ಆರ್ಥಿಕ ಹಿನ್ನೆಲೆಯಲ್ಲಿ ಯೋಚಿಸುವ ಯಜಮಾನಿಕೆಯಲ್ಲಿ ಕಂಡುಬರುತ್ತದೆ.

● ಭೂಮಾಲೀಕರ ಹಿಡಿತದಲ್ಲಿನ ದುರ್ಬಲ ವರ್ಗಗಳು ನೇರವಾಗಿ ಪ್ರತಿಭಟಿಸಲು ಸಾಧ್ಯವಾಗುವುದಿಲ್ಲ. ಆದರೆ ಶೋಷಣೆಯ ವಿರುದ್ದವಾಗಿ ಅವರ ಮಾತುಗಳು ಇರುತ್ತವೆ ವರ್ಗ ಸಂಘರ್ಷಗಳು ವಿಫಲಗೊಳ್ಳುವಲ್ಲಿ ಅಧಿಕಾರ, ಬಲಿಷ್ಠ ವರ್ಗಗಳು ಆಯಾಯ ಸಮಾಜವನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿರುತ್ತವೆ. ಅಂಥ ಸಂದರ್ಭದಲ್ಲಿ ಹೋರಾಟಗಳು ವಿಫಲವಾಗುತ್ತವೆ. ಹೊಂದಾಣಿಕೆ ಅನಿವಾರ್ಯ ಮತ್ತು ಅವಶ್ಯಕವಾಗಿರುತ್ತದೆ. ಅಸ್ತಿತ್ವ ಪ್ರಧಾನವಾಗಿ ಉಳಿದೆಲ್ಲ ವಿಚಾರಗಳು ಗೌಣವಾಗುತ್ತವೆ. ಎಂಬುದನ್ನು ಲಂಕೇಶರ "ಒಬ್ಬಂಟಿ" ಕಥೆಯಲ್ಲಿ ಕಾಣಬಹುದು. ಹಾಗೆಯೇ ಅನಂತ ಮೂರ್ತಿಯವರ 'ಮೌನಿ' ಕಥೆಯು ಅತಿ ಮುಖ್ಯವಾದ ಗೇಣಿ ಪದ್ದತಿಯು ಗ್ರಾಮೀಣ ಜಗತ್ತಿನಲ್ಲಿ ಜೀವಂತಿಕೆಯಿಂದ ಇರುವುದನ್ನು ತೋರಿಸುತ್ತದೆ. ಯಜಮಾನಿಕೆಯ ಮತ್ತೊಂದು ಭಾಗವಾಗಿ 'ಆರ್ಥಿಕ ಬೆಳವಣಿಗೆಯಲ್ಲಿ ಒಬ್ಬರನ್ನು ತುಳಿದು ಬೆಳೆಯುವುದಕ್ಕಿಂತ, ತಾವು ಬೆಳೆದು ಮತ್ತೊಬ್ಬರನ್ನು ಬೆಳೆಸಿ ಬೆಳೆಯುವುದು ಅತಿ ಮುಖ್ಯವಾಗುತ್ತದೆ.' ಅಂತಿಮವಾಗಿ ನೆಲೆ ನಿಲ್ಲುವುದು ಮಾನವೀಯತೆ. ಅದು ಅದೃಶ್ಯವಾದ ದೈವದ ಹೆಸರಿನಲ್ಲಿ ಧರ್ಮ-ಕರ್ಮದ ನೆರಳಿನಲ್ಲಿ ಸಹಾಯ ಹಸ್ತ ನೀಡುತ್ತದೆ.

● ವ್ಯಕ್ತಿಗಳಲ್ಲಿ ಅಡಕವಾಗಿರುವ ಜಾತಿಯ ಸ್ವಪ್ರತಿಷ್ಠೆಗಳು ಹೆಚ್ಚಾದಂತೆ ಅವರಲ್ಲಿ ತನ್ನ ಸುತ್ತಮುತ್ತಲಿನ ಘಟನೆಗಳ ಬಗ್ಗೆ ಅರಿವು ಕಡಿಮೆಯಾಗುತ್ತದೆ. ಅದರಲ್ಲೂ ಶ್ರೀಮಂತಿಕೆಯಿಂದ ಕೂಡಿದ ವ್ಯಕ್ತಿಗಳಲ್ಲಿ ಜಾತಿಯ ಮೇಲಿನ ಅಹಂಗಳು ಹೆಚ್ಚಾದಷ್ಟು ಅವರ ಸುತ್ತಮುತ್ತಲಿನ

ಸಮಾಜ ಅನಾರೋಗ್ಯದಿಂದ ಬಳಲುತ್ತದೆ. ಅದಕ್ಕೆ ತಿಳಿದ ವ್ಯಕ್ತಿಗಳು ಮುಲಾಮು ಹಚ್ಚುವವರೆಗೂ ಅದರ ಬೆಳವಣಿಗೆ ಹೆಚ್ಚಾಗುತ್ತಾ ಹೋಗುತ್ತದೆ. ಲಂಕೇಶರು ಜಾತಿಯ ಆಧಾರಿತ ಕಥೆಗಳಲ್ಲಿ ಜಾತಿ ಸಂಘರ್ಷಕ್ಕೆ ಪರಿಹಾರವನ್ನು ಸೂಚಿಸುವುದು ಕಂಡುಬರುತ್ತದೆ. ಜಾತಿಯ ಮೂಲವನ್ನು ಹುಡುಕುವುದು, ಸಂಘರ್ಷಕ್ಕೆ ಇಳಿಯುವುದಾಗಿದೆ. ಭಾರತ ದೇಶದಲ್ಲಿ ಜಾತಿಯ ವ್ಯವಸ್ಥೆಯೇ ಜೀವಂತ ಪ್ರತೀಕ. ಕಾಲಕಳೆದರೂ ಜಾತಿಯ ಸ್ವರೂಪ ಬದಲಾಗುತ್ತಿದ್ದರೂ ತನ್ನ ಮೂಲ ಎಳೆಯನ್ನು ಕಳೆದುಕೊಂಡಿಲ್ಲ. ಇನ್ನೊಂದು ವಿಚಿತ್ರವೆಂದರೆ ಜಾತಿಯೊಳಗಿನ ವ್ಯಕ್ತಿಗಳು ತಮ್ಮ ಜಾತಿಯ ವ್ಯಕ್ತಿಗಳನ್ನು ಶೋಷಣೆ ಮಾಡುವುದು, ಅವರ ವಿರುದ್ಧ ಸಂಘರ್ಷಕ್ಕೆ ಇಳಿಯುವುದು 'ಯಜಮಾನಿಕೆ'ಯ ಹಿಡಿತ ಎಲ್ಲಾ ವರ್ಗಗಳಲ್ಲೂ ಇರುವುದು ಕಂಡುಬರುತ್ತದೆ.

- ಸಮಾಜವಾದಿ ಚಿಂತನೆಳನ್ನು ಕೇವಲ ತಮ್ಮ ಸ್ವಾರ್ಥಕೋಸ್ಕರ ಬಳಸಿಕೊಂಡರೆ ಅದರಿಂದ ಆಗುವ ಅಪಾಯಗಳು ಅತಿರೇಕವಾಗಿರುತ್ತವೆ. ಕುಟುಂಬಗಳು ನಾಶವಾಗುತ್ತವೆ. ನಿರ್ದಿಷ್ಟ ಯೋಚನೆಗಳಿಂದ ಕೂಡಿದ ಗುರಿಗಳು ಇಲ್ಲದಿದ್ದರೆ ಅವಮಾನಕ್ಕೆ ಒಳಗಾಗುವ ಸಂದರ್ಭಗಳು ಹೆಚ್ಚಾಗಿರುತ್ತವೆ. ಬಹುತೇಕ ಸಾಹಿತಿಗಳು ಕ್ರಾಂತಿ, ಸಮಾಜವಾದಿ ಚಿಂತನೆಗಳನ್ನು ವಾಸ್ತವದಲ್ಲಿ ಒಪ್ಪಿಕೊಳ್ಳಲು ಇಷ್ಟ ಪಡುವುದಿಲ್ಲ. ಅವರು ಬರೆಯುವ ಸಾಹಿತ್ಯ ಮಾತ್ರ ಆತನ ಆದರ್ಶ ಸಮಾಜವಾದಿ ಚಿಂತನೆಗಳಾಗಿ ಕಂಡುಬರುತ್ತವೆ. ಹೊರತು ವಾಸ್ತವದಲ್ಲಿ ಆ ಚಿಂತನೆಯಿಂದ ದೂರವಾಗುವುದು ಕಂಡುಬರುತ್ತದೆ. ಇನ್ನೊಂದು ಕಡೆ ಊಳಿಗಮಾನ್ಯ ಪದ್ಧತಿಯನ್ನು ಸೃಷ್ಟಿಸುವ ಯಜಮಾನಿಕೆಯ ಬಂಡವಾಳ ಶಾಹಿ ಜಗತ್ತು ಆತಾರ್ಕಿಕವಾಗಿಯೆ ತನ್ನ ಸುತ್ತಮುತ್ತಲಿನ ಸಮಾಜವನ್ನು ನೋಡುತ್ತದೆ. ಬಂಡವಾಳವಿಲ್ಲದ ಜಗತ್ತಿಲ್ಲ. ಯಜಮಾನಿಕೆಯಿಲ್ಲದ ದುಡಿಮೆಯಿಲ್ಲ. ಆದರೆ ಇದೆಲ್ಲವೂ ಸಮಾಜದ ಒಳಗಿನ ಚಕ್ರದಂತೆ. ಒಂದನ್ನು ಬಿಟ್ಟು ಇನ್ನೊಂದು ಇರಲಾರದು. ಪ್ರತಿಯೊಂದು ಅನಿವಾರ್ಯ, ಮತ್ತು ಅವಶ್ಯಕ. ಆದರೂ ಯಜಮಾನಿಕೆಯು ಇದನ್ನು ಹೊರತಾಗಿ ಯೋಚಿಸುವುದು ಅಪಾಯಕಾರಿಯಾಗಿದೆ. ಇದಕ್ಕೆ ಕಮ್ಯೂನಿಸಂ ಯೋಚನೆಯು ಪರ್ಯಾಯ ಮಾರ್ಗವೆಂದು ಹೇಳುವುದು ಸೂಕ್ತವಲ್ಲ. ದುಡಿಮೆ ವರ್ಗವು ಪ್ರಧಾನವೆಂಬುದೂ ಭಾರತದಂತಹ ದೇಶಕ್ಕೆ ಪರ್ಯಾಯ ಕ್ರಮವಲ್ಲ. ಭಾರತದ ಪ್ರಜಾತಂತ್ರ ರಾಷ್ಟ್ರಕ್ಕೆ ಸಮಾಜವಾದಿ ಚಿಂತನೆಯ ಬಂಡವಾಳ ಹೂಡಿಕೆಗಳು ಆರ್ಥಿಕ ಬೆಳವಣಿಗೆಗೆ ಉತ್ತಮ ಮಾರ್ಗವಾಗಿರುತ್ತವೆಂಬುದನ್ನು ಇಲ್ಲಿನ ಕತೆಗಳಲ್ಲಿ ಗುರುತಿಸಬಹುದಾಗಿದೆ.

* * * * *

## ಅನುಬಂಧ ೧ : ಆಕರಗಳು


೧. ಅನಂತಮೂರ್ತಿ ಯು.ಆರ್. ಐದು ದಶಕದ ಕಥೆಗಳು, -೧೯೫೫ ರಿಂದ ೨೦೦೧ ರವರೆಗಿನ ಎಲ್ಲ ಕಥೆಗಳು, (ಸಮಗ್ರ ಕಥಾ ಸಂಕಲನ), ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ೨೦೦೧.

೨. ಪೂರ್ಣಚಂದ್ರ ತೇಜಸ್ವಿ, ಅಬಚೂರಿನ ಪೋಸ್ಟಾಫೀಸು, (ಕಥಾ ಸಂಕಲನ), ೧೯೭೩, ಪುಸ್ತಕ ಪ್ರಕಾಶನ, ಮೈಸೂರು, ೨೦೧೫,(೧೫ನೇ ಆವೃತ್ತಿ)

೩. ಪೂರ್ಣಚಂದ್ರ ತೇಜಸ್ವಿ, ಕಿರಗೂರಿನ ಗಯ್ಯಾಳಿಗಳು, (ಕಥಾ ಸಂಕಲನ), ೧೯೯೧, ಪುಸ್ತಕ ಪ್ರಕಾಶನ, ಮೈಸೂರು, ೨೦೦೫(೯ನೇ ಆವೃತ್ತಿ)

೪. ಪೂರ್ಣಚಂದ್ರ ತೇಜಸ್ವಿ, ಪಾಕಕ್ರಾಂತಿ ಮತ್ತು ಇತರ ಕತೆಗಳು, (ಕಥಾ ಸಂಕಲನ), ೨೦೦೮, ಪುಸ್ತಕ ಪ್ರಕಾಶನ,ಮೈಸೂರು, ೨೦೧೬(೬ನೇ ಆವೃತ್ತಿ).

೫. ಪೂರ್ಣಚಂದ್ರ ತೇಜಸ್ವಿ, ಹುಲಿಯೂರಿನ ಸರಹದ್ದು, (ಕಥಾ ಸಂಕಲನ), ೧೯೬೨, ಪುಸ್ತಕ ಪ್ರಕಾಶನ, ಮೈಸೂರು, ೨೦೧೬, (೧೨ನೇ ಆವೃತ್ತಿ)

೬. ಲಂಕೇಶ್ ಪಿ. ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ, (ಕಥಾ ಸಂಕಲನ), ೧೯೭೩, ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೦೭.

೭. ಲಂಕೇಶ್ ಪಿ. ಉಲ್ಲಂಘನೆ, (ಕಥಾ ಸಂಕಲನ), ೧೯೯೬, ಲಂಕೇಶ್ ಪ್ರಕಾಶನ, ಬೆಂಗಳೂರು,೨೦೧೩(೫ನೇ ಆವೃತ್ತಿ)

೮. ಲಂಕೇಶ್ ಪಿ. ಕಲ್ಲು ಕರಗುವ ಸಮಯ, (ಕಥಾ ಸಂಕಲನ), ೧೯೯೦, ಲಂಕೇಶ್ ಪ್ರಕಾಶನ, ಬೆಂಗಳೂರು,೨೦೧೦(೬ನೇ ಆವೃತ್ತಿ)

೯. ಲಂಕೇಶ್ ಪಿ. ಕೆರೆಯ ನೀರನು ಕೆರೆಗೆ ಚೆಲ್ಲಿ, (ಕಥಾ ಸಂಕಲನ), ೧೯೬೩, ಲಂಕೇಶ್ ಪ್ರಕಾಶನ, ಬೆಂಗಳೂರು,೨೦೧೧.

೧೦. ಲಂಕೇಶ್ ಪಿ. ನಾನಲ್ಲ, (ಕಥಾ ಸಂಕಲನ), ೧೯೭೦, ಲಂಕೇಶ್ ಪ್ರಕಾಶನ, ಬೆಂಗಳೂರು,೨೦೧೧.

೧೧. ಲಂಕೇಶ್ ಪಿ. ಮಂಜು ಕವಿದ ಸಂಜೆ, (ಕಥಾ ಸಂಕಲನ), ೨೦೦೧, ಲಂಕೇಶ್ ಪ್ರಕಾಶನ, ಬೆಂಗಳೂರು,೨೦೧೫(೨ನೇ ಆವೃತ್ತಿ).


-----

## ಅನುಬಂಧ ೨ : ಪರಾಮರ್ಶನ ಗ್ರಂಥಗಳು.


೧. ಅಗ್ರಹಾರ ಕೃಷ್ಣಮೂರ್ತಿ, (ಸಂ) ಸಂಸ್ಕೃತಿ ಕಥನ: ಡಿ.ಆರ್. ನಾಗರಾಜರವರ ಲೇಖನಗಳು, ಸ್ವಪ್ನ ಬುಕ್ ಹೌಸ್, ಬೆಂಗಳೂರು, ಪ್ರ ೨೦೦೨, ೨೦೦೮.

೨. ಅನಂತಮೂರ್ತಿ ಯು.ಆರ್, ಆಚೀಚೆ, ಅಭಿನವ ಪ್ರಕಾಶನ, ಬೆಂಗಳೂರು, ೨೦೧೧.

೩. ಅನಂತಮೂರ್ತಿ ಯು.ಆರ್, ಅಂದಿನಿಂದ ಇಂದಿನವರೆಗೆ, ಅಂಕಿತ ಪ್ರಕಾಶನ, ಬೆಂಗಳೂರು, ೨೦೧೨.

೪. ಅನಂತಮೂರ್ತಿ ಯು.ಆರ್, ಋಜುವಾತು, ಅಂಕಿತ ಪ್ರಕಾಶನ, ಬೆಂಗಳೂರು, ೨೦೦೭.

೫. ಅನಂತಮೂರ್ತಿ ಯು.ಆರ್, ಪೂರ್ವಾಪರ, ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೦

೬. ಅನಂತಮೂರ್ತಿ ಯು.ಆರ್, ಮಾತು ಸೋತ ಭಾರತ, ಅಭಿನವ ಪ್ರಕಾಶನ, ಬೆಂಗಳೂರು, ೨೦೦೭.

೭. ಅನಂತಮೂರ್ತಿ ಯು.ಆರ್, ಯುಗಪಲ್ಲಟ, ಅಭಿನವ ಪ್ರಕಾಶನ, ಬೆಂಗಳೂರು, ೨೦೦೨.

೮. ಅಮರೇಶ ನುಗಡೋಣಿ, ಕಥಾ ಸಾಹಿತ್ಯ: ಸಾಮಾಜಿಕ ವಾಸ್ತವ, ವಿಜಯ ಕಲ್ಯಾಣ ಪ್ರಕಾಶನ, ಹೊಸಪೇಟೆ, ೨೦೧೬.

೯. ಅಮರೇಶ ನುಗಡೋಣಿ,(ಸಂ) ಕಥೆ ಹುಟ್ಟುವ ಪರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೧೪

೧೦. ಆಮೂರ ಜಿ.ಎಸ್. ಕನ್ನಡ ಕಥನ ಸಾಹಿತ್ಯ: ಸಣ್ಣಕತೆ, ೨೦೦೨, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೧೨(೨ನೇ ಆವೃತ್ತಿ)

೧೧. ಆಮೂರ ಜಿ.ಎಸ್. ಯು.ಆರ್.ಅನಂತಮೂರ್ತಿಯ ವೈಚಾರಿಕತೆ ಹಾಗೂ ಸಾಹಿತ್ಯ, ಮನೋಹರ ಗ್ರಂಥ ಮಾಲಾ, ಧಾರವಾಡ, ೨೦೧೩.

೧೨ ಅಶೋಕ ಟಿ.ಪಿ., ಕಥನ ಪ್ರೀತಿ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೧೩.

೧೩. ಅಶೋಕ ಟಿ.ಪಿ., ತೇಜಸ್ವಿ ಕಥನ, ೨೦೦೪ ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೧೫(೩ನೇ ಆವೃತ್ತಿ)

೧೪. ಅಶೋಕ ಟಿ.ಪಿ., ಯು.ಆರ್.ಅನಂತಮೂರ್ತಿ, ೨೦೦೧, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೭(೩ನೇ ಆವೃತ್ತಿ)

೧೫. ಅಹಿತಾನಲ (ನಾಗ ಐತಾಳ), ಅನಂತ ಮುಖದ ಮೂರ್ತಿ, ಸಾಹಿತ್ಯಾಂಜಲಿ, ಕ್ಯಾಲಿಫೋರ್ನಿಯಾ ಮತ್ತು ಅಭಿನವ ಪ್ರಕಾಶನ, ಬೆಂಗಳೂರು ೨೦೦೯.
೧೬. ಇಂದಿರಾ ಲಂಕೇಶ್, ಹುಳಿಮಾವು ಮತ್ತು ನಾನು, ಲಂಕೇಶ್ ಪ್ರಕಾಶನ, ಬೆಂಗಳೂರು ೨೦೧೩.
೧೭. ಊರು ಕಂಡಂತೆ ಅನಂತ....ಮೂರ್ತಿ., ಸೂರ್ಯ ಕುದುರೆ ಪ್ರಕಾಶನ, ತೀರ್ಥಹಳ್ಳಿ, ೨೦೧೬.
೧೮. ಕರೀಗೌಡ ಬೀಚನಹಳ್ಳಿ, ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಬದುಕು-ಬರಹ, ಸಾಹಿತ್ಯ ಅಕಾಡೆಮಿ, ನವದೆಹಲಿ, ೨೦೧೦.
೧೯. ಕರೀಗೌಡ ಬೀಚನಹಳ್ಳಿ, ತೇಜಸ್ವಿ ಕಥೆಗಳ ಕುರಿತು,೨೦೦೦ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೭(೨ನೇ ಆವೃತ್ತಿ)
೨೦. ಕರೀಗೌಡ ಬೀಚನಹಳ್ಳಿ, ಸಂಕಥನ, ಅಜಂತ ಪ್ರಕಾಶನ, ಬೆಂಗಳೂರು, ೨೦೦೦.
೨೧. ಕೀರ್ತಿನಾಥ ಕುರ್ತುಕೋಟಿ, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಕುರ್ತುಕೋಟಿ ಮೆಮೋರಿಯಲ್ ಟ್ರಸ್ಟ್, ಧಾರವಾಡ, ೨೦೧೬(೧೬ನೇ ಆವೃತ್ತಿ)
೨೨. ಕೀರ್ತಿ ಕೋಲ್ಗಾರ್ (ಸಂ), ತೇಜಸ್ವಿ ಬದುಕಿದ್ದಾರೆ, ಅಭಿರುಚಿ ಪ್ರಕಾಶನ, ಮೈಸೂರು, ೨೦೧೩.
೨೩. ಗೌರಿ ಸುಂದರ್ (ಸಂ), ಸಾಹಿತ್ಯ ದರ್ಶನ, ಸುಂದರ ಪ್ರಕಾಶನ, ಬೆಂಗಳೂರು,೨೦೧೨
೨೪. ಚಂದ್ರ ಪೂಜಾರಿ ಎಂ. ಸಂಶೋಧನೆ ಏನು? ಏಕೆ? ಹೇಗೆ?, ೨೦೦೯ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧(೨ನೇ ಆವೃತ್ತಿ)
೨೫. ಜವರೇಗೌಡ ದೇ. ಜಾನಪದ ಅಧ್ಯಯನ, (ಮಹಾ ಸಂಪುಟದ ಒಂದು ಭಾಗ), ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೨೦೧೫(ನಾಲ್ಕನೇ ವಿಸ್ತೃತ ಮುದ್ರಣ).
೨೬. ತೇಜಶ್ರೀ ಜ.ನಾ. (ನಿರೂಪಣೆ ಮತ್ತು ಸಂಯೋಜನೆ), ಸುರಗಿ, ( ಆತ್ಮಕಥನ, ಯು.ಆರ್. ಅನಂತಮೂರ್ತಿ), ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.೨೦೧೨.
೨೭. ದಂಡಪ್ಪ ಎಚ್, ಸುಮಿತ್ರಬಾಯಿ ಬಿ.ಎನ್. (ಸಂ), ಸುವರ್ಣ ಸಾಹಿತ್ಯ ವಿಮರ್ಶೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.
೨೮. ದೊಡ್ಡೇಗೌಡ ಆರ್, ತೇಜಸ್ವಿಯನ್ನು ಹುಡುಕುತ್ತಾ, ಸ್ವಪ್ನ ಬುಕ್ ಹೌಸ್, ಬೆಂಗಳೂರು ೨೦೧೫.
೨೯. ನಟರಾಜ್ ಹುಳಿಯಾರ್, ಇಂತಿ ನಮಸ್ಕಾರಗಳು, ಪಲ್ಲವ ಪ್ರಕಾಶನ, ಬಳ್ಳಾರಿ, ೨೦೧೪.
೩೦. ನಾಗತಿಹಳ್ಳಿ ಚಂದ್ರಶೇಖರ್, ರೆಕ್ಕೆ ಬೇರು, ಅಭಿವ್ಯಕ್ತಿ ಸಾಂಸ್ಕೃತಿಕ ವೇದಿಕೆ, ಬೆಂಗಳೂರು ೨೦೧೪.

೩೧. ನಾಗಭೂಷಣ ಡಿ.ಎಸ್. ಲೋಹಿಯಾ ಜೊತೆಯಲ್ಲಿ, ಗೀತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ, ೨೦೧೪.

೩೨. ನಾಗಭೂಷಣ ಬಗ್ಗನಡು, (ಸಂ), ಲಂಕೇಶ್ ಒಂದು ನೆನೆಪು, ಶ್ರೀ ಅನ್ನಪೂರ್ಣ ಪಬ್ಲಿಷರ್ಸ್ ಅಂಡ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು ಗ್ರಾ, ೨೦೧೪.

೩೩. ನಾಗರಾಜ್ ಡಿ.ಅರ್. ಅಮೃತ ಮತ್ತು ಗರುಡ, ೧೯೮೩, ಅಕ್ಷರ ಪ್ರಕಾಶನ, ಹಗ್ಗೋಡು, ೨೦೦೯(ಪುನರ್ ಆವೃತ್ತಿ)

೩೪. ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಅಣ್ಣನ ನೆನಪು, ೧೯೯೬, ಪುಸ್ತಕ ಪ್ರಕಾಶನ, ಮೈಸೂರು, ೧೧೯೬(೨ನೇ ಆವೃತ್ತಿ)

೩೫. ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಪರಿಸರದ ಕತೆ, ೧೯೯೧, ಪುಸ್ತಕ ಪ್ರಕಾಶನ, ಮೈಸೂರು, ೨೦೧೬(೨೮ನೇ ಆವೃತ್ತಿ).

೩೬. ಪೂರ್ಣಚಂದ್ರ ತೇಜಸ್ವಿ ಕೆ.ಪಿ., ವಿಮರ್ಶೆಯ ವಿಮರ್ಶೆ, ೨೦೦೯ ಪುಸ್ತಕ ಪ್ರಕಾಶನ, ಮೈಸೂರು, ೨೦೧೩(೩ನೇ ಆವೃತ್ತಿ).

೩೭. ಪೂರ್ಣಚಂದ್ರ ತೇಜಸ್ವಿ ಕೆ.ಪಿ., ಹೊಸ ವಿಚಾರಗಳು, ಪುಸ್ತಕ ಪ್ರಕಾಶನ,ಮೈಸೂರು, ೨೦೧೨.

೩೮. ಪ್ರಶಾಂತ್ ಎಚ್. ಡಿ. ಮತ್ತು ಇತರರು (ಅನು) ಸಾಮಾಜಿಕ ಆಕಾರ ರೇಖೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫.

೩೯. ಪ್ರಸಾದ್ ರಕ್ಷಿದಿ, ನಮ್ಮ ನಡುವಿನ ತೇಜಸ್ವಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೪೦. ಬಪ್ಪನಾಡು ರಾಘವ, ಯು.ಆರ್. ಅನಂತಮೂರ್ತಿ,೨೦೦೧ ವಸಂತ ಪ್ರಕಾಶನ, ಬೆಂಗಳೂರು, ೨೦೧೧(೨ನೇ ಮುದ್ರಣ).

೪೧. ಭಟ್ಟ ಜಿ.ಎಸ್. (ಸಂ), ತೇಜಸ್ವಿಯವರ ಕೃತಿಗಳು, ತನುಮನ ಪ್ರಕಾಶನ, ಮೈಸೂರು, ೨೦೧೫.

೪೨. ಮಂಜಣ್ಣ ಸಿ. ಅಂಬೇಡ್ಕರ್ ಮತ್ತು ಸ್ವಾತಂತ್ರ್ಯೋತ್ತರ ಭಾರತ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪ್ರಥಮ ಮುದ್ರಣ ೨೦೧೧, ದ್ವಿತೀಯ ೨೦೧೭.

೪೩. ಮೊಗಳ್ಳಿ ಗಣೇಶ್, (ಸಂ), ಮತೀಯ ಭಯಾವತಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೪೪. ಮೋಹನ್‌ರಾವ್ ಬಿ., ರವೀಂದ್ರ ಕೊಪ್ಪರ್, ಭಾರತೀಯ ಗ್ರಾಮೀಣ ಸಮಾಜದ ಅಧ್ಯಯನ, ವಿಜಯ ಪಬ್ಲಿಕೇಷನ್ಸ್, ಗದಗ, ೧೯೯೦.

೪೫. ರಹಮತ್ ತರೀಕರೆ, ಮರದೊಳಗಣ ಕಿಚ್ಚು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬.

೪೬. ರಹಮತ್ ತರೀಕೆರೆ, ಸಂಶೋಧನ ಮೀಮಾಂಸೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪.
೪೭. ರಾಜೇಶ್ವರಿ ಆರ್, ನನ್ನ ತೇಜಸ್ವಿ, ಪುಸ್ತಕ ಪ್ರಕಾಶನ, ಮೈಸೂರು, ೨೦೧೧
೪೮. ರಾಮಚಂದ್ರನ್ ಸಿ.ಎನ್. ಅಖ್ಯಾನ ವ್ಯಾಖ್ಯಾನ,೨೦೧೧ ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೭(೨ನೇ ಆವೃತ್ತಿ).
೪೯. ಲಂಕೇಶ್ ಪಿ., ಕಂಡದ್ದು ಕಂಡಹಾಗೆ, ೧೯೭೫ ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೧೧(೨ನೇ ಆವೃತ್ತಿ).
೫೦. ಲಂಕೇಶ್ ಪಿ., ಟೀಕೆ ಟಿಪ್ಪಣಿ ೧, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೭.
೫೧. ಲಂಕೇಶ್ ಪಿ., ಟೀಕೆ ಟಿಪ್ಪಣಿ ೨, ಪತ್ರಿಕಾ ಪ್ರಕಾಶನ, ಬೆಂಗಳೂರು, ೧೯೯೮.
೫೨. ಲಂಕೇಶ್ ಪಿ., ಟೀಕೆ ಟಿಪ್ಪಣಿ ೩, ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೦೮,
೫೩. ಲಂಕೇಶ್ ಪಿ., ಸಾಹಿತಿ ಸಾಹಿತ್ಯ ವಿಮರ್ಶೆ, ೨೦೦೮, ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೧೦(೨ನೇ ಆವೃತ್ತಿ).
೫೪. ಲಂಕೇಶ್ ಪಿ., ಹುಳಿಮಾವಿನಮರ, ಲಂಕೇಶ್ ಪ್ರಕಾಶನ, ಬೆಂಗಳೂರು, ೧೯೯೭.
೫೫. ವೀರೇಶ ಬಡಿಗೇರ., ಎಲ್.ಜಿ.ಹಾವನೂರು ವರದಿ ಮತ್ತು ಪ್ರಸ್ತುತ ಕರ್ನಾಟಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೯.
೫೬. ಶಂಕರರಾವ್ ಚ.ನ. ಭಾರತೀಯ ಸಮಾಜ, ೧೯೯೧,ಜೈಭಾರತ ಪ್ರಕಾಶನ, ಮಂಗಳೂರು, ೧೯೯೭(೪ನೇ ಆವೃತ್ತಿ).
೫೭. ಶಿವಕುಮಾರ್ ಎಚ್, ಲಂಕೇಶ್‌ರ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ- ಒಂದು ಅಧ್ಯಯನ, ಕಣ್ವ ಪಬ್ಲಿಕೇಷನ್, ಬೆಂಗಳೂರು ೨೦೧೩.
೫೮. ಶ್ರೀಮತಿ ಎಚ್.ಎಸ್. (ಅನು), ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.
೫೯. ಸಾಂಸ್ಕೃತಿಕ ಅಧ್ಯಯನ, ೨೦೦೪, ಕರ್ನಾಟಕ ಸಾಹಿತ್ಯ ಆಕಾಡೆಮಿ, ಬೆಂಗಳೂರು, ೨೦೦೮(೨ನೇ ಆವೃತ್ತಿ)..
೬೦. ಸುಮತೀಂದ್ರ ನಾಡಿಗ, ವಿಮರ್ಶೆದಾರಿಯಲ್ಲಿ, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೯೪.

**ಬಿಡಿ ಲೇಖನಗಳು.**

೬೧. ನಾಗರಾಜ್ ಡಿ.ಆರ್. ಕನ್ನಡ ಸಂವರ್ಧನೆ, ಸಾಹಿತ್ಯ ಚಂದನ, ದ್ವಿತೀಯ ಪಿಯುಸಿ ಪಠ್ಯ.
೬೨. ಮಮತಾ ಜಿ. ಸಾಗರ. ಸಾಹಿತ್ಯ ಪುರವಣಿ, ಪ್ರಜಾವಾಣಿ ಪತ್ರಿಕೆ ೧.೪.೨೦೧೨.

* * * * * * *